# ಚಾಣಕ್ಯ ವಚನ

ಪ್ರೊ|| ಜಿ. ಜಿ. ಜೋಶಿ

ಚತುರ್ವಿಧ ಪುರುಷಾರ್ಥಗಳನ್ನು ಅರ್ಥವತ್ತಾಗಿ
ಬಹಿರಂಗಪಡಿಸುವ ಧೀಮಂತ 'ಚಾಣಕ್ಯಸೂತ್ರಗಳ'
ವಿವರಣಾತ್ಮಕ ಪರಾಮರ್ಶೆ



ಅವ್ಯಾಜ ಶಿಷ್ಯವಾತ್ಸಲ್ಯದಿಂದ,
ನನ್ನ ವಿದ್ಯಾಭ್ಯಾಸವು ಪೂರ್ತಿಯಾಗಲೆಂದು
ಎಲ್ಲ ವಿಧದಿಂದ ಅನುಗ್ರಹಿಸಿ,
ನನ್ನ ವ್ಯಕ್ತಿತ್ವ ಹಾಗು ಜೀವನವಿಕಾಸಕ್ಕಾಗಿ ಆಶೀರ್ವದಿಸಿದ
ನನ್ನ ಪೂಜ್ಯಗುರುಗಳಾದ,
ಬೆಳಗಾಂವಿ ಲಿಂಗರಾಜ ಮಹಾವಿದ್ಯಾಲಯದ
ನಿವೃತ್ತ ಸಂಸ್ಕೃತ ವಿಭಾಗಾಧ್ಯಕ್ಷರೂ ಹಾಗು ಪ್ರಾಧ್ಯಾಪಕರೂ ಆದ

**ಪ್ರೊ. ಎಸ್. ವ್ಹಿ. ದೀಕ್ಷಿತ**

ಅವರಿಗೆ ಭಕ್ತಿಪೂರ್ವಕವಾಗಿ ಸಮರ್ಪಿತ

— ಜಿ. ಜಿ. ಜೋಶಿ

# ಚಾಣಕ್ಯ ದರ್ಶನ

( ೫೭೧ ಚಾಣಕ್ಯ ಸೂತ್ರಗಳಿಗೆ ಕನ್ನಡ ಭಾಷ್ಯ—ಮೂಲ ಸಹಿತ )

**ಪ್ರೊ. ಜಿ. ಜಿ. ಜೋಶಿ, ( ಗುಂಡೂಶಾಸ್ತ್ರಿ ),**
ಎಂ. ಎ., ಪಿಎಚ್. ಡಿ.

ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು, ಪ್ರಮುಖರು : ಸೋಮಯ್ಯ ಕಾಲೇಜ್, ಮುಂಬೈ
ಗೌರವ ಪ್ರಾಧ್ಯಾಪಕರು : ಸ್ನಾತಕೋತ್ತರ ಸಂಸ್ಕೃತ ವಿಭಾಗ, ಮುಂಬೈ ವಿಶ್ವವಿದ್ಯಾಲಯ



**ಸಮಾಜ ಪುಸ್ತಕಾಲಯ, ಧಾರವಾಡ-೫೮೦ ೦೦೧.**

ಪ್ರಕಾಶಕರು :
**ಮನೋಹರ ಘಾಣೇಕರ,**
ಬಿ. ಎ., ಬಿ.ಕಾಂ.
ಸಮಾಜ ಪುಸ್ತಕಾಲಯ,
ಶಿವಾಜಿ ಬೀದಿ, ಧಾರವಾಡ-೧
( Ph. 391616 )

ಪ್ರಥಮ ಮುದ್ರಣ : ೧೯೯೭



ವಿತರಣೆ :
**ಸಮಾಜ ಪುಸ್ತಕಾಲಯ**
ಶಿವಾಜಿ ಬೀದಿ, ಧಾರವಾಡ
ಶಾಖೆಗಳು :
ಸುಭಾಸ ಬೀದಿ, ಧಾರವಾಡ
ಕೊಪ್ಪೀಕರ ಬೀದಿ, ಹುಬ್ಬಳ್ಳಿ

ISBN 81 7627-001-6

ಮುದ್ರಕರು :
**ರವೀಂದ್ರ ಘಾಣೇಕರ,**
ಬಿ. ಎ., ಎಲ್. ಎಲ್.ಬಿ.
ಪ್ರತಿಭಾ ಮುದ್ರಣ, ಧಾರವಾಡ-೧

# ಪೀಠಿಕೆ

ಭಾರತದಲ್ಲಿ ಮೊಟ್ಟಮೊದಲಿನದೆನ್ನಬಹುದಾದ ಮೌರ್ಯಸಾಮ್ರಾಜ್ಯ-ವನ್ನು ಸ್ಥಾಪಿಸಿದ ಕೀರ್ತಿಯು ಚಾಣಕ್ಯ, ಕೌಟಿಲ್ಯ ಹಾಗು ವಿಷ್ಣುಗುಪ್ತ ಎಂಬ ಮೂರು ಹೆಸರುಗಳಿಂದ ಪ್ರಸಿದ್ಧನಾದ ಅದ್ಭುತ ವ್ಯಕ್ತಿಗೆ ಸಲ್ಲುತ್ತದೆ. ಇವನ ಮೇರುಕೃತಿಯಾದ ಅರ್ಥಶಾಸ್ತ್ರವು ಇಲ್ಲಿಯ ವರೆಗೆ ಪಂಡಿತರ ಸೊತ್ತಾಗಿಯೇ ಉಳಿದದ್ದರಿಂದ, ಸಾಮಾನ್ಯ ಓದುಗರನ್ನು ಅದು ತಲುಪಲಿ ಎಂಬ ಏಕಮಾತ್ರ ಉದ್ದೇಶದಿಂದ, ಈಗ ಮೂರು ವರ್ಷಗಳ ಹಿಂದೆ ನಾನು 'ಕೌಟಿಲ್ಯನ ರಾಜ್ಯಪದ್ಧತಿಯ ಸಮೀಕ್ಷೆ' ಎಂಬ ಗ್ರಂಥವನ್ನು ಬರೆದು ಪ್ರಕಟಿಸಿದೆ. ಅದನ್ನು ವಿಮರ್ಶಕರು. 'ಕನ್ನಡ ಭಾಷಾ ಸರಸ್ವತಿಗೆ ಇದೊಂದು ಅಪೂರ್ವ ಕಾಣಿಕೆ ಹಾಗು ಹತ್ತೊಂಬತ್ತನೂರಾ ತೊಂಬತ್ತೊಂದ-ರಲ್ಲಿ ಪ್ರಕಟವಾದ ಉತ್ತಮ ಕನ್ನಡ ಕೃತಿಗಳಲ್ಲಿ ಒಂದು' ಎಂದು ಪ್ರಶಂಸಿಸಿದ್ದರಿಂದ. ಪ್ರೋತ್ಸಾಹಿತನಾಗಿ, ಇಂಗ್ಲೀಷ್ ಭಾಷೆಯಲ್ಲಿ ತರ್ಜುಮೆ ಮಾಡಿ, ಈಗ ಎರಡು ವರ್ಷಗಳ ಹಿಂದೆ ನಾನೇ 'A critical exposition of Koutilya's Polity or Chanakya Rajyaniti' ಎಂಬ ಹೆಸರಿನಿಂದ ಪ್ರಕಾಶನಗೊಳಿಸಿದ್ದೇನೆ.

ಅರ್ಥಶಾಸ್ತ್ರದಲ್ಲಿ ಕೌಟಿಲ್ಯನು ಚತುರ್ವಿಧ ಪುರುಷಾರ್ಥಗಳಲ್ಲಿಯ ಅರ್ಥವನ್ನೇ ಪ್ರಧಾನವಾಗಿಟ್ಟುಕೊಂಡು, ಧರ್ಮ ಹಾಗು ಕಾಮಗಳ ವಿಷಯ-ವಾಗಿ ಅಲ್ಲಲ್ಲಿ ಚರ್ಚಿಸಿದ್ದಾನೆ. ಆದರೆ ಅರ್ಥಶಾಸ್ತ್ರದ ಹಲವು ಮುದ್ರಿತ ಪ್ರತಿಗಳಲ್ಲಿ ಚಾಣಕ್ಯನವೆಂದೆನ್ನಬಹುದಾದ ಸುಮಾರು ೫೭೧ ಸೂತ್ರಗಳಿವೆ. ಇವುಗಳಲ್ಲಿ ಹಲವು ನಾಣ್ಣುಡಿಗಳಂತೆ ತೋರಿದರೆ, ಇನ್ನು ಕೆಲವು ಪ್ರಗಾಢ ಚರ್ಚೆಗೆ ಆಸ್ಪದವನ್ನು ಕೊಡುತ್ತವೆ. ಇವುಗಳ ವೈಶಿಷ್ಟ್ಯವೆಂದರೆ, ಕೇವಲ

ಅರ್ಥವನ್ನಷ್ಟೇ ಚರ್ಚಿಸದೆ, ಧರ್ಮ, ಕಾಮ ಹಾಗು ಮೋಕ್ಷಗಳ ವಿಷಯ-
ವಾಗಿಯೂ ಸಾಕಷ್ಟು ವಿವರಣೆ ಇದೆ.

ಈ ಸೂತ್ರಗಳಲ್ಲಿ ಹಲವು, ಅರ್ಥಶಾಸ್ತ್ರದಲ್ಲಿ ಉಲ್ಲೇಖಿಸಲ್ಪಟ್ಟಿವೆ.
ಇನ್ನು ಕೆಲವು ಕೌಟಿಲ್ಯನಿಂದ ಪ್ರಸಂಗಾನುಸಾರವಾಗಿ ಹೇಳಲ್ಪಟ್ಟವನ್ನು
ಯಾರೋ ಪುಣ್ಯಾತ್ಮರು ಸಂಗ್ರಹಿಸಿ ಇಟ್ಟಂತೆ ತೋರುತ್ತದೆ.

ಈಗಿದ್ದ ಪರಿಸ್ಥಿತಿಯಲ್ಲಿ ಅವುಗಳಲ್ಲಿ ವಿಷಯಕ್ಕನುಸಾರವಾಗಿ ಹೊಂದಾ-
ಣಿಕೆ ಇಲ್ಲ. ಆದ್ದರಿಂದ ಅವುಗಳನ್ನು ಶಕ್ಯವಿದ್ದ ಮಟ್ಟಿಗೆ ಹೊಂದಿಸಿ,
ವಿವರಣೆಯನ್ನು ಕೊಡಲಾಗಿದೆ. ಇಷ್ಟಾದರೂ ಒಂದೇ ವಿಚಾರವು ಎರಡು–
ಮೂರು ಕಡೆಗಳಲ್ಲಿ ಸಂದರ್ಭಾನುಸಾರವಾಗಿ ಬಂದಿರಲು ಸಾಕು.

ವಿದ್ವಾಂಸರು, "Chanakya was the epitome of wisdom
and the fountain head of all knowledge" ಎಂಬ ಶಬ್ದಗಳಲ್ಲಿ
ಅವನ ಸರ್ವಜ್ಞತ್ವವನ್ನು ಹೊಗಳಿದ್ದಾರೆ. ಪ್ರಸ್ತುತ ಸೂತ್ರಗಳು ಈ ಅಭಿ-
ಪ್ರಾಯವನ್ನು ದೃಢಪಡಿಸುತ್ತವೆ.

ಚತುರ್ವಿಧ ಪುರುಷಾರ್ಥಗಳ ಚರ್ಚೆಯಂತೂ ಸರಿಯೇ. ಆದರೆ
ವಿಶೇಷವಾಗಿ ಹೇಳುವುದೆಂದರೆ, ಲೋಕವ್ಯವಹಾರ, ಸಜ್ಜನರು, ದುರ್ಜನರು
ಹಾಗು ಮೂರ್ಖರ ಲಕ್ಷಣ. ರಾಜಕಾರಣ, ಆರೋಗ್ಯಭಾಗ್ಯ, ದಾಂಪತ್ಯ
ಜೀವನ, ಪುತ್ರಜನ್ಮದ ಮಹತ್ವ, ಮನುಷ್ಯನ ವಾಸ್ತವ್ಯಕ್ಕೆ ಯೋಗ್ಯವಾದ
ದೇಶ, ಜೀವನದಲ್ಲಿ ಹಣದ ಸ್ಥಾನ, ವಿದ್ಯಾಬುದ್ಧಿ, ವಿವೇಕ, ವಿನಯ,
ಪುಣ್ಯ–ಪಾಪ, ಕರ್ಮ–ಜ್ಞಾನ–ಭಕ್ತಿ, ಶಾಸ್ತ್ರಪ್ರಮಾಣ, ರೂಢಿ, ದೈವ
ಹಾಗು ಪುರುಷಪ್ರಯತ್ನ, ಮ್ಲೇಚ್ಛರ ಸಂಸ್ಕೃತಿ ಹಾಗು ಭಾಷೆ—ಇತ್ಯಾದಿ
ಅನೇಕಾನೇಕ ವಿಷಯಗಳಿಗೆ ಸಂಬಂಧಪಟ್ಟ ವಿಚಾರಗಳು ಈ ಸೂತ್ರಗಳಲ್ಲಿ
ಬಂದಿವೆ.

ಸೂತ್ರಗಳ ವಿವರಣೆಯು ಸಾಮಾನ್ಯವಾಗಿ ಸಂಕ್ಷೇಪವಾಗಿದ್ದರೂ,
ವ್ಯಾಪಕವಾಗಿರಬೇಕೆಂಬುದು ನಿಯಮ. ಇದಕ್ಕನುಗುಣವಾಗಿ ಈ ಸೂತ್ರ-

ಗಳನ್ನು ವ್ಯಾಖ್ಯಾನಿಸಲಾಗಿದೆ. ಪ್ರಾಮುಖ್ಯವಾಗಿ ಜನಸಾಮಾನ್ಯರಿಗಾಗಿ ಈ ವಿವರಣೆಯನ್ನು ಕೊಡಲಾಗಿದ್ದರಿಂದ, ಅತಿ ಗಹನವಾದ ಚರ್ಚೆಯ ಗೋಜಿಗೆ ಹೋಗಿಲ್ಲ. ಚಾಣಕ್ಯನ ವಿಶ್ವತೋಮುಖವಾದ ಪ್ರತಿಭೆಯ ಪರಿಚಯ ಕನ್ನಡ ಬಾಂಧವರಿಗೆಲ್ಲ ಆಗಬೇಕೆಂಬ ಉದ್ದೇಶದಿಂದ ಈ ಕಾರ್ಯವನ್ನು ಕೈಕೊಳ್ಳಲಾಗಿದೆ.

ಜನರು ಸಾಮಾನ್ಯವಾಗಿ ತಿಳಿದುಕೊಂಡಂತೆ ಚಾಣಕ್ಯನು ಕ್ರೂರನೇ ಆಗಲಿ ಅಥವಾ ದುಷ್ಟ ಕುತಂತ್ರಿಯೇ ಆಗಲಿ ಆಗಿರದೆ, ಅವನೊಬ್ಬ ಅಸಾಮಾನ್ಯ ಮೇಧಾವಿ. ಲೋಕಕಲ್ಯಾಣಕ್ಕಾಗಿಯೇ ಕಟಿಬದ್ಧನಾದ ನಿಃಸ್ವಾರ್ಥ ದೇಶಪ್ರೇಮಿ ಹಾಗು ಸನಾತನ ಧರ್ಮಾಭಿಮಾನಿ. ಕುಟಿಲವೆಂದೆನಿಸಬಹುದಾದ ಹಲವು ವಿಚಾರಗಳು, ರಾಜಕಾರಣವನ್ನು ಬೋಧಿಸುವಾಗ ಬಂದಿದ್ದರೂ, ಅವುಗಳನ್ನು ' End justifies the means 'ಎಂಬ ತತ್ವಕ್ಕನುಗುಣವಾಗಿ ಅನಿವಾರ್ಯ ಪ್ರಸಂಗಗಳಲ್ಲಿ ದೇಶದ ಸಂರಕ್ಷಣೆಗಾಗಿ ಉಪಯೋಗಿಸತಕ್ಕವು ಎಂಬುದನ್ನು ಮರೆಯಲಾಗದು. ವಿಧಿನಿಯಮಗಳಲ್ಲ, ಆದರೆ ಅಪವಾದಗಳು. ಈ ವಿಷಯವನ್ನೆಲ್ಲ ಕೂಲಂಕಷವಾಗಿ ನನ್ನ ಸಮೀಕ್ಷಾ ಗ್ರಂಥದಲ್ಲಿ ಕೊನೆಯ ಪ್ರಕರಣದಲ್ಲಿ ಚರ್ಚಿಸಿದ್ದೇನೆ.

ಚಾಣಕ್ಯನು ಕೇವಲ ರಾಜಕಾರಣಿಯಷ್ಟೇ ಅಲ್ಲ, ತತ್ವಜ್ಞಾನಿ ಹಾಗು ಸರ್ವಶಾಸ್ತ್ರ ವಿಶಾರದನಾದ ಪಂಡಿತೋತ್ತಮನೆಂಬುವನ್ನು ಈ ಸೂತ್ರಗಳು ಸಿದ್ಧಪಡಿಸುತ್ತವೆ. ಲೌಕಿಕ ಹಾಗು ಪಾರಮಾರ್ಥಿಕವೆರಡನ್ನೂ ಬೋಧಿಸುವ ಚಾಣಕ್ಯನ ಅಸಾಮಾನ್ಯ ವ್ಯಕ್ತಿತ್ವವನ್ನು. ಓದುಗರು ಈ ಸೂತ್ರಗಳ ವ್ಯಾಖ್ಯಾನವನ್ನು ಓದಿ. ಗ್ರಹಿಸಿದರೆ ನನ್ನ ಪ್ರಯತ್ನವು ಸಾರ್ಥಕವಾಯಿತೆಂದು ನಂಬುತ್ತೇನೆ. ಈಗಾಗಲೇ ಪ್ರಕಟಿಸಿದ ಸಮೀಕ್ಷಾಗ್ರಂಥ ಹಾಗು ಈ ಸೂತ್ರಗಳ ವ್ಯಾಖ್ಯಾನವು ಚಾಣಕ್ಯನ ವಿಚಾರಗಳ ಸಂಪೂರ್ಣ ಸುದೀರ್ಘವಲ್ಲದಿದ್ದರೂ, ಸಾಕಷ್ಟು ಸ್ಪಷ್ಟವಾದ ಚಿತ್ರವನ್ನು ಓದುಗರ ಮುಂದೆ ಇಡುತ್ತವೆ.

ಎಂದಿನಂತ ಈ ಪುಸ್ತಕದ ಹಸ್ತಪ್ರತಿಯನ್ನು ಅವಿಶ್ರಾಂತ ಪರಿಶ್ರಮದಿಂದ ನನಗಿಂತಲೂ ಹೆಚ್ಚಿನ ಉತ್ಸಾಹ ಹಾಗು ಹೊಣೆಗಾರಿಕೆಯಿಂದ ತಯಾ-

ರಿಸಿಕೊಟ್ಟ ನನ್ನ ಕಿರಿಯ ಮಿತ್ರರಾದ ಶ್ರೀ ವ್ಹಿ. ಬಿ. ಮುಧೋಳ ಅವರ ಸಹಕಾರವನ್ನು ಇಲ್ಲಿ ಸ್ಮರಿಸದೇ ಇರಲಾರೆ. ಸಮಾಜ ಪುಸ್ತಕಾಲಯ, ಧಾರವಾಡದ ಶ್ರೀ ಮನೋಹರ ಘಾಣೇಕರ ಅವರು, ಆಸ್ಥೆಯಿಂದ ಈ ಪುಸ್ತಕದ ಪ್ರಕಟಣೆಯ ಭಾರಹೊತ್ತು, ಕನ್ನಡಿಗರಿಗೆ ಅರ್ಪಿಸಿದ್ದಾರೆ. ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ಪ್ರೊ. ಜಿ. ಜಿ. (ಗುಂಡೂಶಾಸ್ತ್ರಿ) ಜೋಶಿ

ಚಿದಂಬರನಿವಾಸ, ಗೋಕಾಕ
೧೫–೯–೧೯೯೭

# ಲೇಖಕರ ಕಿರುಪರಿಚಯ

ಪಾಂಡಿತ್ಯಪೂರ್ಣ ಬುದ್ಧಿಜೀವಿಗಳು ದೊರೆಯುವುದು ದುರ್ಲಭ-ವಾದರೂ, ತಮ್ಮ ಪಾಂಡಿತ್ಯವನ್ನು ನಿರಪೇಕ್ಷ ಭಾವದಿಂದ ಲೋಕಸಂಗ್ರಹ-ಕ್ಕಾಗಿ ಸಮಾಜಸೇವೆಯ ರೂಪದಲ್ಲಿ ವಿನಿಯೋಗಿಸುವ ಜನರು ದೊರೆಯು-ವುದು ಅದಕ್ಕಿಂತಲೂ ದುರ್ಲಭವಾದುದು. ಗೋಕಾಕದ ಸಂಪ್ರದಾಯಸ್ಥ ಮನೆತನದಲ್ಲಿ ಜನಿಸಿದ ಪ್ರೊ. ಜಿ. ಜಿ. ಜೋಶಿ ( ಗುಂಡೂಶಾಸ್ತ್ರಿ )ಯವರು ಇಂತಹ ಅಪರೂಪದ ವ್ಯಕ್ತಿಗಳಲ್ಲಿ ಒಬ್ಬರು. ಇವರು ತಮ್ಮ ಪರಿಸರಕ್ಕನು-ಗುಣವಾಗಿ ಚಿಕ್ಕಂದಿನಲ್ಲಿಯೇ ವೇದ ಹಾಗು ಕರ್ಮಕಾಂಡದ ಅಧ್ಯಯನ-ವನ್ನು ತಮ್ಮ ತಂದೆಯವರ ಸಾನ್ನಿಧ್ಯದಲ್ಲಿ ಮಾಡಿ, ಜೊತೆಗೆ ಮ್ಯಾಟ್ರಿಕ್ ಪಾಸಾಗಿ ರೆವಿನ್ಯೂ ಖಾತೆಯಲ್ಲಿ ೧೨ ವರ್ಷ ಸೇವೆ ಸಲ್ಲಿಸಿದರು. ಈ ಅವಧಿ-ಯಲ್ಲಿಯೇ ಬೆಳಗಾಂವಿಯ ಲಿಂಗರಾಜ ಕಾಲೇಜಿನಿಂದ B. A. ( ಸಂಸ್ಕೃತ ) ಪ್ರಥಮ ವರ್ಗದಲ್ಲಿ ಪಾಸಾಗಿ ನೌಕರಿಗೆ ಶರಣುಹೊಡೆದು ಮುಂದೆ ಕರ್ನಾಟಕ ವಿಶ್ವವಿದ್ಯಾಲಯದಿಂದ ಸಂಸ್ಕೃತ M. A. ದಲ್ಲಿ ಪ್ರಥಮ ಸ್ಥಾನ-ವನ್ನು ಗಳಿಸಿದರು. ಜೊತೆಗೆ ಧಾರವಾಡದ ಶಂಕರಾಚಾರ್ಯ ಸಂಸ್ಕೃತ ಪಾಠ-ಶಾಲೆಯಲ್ಲಿ ಪಂಡಿತ ಪ್ರಕಾಂಡ ಭಾಲಚಂದ್ರ ಶಾಸ್ತ್ರಿಗಳಲ್ಲಿ ಶಾಸ್ತ್ರಾಧ್ಯಯನ ಮಾಡಿದರು. ಆಮೇಲೆ ಗದುಗಿನ ತೋಂಟದಾರ್ಯ ಕಾಲೇಜಿನಲ್ಲಿ ೫ ವರ್ಷ ಸಂಸ್ಕೃತ ಪ್ರಾಧ್ಯಾಪಕರಾಗಿ. ನಂತರ ಮುಂಬೈಯಲ್ಲಿಯ ಸೋಮಯ್ಯ ಕಾಲೇಜಿನಲ್ಲಿ ಸಂಸ್ಕೃತ ವಿಭಾಗಾಧ್ಯಕ್ಷರಾಗಿ ೨೩ ವರ್ಷ ಸೇವೆ ಸಲ್ಲಿಸಿದರು. ಅದೇ ಸಮಯದಲ್ಲಿ, ಮುಂಬೈ ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ವಿಭಾಗ-ದಲ್ಲಿ ಗೌರವ ಪ್ರಾಧ್ಯಾಪಕರೆಂದೂ ಕೆಲಸ ಮಾಡಿದರು.

ನಿವೃತ್ತಿಯ ನಂತರ ಈಗ ೬ ವರ್ಷಗಳಿಂದ ತಾವು ಗಳಿಸಿದ ವಿದ್ಯಾ-ಸಂಪತ್ತನ್ನು ಇತರರೊಂದಿಗೆ ಹಂಚಿಕೊಳ್ಳಬೇಕೆಂಬ ಉದ್ದೇಶದಿಂದ, ಗೋಕಾ-ಕದ ಶಂಕರಮಠದಲ್ಲಿ ಭಗವದ್ಗೀತೆ ಹಾಗು ಉಪನಿಷತ್ತುಗಳ ವಿಷಯವಾಗಿ ಪ್ರತಿ ಸೋಮವಾರ ಉಪನ್ಯಾಸ ನೀಡುತ್ತಲಿದ್ದಾರೆ. ಸಂಪ್ರದಾಯಕ್ಕೆ ಭಂಗ

ತರದೇ ಪ್ರಗತಿಶೀಲ ದೃಷ್ಟಿಕೋನವನ್ನು ಇಟ್ಟುಕೊಂಡ ಇವರು. ಪಂಡಿತ-ರಾದರೂ ಸರಳಜೀವಿಗಳು. ಇವರ ಸಂಸ್ಕೃತ ಪಾಂಡಿತ್ಯ ಹಾಗು ಸಾಹಿತ್ಯ-ಸೇವೆಯನ್ನು ಮನ್ನಿಸಿ. ಮಹಾರಾಷ್ಟ್ರ ಸರಕಾರ. ವಿಶ್ವಹಿಂದೂ ಪರಿಷತ್ತು-ಗಳಲ್ಲದೇ ಇನ್ನೂ ಅದೆಷ್ಟೋ ಸಂಘ–ಸಂಸ್ಥೆಗಳು ಇವರನ್ನು ಸತ್ಕರಿಸಿವೆ. ಸಂಸ್ಕೃತದಲ್ಲಿ ಇವರು ಸುಮಾರು ೧೦೦ ಕ್ಕೂ ಹೆಚ್ಚು ಶ್ಲೋಕಗಳನ್ನೂ, ಹಲವು ಚಿಕ್ಕ ನಾಟ್ಯ ಸನ್ನಿವೇಶಗಳನ್ನೂ ಬರೆದದ್ದಲ್ಲದೆ, ' ಬಂಕಿಂಚಂದ್ರ 'ರ ಕಾದಂಬರಿಯನ್ನು ಆಧರಿಸಿ, ' ಆನಂದಮಠ ' ಎಂಬ ಏಕಾಂಕ ನಾಟಕವನ್ನು ಬರೆದಿದ್ದಾರೆ. ಕನ್ನಡ, ಇಂಗ್ಲಿಷ್ ಹಾಗು ಸಂಸ್ಕೃತ ಭಾಷೆಗಳಲ್ಲಿ ವಾಗ್ಮಿಗಳಾದ ಇವರು ಆಯಾ ಭಾಷೆಗಳಲ್ಲಿ ಅನೇಕ ಲೇಖನಗಳನ್ನು ಬರೆದದ್ದಲ್ಲದೆ ವೇದಾಂತ, ಅರ್ಥಶಾಸ್ತ್ರ, ಅಲಂಕಾರ ಹಾಗು ಜ್ಯೋತಿಷ್ಯಶಾಸ್ತ್ರಗಳಲ್ಲಿ ವಿಶೇಷ ಪರಿಣತಿ-ಯನ್ನು ಸಂಪಾದಿಸಿದ್ದಾರೆ.

' ಕೌಟಿಲ್ಯನ ರಾಜ್ಯಪದ್ಧತಿಯ ಸಮೀಕ್ಷೆ ' ಎಂಬ ಹೆಸರಿನಲ್ಲಿ ಕೌಟಿಲ್ಯನ ಅರ್ಥಶಾಸ್ತ್ರವನ್ನು ವಿಶ್ಲೇಷಿಸಿದ ಇವರ ಗ್ರಂಥವು ವಿಮರ್ಶಕರ ಪ್ರಶಂಸೆಗೆ ಪಾತ್ರವಾಗಿದೆ. ಇಂಗ್ಲಿಷ್ ಭಾಷೆಯಲ್ಲಿ ರೂಪಾಂತರಗೊಂಡು. ಇದೇ ಕೃತಿಯು ' **A critical exposition of Koutilya's Polity** ' ಎಂಬ ಶೀರ್ಷಿಕೆಯಲ್ಲಿ ಪ್ರಸಿದ್ಧವಾಗಿದೆ. ಕೌಟಿಲ್ಯನ ಸಮಗ್ರ ವಿಚಾರಗಳು ಜನ-ಸಾಮಾನ್ಯರ ವರೆಗೆ ತಲುಪಲಿ ಎಂಬ ಸದುದ್ದೇಶದಿಂದ, ' ಚಾಣಕ್ಯ ಸೂತ್ರಾಣಿ ' ಎಂಬ ಹೆಸರಿನಿಂದ ಪ್ರಸಿದ್ಧವಿರುವ ೫೭೧ ಸೂತ್ರಗಳಿಗೆ ಭಾಷ್ಯ ಬರೆದಿದ್ದು, ಅದು ಪ್ರಸ್ತುತ ' ಚಾಣಕ್ಯ ದರ್ಶನ ' ಎಂಬ ಹೆಸರು ಹೊತ್ತು ಪ್ರಕಟ-ವಾಗುತ್ತಿದೆ.

ಪ್ರಾಧ್ಯಾಪಕರಾಗಿ, ಪ್ರವಚನಕಾರರಾಗಿ ಅನೇಕ ಶಿಷ್ಯರನ್ನು ಪಡೆದಿರುವ ಗುಂಡಪ್ಪ ಶಾಸ್ತ್ರಿಗಳು ' ಸಮಾಃ ಸರ್ವ ಭಾವೇಷು ವಿಶ್ವಾಸ್ಯಾಃ ಲೋಕ ಸಂಪ್ರಿಯಾಃ ' ಎಂಬ ಚಾಣಕ್ಯನ ಉಕ್ತಿಯಂತೆ ತಮ್ಮ ಸುಸ್ವಭಾವದಿಂದ ಸರ್ವರ ಗೌರವಗಳಿಗೆ ಪಾತ್ರರಾಗಿ ತುಂಬ ಜನಪ್ರಿಯರಾಗಿದ್ದಾರೆ.

---

# ೧. ಸುಖಸ್ಯ ಮೂಲಂ ಧರ್ಮಃ

ಜಗತ್ತಿನಲ್ಲಿ ಪ್ರತಿಯೊಬ್ಬರಿಗೂ ಸದಾಕಾಲವೂ ಸುಖದ ಅಪೇಕ್ಷೆ ಇದ್ದೇ ಇರುತ್ತದೆ. ಸಾಮಾನ್ಯವಾಗಿ ಯಾರೇ ಆಗಲಿ ತಾವಾಗಿಯೇ ದುಃಖವನ್ನು ಬೇಡುವುದಿಲ್ಲ. ಆದರೆ ಸುಖದ ನಿಜವಾದ ಕಲ್ಪನೆ ಮಾತ್ರ ಬಹಳಷ್ಟು ಜನರಿಗೆ ಇರುವುದಿಲ್ಲವೆಂದರೆ ತಪ್ಪಾಗದು. ಪಂಡಿತವರೇಣ್ಯರಾದ ಅನ್ನಂಭಟ್ಟರು 'ಸರ್ವೇಷಾಂ ಅನುಕೂಲತಯಾ ವೇದನೀಯ ಸುಖಮ್' ಎಂದು ಸುಖದ ವ್ಯಾಖ್ಯಾನ ಮಾಡಿದ್ದಾರೆ. ಅಂದರೆ ಎಲ್ಲರಿಗೂ ಹಿತವೆನಿಸುವುದೇ ಸುಖವು ಎಂದು ಅರ್ಥವಾಗುವುದು. ಆದರೆ ಇಂದು ಅನುಕೂಲವೆನಿಸಿದ್ದು ನಾಳೆ ಪ್ರತಿಕೂಲವೂ ಆಗಬಹುದು. ಚಳಿಗಾಲದಲ್ಲಿ ಬೆಚ್ಚಗಿನ ನೀರು ಹಿತವೆನಿಸಿದರೆ, ಬೇಸಿಗೆಯಲ್ಲಿ ತಣ್ಣಗಿನ ನೀರೇ ಬೇಕೆನಿಸುತ್ತದೆ. ಆದ್ದರಿಂದ ಲೋಕದಲ್ಲಿ ದೇಶ, ಕಾಲ, ವ್ಯಕ್ತಿ ಇವು ಬದಲಾದಂತೆ ಸುಖ–ದುಃಖಗಳ ಅನುಭವವು ಬದಲಾಗುತ್ತ ಹೋಗುವುದು ಎಲ್ಲರಿಗೂ ತಿಳಿದಿರುವ ವಿಷಯ.

'ಸುಖಸ್ಯ ಮೂಲಂ ಧರ್ಮಃ' ಎಂಬ ಸೂತ್ರದಲ್ಲಿ ಸುಖದ ಮೂಲ ಗುಣವು ಧರ್ಮವೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಆದ್ದರಿಂದ ಇಂಥ ಸುಖವು ಶಾಶ್ವತವಾದ ಸುಖವೆಂದೇ ತಿಳಿಯಬೇಕಾದದ್ದು ಅವಶ್ಯ. ಇಂಥ ಶಾಶ್ವತ ಸುಖಕ್ಕೆ ಕಾರಣೀಭೂತವಾದದ್ದು ಧರ್ಮವೆಂದು ಚಾಣಕ್ಯನು ಹೇಳುತ್ತಾನೆ.

ಸಾಮಾನ್ಯವಾಗಿ ಧರ್ಮ ಎಂದರೆ ಸದಾಚಾರವೆಂದೇ ಅರ್ಥಮಾಡಬೇಕಾಗುತ್ತದೆ. ಪ್ರಸಂಗಾನುಸಾರವಾಗಿ ಒಮ್ಮೊಮ್ಮೆ ದಾನಕ್ಕೆ ಧರ್ಮವೆನ್ನಬಹುದು. ಹಾಗೆಯೇ ಕರ್ತವ್ಯಕರ್ಮವೂ ಧರ್ಮವೆನಿಸುವುದು. ಪೂಜಾಪುನಸ್ಕಾರಾದಿ ಕರ್ಮಕಾರ್ಯಕ್ಕೂ ಧರ್ಮವೆಂದು ಕರೆಯುವುದು ವಾಡಿಕೆ. ಆದರೆ 'ಧಾರಣಾತ್ ಧರ್ಮ ಉಚ್ಯತೆ' ಎಂಬ ವ್ಯಾಖ್ಯೆಯ ಪ್ರಕಾರ ಧರ್ಮವು ಮಾನವನಿಗೆ ಆಧಾರವಾಗಿ ಸಂರಕ್ಷಿಸುತ್ತದೆ ಎಂದು ಹೇಳಿದ್ದರಿಂದ

ಸದಾಚಾರವೇ ಧರ್ಮವೆಂಬುದನ್ನು ಒಪ್ಪಲೇಬೇಕಾಗುತ್ತದೆ. ವಿಷ್ಣು ಸಹಸ್ರ-ನಾಮದ ಫಲಶ್ರುತಿಯಲ್ಲಿಯೂ ಇದೇ ಮಾತನ್ನೇ 'ಆಚಾರಪ್ರಭವೋ ಧರ್ಮಃ' ಎಂದು ಪ್ರತಿಪಾದಿಸಲಾಗಿದೆ. ಧರ್ಮವು ಸದಾಚಾರ ರೂಪದಲ್ಲಿ ಪ್ರಕಟವಾಗುತ್ತದೆ ಎಂಬುದೇ ಈ ವಾಕ್ಯದ ತಾತ್ಪರ್ಯ. ತೈತ್ತಿರೀಯೋ-ಪನಿಷತ್ತಿನಲ್ಲಿ 'ಸತ್ಯಂ ವದ'. 'ಧರ್ಮಂ ಚರ' ಎಂದು ಹೇಳಿದ್ದನ್ನೂ ಹಾಗೆಯೇ 'ಸತ್ಯ ಮೂಲಾನಿ ಧರ್ಮಾಣಿ' ಎಂಬ ಲೋಕೋಕ್ತಿಯನ್ನು ಸ್ಮರಿಸಿಕೊಂಡಾಗ, ಸತ್ಯಕ್ಕೂ, ಧರ್ಮಕ್ಕೂ ಇರುವ ಅನ್ಯೋನ್ಯ ಸಂಬಂಧ-ದಿಂದಾಗಿ, ಸತ್ಯವು ಕೇವಲ ಸೈದ್ಧಾಂತಿಕವಾದದ್ದು. ಧರ್ಮವು ಅದರ ಪ್ರತ್ಯಕ್ಷ ಆಚರಣೆ ಎಂದು ಅರ್ಥಮಾಡಿದರೆ ತಪ್ಪಾಗಲಾರದೆಂದೆನಿಸುತ್ತದೆ. ಧರ್ಮಶಾಸ್ತ್ರವೆಂಬ ಶಬ್ದಪ್ರಯೋಗವನ್ನು ಮಾಡುವಾಗ ಕೂಡ ಧರ್ಮ ಶಬ್ದಕ್ಕೆ ಸತ್ಕರ್ಮಾನುಷ್ಠಾನವೆಂದೇ ಅರ್ಥಮಾಡಿದ್ದು ಕಂಡುಬರುತ್ತದೆ. ಹೀಗಾಗಿ ಧರ್ಮ ಶಬ್ದಕ್ಕೆ 'ನ್ಯಾಯ' ಎಂಬ ಅರ್ಥವು ಪರ್ಯಾಯವಾಗಿ ಸೂಚ್ಯವಾಗುತ್ತದೆ. ಏಕೆಂದರೆ ಸದಾಚಾರದಲ್ಲಿ ಅನ್ಯಾಯವಿರಲಾರದು— ಆದ್ದರಿಂದ ಸತ್ಯ, ನ್ಯಾಯ, ಧರ್ಮ ಈ ಎಲ್ಲ ಶಬ್ದಗಳಲ್ಲಿ ಅಡಕವಾಗಿರುವ ಮೂಲತತ್ತ್ವವೆಂದರೆ ಒಳ್ಳೆಯ ನಡತೆ ಅಥವಾ ಸದಾಚಾರವೆಂದೇ ಸಿದ್ಧ-ವಾಗುತ್ತದೆ. ಶ್ರೀಮತ್ ಶಂಕರಾಚಾರ್ಯರ ಪ್ರಕಾರ 'ಪ್ರಾಣಿನಾಂ ಸಾಕ್ಷಾತ್ ಅಭ್ಯುದಯ ನಿಶ್ರೇಯಸಹೇತುಃ ಯಃ ಸ ಧರ್ಮಃ' ಎಂದರೆ ಜನರ ಇಹ, ಪರ ಎರಡೂ ಸುಖಕ್ಕೆ ಕಾರಣವಾಗುವುದೇ ಧರ್ಮವೆಂದು ಹೇಳಲ್ಪಟ್ಟಿದೆ, ತಾತ್ಪರ್ಯದಲ್ಲಿ ಸದಾಚಾರವೇ ( ಸತ್ಕರ್ಮ—ಅನಾಸಕ್ತಿ-ಯಿಂದ, ಈಶ್ವರಾರ್ಪಣ ಬುದ್ಧಿಯಿಂದ ಮಾಡಿದ ಕರ್ಮ ) ಇಂತಹ ಉಭಯ ಸುಖಕ್ಕೆ ಕಾರಣವೆಂದು ಬೇರೆ ಹೇಳಬೇಕಾಗಿಲ್ಲ.

ಇನ್ನೂ ಒಂದು ವಿಷಯವೆಂದರೆ, ಸದಾಚಾರವು ಧರ್ಮದ ಒಂದು ಮುಖ ಮಾತ್ರ. ಇನ್ನೊಂದು ಮುಖವು ದುಷ್ಕರ್ಮವನ್ನು ಪರಿತ್ಯಜಿ-ಸುವುದಾಗಿದೆ. ಅಂತೆಯೇ ಭಗವಂತನು ಗೀತೆಯಲ್ಲಿ ಧರ್ಮಸಂಸ್ಥಾಪನೆಯೇ ತನ್ನ ಅವತಾರದ ಉದ್ದೇಶವೆಂದು ವಿವರಿಸುವಾಗ ಸಜ್ಜನರ ಸಂರಕ್ಷಣೆ ಹಾಗು ದುಷ್ಟರ ನಾಶ ಹೀಗೆ ದ್ವಿಮುಖವಾಗಿ ಅದನ್ನು ಸಾಧಿಸಬೇಕಾದ

ಆವಶ್ಯಕತೆಯನ್ನು ಒತ್ತಿಹೇಳಿದ್ದಾನೆ. 'ಸದಾಚಾರಿ' ಎಂದರೇನೇ ದುಷ್ಕರ್ಮವನ್ನು ಬಿಟ್ಟವನು ಎಂದು ಹೇಳುವ ಹಲವರು ಧರ್ಮದ ಈ ದ್ವಿಮುಖತೆಯನ್ನು ಒಪ್ಪಲಿಕ್ಕೆ ಅನುಮಾನಿಸಬಹುದು. ಆದರೆ ಪರೋಪಕಾರನಿರತನಾದ ವ್ಯಕ್ತಿಯೊಬ್ಬನು ತನ್ನ ವೈಯಕ್ತಿಕ ಜೀವನದಲ್ಲಿ ದುಶ್ಚಟಗಳ ಅಧೀನನಾಗಿದ್ದರೆ ಅಷ್ಟರಮಟ್ಟಿಗೆ ಅವನಲ್ಲಿ ಧರ್ಮದ ನ್ಯೂನತೆ ಉಂಟಾಗುವುದು. ಹೀಗಾಗಿ ಧರ್ಮದ ದ್ವಿಮುಖತೆಯನ್ನು ಒಪ್ಪಲೇಬೇಕಾಗುತ್ತದೆ. 'ಆಚಾರಹೀನಂ ನ ಪುನಂತಿ ವೇದಾಃ' ಎಂಬ ಉಕ್ತಿಯಲ್ಲಿಯೂ ಸದಾಚಾರದ ಮಹತ್ವವು ಪ್ರತಿಪಾದಿಸಲ್ಪಟ್ಟಿದೆ. ಹೀಗಾಗಿ ಸುಖಕ್ಕೆ ಮೂಲವಾದದ್ದು ಧರ್ಮವೆಂಬುದು ಸಿದ್ಧವಾಗುತ್ತದೆ. ಈ ಸದಾಚಾರರೂಪವಾದ ಧರ್ಮವನ್ನೇ ಶ್ರುತಿ, ಸ್ಮೃತಿ, ಸಜ್ಜನರ ವ್ಯವಹಾರ ಹಾಗು ಅಂತಃಪ್ರಜ್ಞೆಯ ಸಮಾಧಾನ ಇತ್ಯಾದಿ ಅನೇಕ ಮೂಲಗಳಿಂದ ದೊರಕಿಸಿ ಒರೆಗ ಹಚ್ಚುವುದು ಸಾಧ್ಯ. ಹೀಗೆ ಚಾಣಕ್ಯನು ಭಾರತೀಯ ಪರಂಪರೆಯ ಶರಣನಾಗಿ ಧರ್ಮಕ್ಕೆ ಅಗ್ರಸ್ಥಾನವನ್ನು ಕೊಟ್ಟದ್ದನ್ನು ಸ್ವಾಗತಿಸಲೇಬೇಕು.

## ೨. ಧರ್ಮಸ್ಯ ಮೂಲಮರ್ಥಃ

ಮೇಲಿನ ಸೂತ್ರದಲ್ಲಿ ಭಾರತೀಯ ಸಂಪ್ರದಾಯಕ್ಕನುಗುಣವಾಗಿ ಚಾಣಕ್ಯನು ಧರ್ಮಕ್ಕೆ ಪ್ರಾಶಸ್ತ್ಯವನ್ನು ಕೊಟ್ಟಿದ್ದರೂ ಇಂಥ ಧರ್ಮಕ್ಕೇ ಮೂಲವಾದದ್ದು 'ಅರ್ಥ' ಎಂದು ಧೈರ್ಯದಿಂದ ಮುಂದಿನ ಸೂತ್ರದಲ್ಲಿಯೇ ಪ್ರತಿಪಾದಿಸಿರುತ್ತಾನೆ. ಅರ್ಥವೆಂದೊಡನೆ ಹಣ ಎಂದು ತಿಳಿದು ಧರ್ಮಕ್ಕೆ ಮೂಲವಾದದ್ದು ಹಣ ಅಥವಾ ಸಂಪತ್ತು ಎಂದು ವ್ಯಾಖ್ಯಾನಿಸುವುದು ಸಹಜ. ಆದರೆ ಪ್ರಸ್ತುತ ಸೂತ್ರದ ಮಟ್ಟಿಗೆ ಈ ಅರ್ಥವು ಹೆಚ್ಚಾಗಿ ಯೋಗ್ಯವೆನಿಸಿದರೂ ಚಾಣಕ್ಯನು 'ಅರ್ಥ' ಶಬ್ದವನ್ನು ವ್ಯಾಪಕಾರ್ಥದಲ್ಲಿ ತನ್ನ ಮೇರುಕೃತಿಯಾದ ಅರ್ಥಶಾಸ್ತ್ರದಲ್ಲಿ ಉಪಯೋಗಿಸಿದ್ದಾನೆ. ಏಕೆಂದರೆ ಅರ್ಥಶಾಸ್ತ್ರವು ಕೇವಲ ಹಣಕಾಸಿನ ವ್ಯವಹಾರವನ್ನಷ್ಟೇ ಚರ್ಚಿಸುವುದಿಲ್ಲ.

ಈ ಗ್ರಂಥದಲ್ಲಿ ರಾಜನೀತಿ, ಸಮಾಜಶಾಸ್ತ್ರ, ಆಡಳಿತ, ಕಾನೂನು, ವ್ಯಾಪಾರ, ವ್ಯವಹಾರ ಇತ್ಯಾದಿ ಅನೇಕ ವಿಷಯಗಳನ್ನು ಕೂಲಂಕಷವಾಗಿ ಚರ್ಚಿಸುವುದರಿಂದ ಇಲ್ಲಿ ಅರ್ಥಶಾಸ್ತ್ರಕ್ಕೆ ವ್ಯಾಪಕವಾದ ವಿವರಣೆ ಬೇಕಾಗುತ್ತದೆ. ಸಂಕ್ಷೇಪದಲ್ಲಿ ಹೇಳುವುದಾದರೆ, ರಾಜ್ಯಸ್ಥಾಪನೆ ಹಾಗು ಯಥಾವತ್ತಾಗಿ ಅದರ ಆಡಳಿತವನ್ನು ನಡೆಸಿಕೊಂಡು ಹೋಗುವುದಕ್ಕೆ ಸಹಾಯವಾಗುವ ಶಾಸ್ತ್ರಗಳೆಲ್ಲವೂ ಅರ್ಥಶಾಸ್ತ್ರದ ಕಕ್ಷೆಯಲ್ಲಿ ಬರುತ್ತವೆ. ಪ್ರಸ್ತುತ ಸೂತ್ರದಲ್ಲಿ ಮಾತ್ರ 'ಅರ್ಥ' ಶಬ್ದಕ್ಕೆ ಹಣ ಅಥವಾ ಜೀವನೋಪಾಯ ಎಂದೂ ಅರ್ಥಮಾಡಬೇಕಾಗುತ್ತದೆ.

ಒಂದು ರೀತಿಯಿಂದ ಧರ್ಮಕ್ಕೆ ಅಂದರೆ ಧರ್ಮಾಚರಣೆಗೆ ಆಧಾರವಾದದ್ದು ಧರ್ಮಬುದ್ಧಿ ಎಂಬುದನ್ನು ಒಪ್ಪಲೇಬೇಕಾದರೂ ಅಂಥ ಧರ್ಮಬುದ್ಧಿ 'ಅರ್ಥ'ವಿಲ್ಲದಿದ್ದರೆ ಉತ್ಪನ್ನವಾಗುವುದು ಕಠಿಣ. ಹೀಗಾಗಿ ಅರ್ಥ ( ಹಣ ಅಥವಾ ಸಂಪತ್ತು ) ಇಲ್ಲದಿದ್ದರೆ ಧರ್ಮಕ್ಕೆ ಆಧಾರವೇ ತಪ್ಪಿದಂತಾಗುತ್ತದೆ ಎನ್ನುವ ಚಾಣಕ್ಯನ ಮಾತಿನಲ್ಲಿ ಸ್ವಾರಸ್ಯವಿದೆ. ಜೀವನಕ್ಕೆ ಬೇಕಾಗುವಷ್ಟು ಕೂಡ ಹಣವಿರದಿದ್ದರೆ ಮನುಷ್ಯನು ಧರ್ಮಾಚರಣೆಯನ್ನು ಸಾಧಿಸಲಾರ ಎನ್ನುವುದೇ ಇದರ ಮರ್ಮ. ಇದು ಸುಳ್ಳೆಂದು ಹೇಳುವುದು ಸಾಧ್ಯವಿಲ್ಲ. ಮಧ್ಯಾಹ್ನದ ಊಟಕ್ಕೆ ಏನೂ ದೊರೆಯದಿದ್ದಾಗ ಹಸಿದ ಹೊಟ್ಟೆಯಿಂದ ಧರ್ಮಕಾರ್ಯನಿರತನಾಗುವುದು ಸಾಧ್ಯವಿಲ್ಲ. ಅಪರಾಧಿಗಳ ಜೀವನವನ್ನು ಅಭ್ಯಸಿಸಿದಾಗ ಅವರಲ್ಲಿ ಸಾಕಷ್ಟು ಜನರು ದುರ್ಮಾರ್ಗಿಗಳಾದದ್ದಕ್ಕೆ ಬಡತನವೇ ಮೂಲಕಾರಣವೆಂದು ಗೊತ್ತಾಗದಿರದು. ಆದ್ದರಿಂದ ಮನುಷ್ಯನಲ್ಲಿ ಸತ್ಪ್ರವೃತ್ತಿಗಳು ಮೂಡಿ ಸನ್ಮಾರ್ಗದಿಂದ ನಡೆಯಬೇಕಾದರೆ ಉದರನಿರ್ವಾಹದ ಮಟ್ಟಿಗಾದರೂ ಹಣದ ಆವಶ್ಯಕತೆ ಇದ್ದೇ ಇದೆ ಎಂದು ಬೇರೆ ಹೇಳಬೇಕಾಗಿಲ್ಲ. ಇದನ್ನೇ ಚಾಣಕ್ಯನು ಇನ್ನೊಂದೆಡೆಗೆ 'ಧರ್ಮಮೂಲತ್ವಾತ್ ಕಾಮಫಲತ್ವಾತ್ ಅರ್ಥಸ್ಯ' ಎಂದು ಪ್ರತಿಪಾದಿಸಿದ್ದಾನೆ. ಅರ್ಥವು ಧರ್ಮಕ್ಕೆ ಮೂಲವಷ್ಟೇ ಅಲ್ಲ, ಜೀವನಸಾಫಲ್ಯದ ರೂಪದಲ್ಲಿ ಅದು ಪರಿಣಮಿಸುತ್ತದ ಎನ್ನುವುದೇ ಕಾಮಫಲತ್ವಾತ್ ಎಂಬುದರ ತಾತ್ಪರ್ಯ. ಹೀಗೆ ಚಾಣಕ್ಯನು ಧರ್ಮವೇ ಸರ್ವಸ್ವ

ಎಂಬ ಪೂರ್ವಾಚಾರ್ಯರ ವಿಚಾರಧಾರೆಯನ್ನು ಒಪ್ಪಿಕೊಂಡರೂ ಅದಕ್ಕೂ ಮುಂದೆ ಹೋಗಿ ಧರ್ಮದಷ್ಟೇ ಅರ್ಥವೂ ಪ್ರಧಾನವಾದದ್ದು ಎಂದು ಪರ್ಯಾಯವಾಗಿ ಹೇಳಿದ್ದು ನಿಜವಾಗಿಯೂ ದಿಟ್ಟ ವಿಚಾರವೇ ಸರಿ.

## ೨. ಅರ್ಥಸ್ಯ ಮೂಲಂ ರಾಜ್ಯಮ್

ವ್ಯಕ್ತಿಗತ ಜೀವನದ ಮಟ್ಟಿಗೆ ವಿಚಾರಮಾಡುವಾಗ 'ಅರ್ಥ' ಶಬ್ದಕ್ಕೆ ಸಂಪತ್ತು ಎಂದು ಅರ್ಥಮಾಡಿಕೊಂಡರೂ ದೇಶಹಿತದ ದೃಷ್ಟಿಯಿಂದ ನೋಡಿದಾಗ ರಾಜ್ಯಾಡಳಿತವನ್ನು ಅರ್ಥದಿಂದ ಬೇರ್ಪಡಿಸಲಾಗದು. ರಾಜ್ಯದ ಆರ್ಥಿಕ ಪರಿಸ್ಥಿತಿಯು ತೃಪ್ತಿಕರವಾಗಬೇಕಾದರೆ ಆಡಳಿತವು ಸರಿಯಾಗಿ ಇರಬೇಕಷ್ಟೇ ? ಇದಕ್ಕೆಂದೇ 'ರಾಜಾ ಕಾಲಸ್ಯ ಕಾರಣಂ' ಎಂದು ಮಹಾಭಾರತದಲ್ಲಿ ಹೇಳಿದ್ದು. ಇದೇ ವಿಚಾರವನ್ನು ಇನ್ನೂ ಸ್ಪಷ್ಟವಾಗಿ. ಅದೇ ಗ್ರಂಥದ ಶಾಂತಿಪರ್ವದಲ್ಲಿ.

ರಾಜಾನಾಂ ಪ್ರಥಮಂ ವಿಂದೇತ್ ತತೋ
ಭಾರ್ಯಾಂ ತತೋ ಧನಮ್ ।
ರಾಜನ್ಯಸತಿ ಲೋಕಸ್ಯ ಕುತೋ ಭಾರ್ಯಾ
ಕುತೋ ಧನಮ್ ॥

ಎಂದು ಭೀಷ್ಮಪಿತಾಮಹನು ಹೇಳುತ್ತಾನೆ. ಒಳ್ಳೆಯ ರಾಜನಿದ್ದ ದೇಶದಲ್ಲಿ ಮಾತ್ರ ಒಳ್ಳೆಯ ಆಡಳಿತವಿರುವುದು ಸಾಧ್ಯ. ಆಗ ಜನರು ಸುಖ-ಶಾಂತಿಗಳಿಂದ ನೆಲೆಸಬಹುದು. ಭಾರ್ಯಾ, ಧನಾದಿ ಸೌಖ್ಯವಿದ್ದರೂ ರಾಜ್ಯವೇ ಅಸುರಕ್ಷಿತವಾಗಿದ್ದರೆ ಅದೂ ಅಸುರಕ್ಷಿತವೇ. ಆದರಿಂದ ನಮಗೆ ನಿಜವಾದ ಸುಖವು ದೊರೆಯಲಾರದು. ಅದಕ್ಕೆಂದೇ ಮೊದಲು ಒಳ್ಳೆ ರಾಜ್ಯವಿರಬೇಕು ಎಂದು ಬಯಸಿದರೆ ಎಲ್ಲರಿಗೂ ಎಲ್ಲ ಸುಖಗಳೂ ತಾನೇ ತಾನಾಗಿ ದೊರೆಯುತ್ತವೆ. ದೇಶದ ಸಂರಕ್ಷಣೆ ಹಾಗು ಸಾಂಪತ್ತಿಕ ಪರಿಸ್ಥಿತಿಯನ್ನು ಸರಿಯಾಗಿ

ಇಡಬಲ್ಲ ಆಡಳಿತದ ಆವಶ್ಯಕತೆಯನ್ನು 'ಅರ್ಥ'ದ ಮೂಲವೇ ರಾಜ್ಯವೆಂದು ಸಾರಿಹೇಳುವ ಈ ಸೂತ್ರವು ವ್ಯಕ್ತಪಡಿಸುತ್ತದೆ.

## ೪. ರಾಜ್ಯಸ್ಯ ಮೂಲಮಿಂದ್ರಿಯ ಜಯಃ

ಚಾರಿತ್ರ್ಯಸಂಪನ್ನರಾದ ಸದಾಚಾರಿಗಳ ಕೈಯಲ್ಲಿ ರಾಜ್ಯಾಡಳಿತ ಸೂತ್ರಗಳಿದ್ದರೆ ಮಾತ್ರ ದೇಶಕ್ಕೆ ಕಲ್ಯಾಣ ಎನ್ನುವುದೇ ಈ ಸೂತ್ರದ ಆಶಯ. ಶಾಸಕರು ಸಮರ್ಥರಿದ್ದರೂ ದುಷ್ಟರಾಗಿದ್ದರೆ ಲೋಕಕಲ್ಯಾಣ-ಕ್ಕಿಂತಲೂ ಸ್ವಾರ್ಥಸಾಧನೆಯ ಕಡೆಗೇ ಅವರ ಲಕ್ಷ್ಯವಿರುತ್ತದೆ. ಅಸಮರ್ಥ ಶಾಸಕರಿಂದ ರಾಜ್ಯವು ಹಾಳಾಗಿಹೋಗುತ್ತದೆ. ಆದ್ದರಿಂದ ಶಾಸಕರಲ್ಲಿ ಸದಾಚಾರವಿದ್ದರೇನೇ ಅವರು ಲೋಕಕಲ್ಯಾಣಕ್ಕಾಗಿ ದುಡಿಯುವುದು ಸಾಧ್ಯ. ದುರ್ಯೋಧನ, ಕಂಸ, ರಾವಣ ಇತ್ಯಾದಿ ದುಷ್ಟರು ಸಮರ್ಥ-ರಿದ್ದರೂ ತಮ್ಮ ದುಷ್ಪ್ರೇರಣೆಯ ಕಾರಣದಿಂದಾಗಿ ಲೋಕಕಲ್ಯಾಣವನ್ನು ಸಾಧಿಸಲಿಲ್ಲ. ಅನ್ಯಾಯವೇ ಅವರ ಮೂಲಮಂತ್ರವಾಯಿತು. ರಾಮ-ರಾಜ್ಯ, ಧರ್ಮರಾಜ್ಯ ಎನ್ನುವ ಶಬ್ದಪ್ರಯೋಗಗಳು ಶಾಸಕರು ಸದ್ವೃತ್ತ-ರಾಗಿರಬೇಕೆಂಬುದನ್ನು ಸೂಚಿಸುತ್ತವೆ.

## ೫. ಇಂದ್ರಿಯ ಜಯಸ್ಯ ಮೂಲಂ ವಿನಯಃ

ಇಂದ್ರಿಯ ನಿಗ್ರಹವು ವಿನಯವಂತರಿಗೆ ಮಾತ್ರ ಸಾಧ್ಯವೆಂದು ಪ್ರಸ್ತುತ ಸೂತ್ರವು ತಿಳಿಸುತ್ತದೆ. ದಂಭ, ದರ್ಪ, ಅಹಂಕಾರಿಗಳಾದವರು ಇಂದ್ರಿಯ ದಾಸರಾಗುತ್ತಾರೆಯೇ ವಿನಃ ಅವನ್ನು ಗೆದ್ದವರಲ್ಲ. ಮನಸ್ಸು ಕಾಲಕಾಲಕ್ಕೆ

ಪ್ರೇರಿಸಿದಂತೆ ಇಂದ್ರಿಯಗಳನ್ನು ಹರಿಬಿಟ್ಟು, ಸಾರಥಿ ಇಲ್ಲದ ರಥದ ಕುದುರೆಗಳು ಸಿಕ್ಕಸಿಕ್ಕತ್ತ ಓಡುತ್ತ ಹೋಗಿ ರಥವನ್ನೇ ನಾಶಪಡಿಸುವಂತೆ ತಮ್ಮ ಜೀವನ ಹಾಗು ರಾಜ್ಯವನ್ನು ಇವರು ಹಾಳುಮಾಡುವಲ್ಲಿ ಸಂಶಯವಿಲ್ಲ. ಆದರೆ ವಿನಯವಂತರು ಅರ್ಥಾತ್ ಗುರು, ಹಿರಿಯರು, ಧರ್ಮದ ಆಜ್ಞೆಗಳು ಇವೆಲ್ಲವುಗಳನ್ನು ಗೌರವಿಸುವವರು ಅಹಂಕಾರಿಗಳಾಗದೆ ತಮಗಿಂತ ದೊಡ್ಡವರಿದ್ದಾರೆ, ಈ ವಿಶ್ವವನ್ನು ಆಳುವ ಶಕ್ತಿ ಬೇರೊಂದಿದೆ. ನಾವು ಅದನ್ನು ಮೀರಲಾರೆವು—ಎಂಬುದನ್ನರಿತು ನಮ್ರರಾಗಿರುತ್ತಾರೆ. ಇಂಥ ನಮ್ರತೆ ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಳ್ಳಲಿಕ್ಕೆ ಸಹಾಯವಾಗುತ್ತದೆ.—ಎಂಬುದೇ ಚಾಣಕ್ಯನ ಅಭಿಪ್ರಾಯ.

## ೬. ವಿನಯಸ್ಯ ಮೂಲಂ ವೃದ್ಧೋಪಸೇವಾ

ವಿನಯಪ್ರಾಪ್ತಿಗೆ ಆವಶ್ಯಕವಾದದ್ದು ವೃದ್ಧೋಪಸೇವೆ— ಎಂದರೆ ಗುರು ಹಿರಿಯರ ಶುಶ್ರೂಷೆ. ಮನಸಾ ಗುರು-ಹಿರಿಯರನ್ನು ಆದರದಿಂದ ನೋಡಿದರೆ ಸಾಲದು —ಪ್ರತ್ಯಕ್ಷವಾಗಿ ಅವರ ಸೇವೆಯನ್ನು ಮಾಡುವುದು ಅತ್ಯವಶ್ಯವಾದದ್ದು. ಇಂಥ ಸೇವೆಯಿಂದ ಅಹಂಕಾರ ನಾಶವಾಗಿ ಸಹನಶೀಲತೆ ಹೆಚ್ಚುತ್ತದೆ. ಇಲ್ಲಿ ವೃದ್ಧ ಶಬ್ದಕ್ಕೆ ಜ್ಞಾನವೃದ್ಧತ್ವ ಹಾಗು ವಯೋವೃದ್ಧತ್ವ ಎಂಬ ಎರಡೂ ಅರ್ಥಗಳು ಅನ್ವಯಿಸುತ್ತವೆ. ವಯೋವೃದ್ಧರ ಸೇವೆಯಿಂದ ಸಹನಶೀಲತೆ ಹಾಗು ಸ್ವಕರ್ತವ್ಯವನ್ನು ನಿರ್ವಹಿಸುತ್ತಿರುವುದರ ಬಗ್ಗೆ ಸಮಾಧಾನವುಂಟಾಗುತ್ತಿದ್ದರೆ, ಜ್ಞಾನವೃದ್ಧರ ಸೇವೆಯಿಂದ ಅಹಂಕಾರ ನಾಶವಾಗಿ ಮನುಷ್ಯ ಸ್ವಭಾವವು ಹೆಚ್ಚು ಪ್ರೇಮಾಸ್ಪದವಾಗುತ್ತದೆ. ಹೀಗೆ ವಿನಯ ಸಂಪಾದಿಸುವ ಸಾಧನೆಗಳನ್ನು ತಿಳಿಯಪಡಿಸಿ ಚಾಣಕ್ಯನು ಮುಂದಿನ ಸೂತ್ರದಲ್ಲಿ ಅದರ ಫಲವನ್ನು ವಿವರಿಸುತ್ತಾನೆ.

## ೭. ವೃದ್ಧೋಪಸೇವಯಾ ವಿಜ್ಞಾನಮ್

ಗುರು-ಹಿರಿಯರ ಸೇವೆ ಮಾಡುವುದರಿಂದಾಗಿ ಮನುಷ್ಯರಿಗೆ ಅನೇಕ ರೀತಿಯ ಅನುಭವಗಳು ಬರುತ್ತವೆ. ಇದೇ ವಿಜ್ಞಾನ. ಸೈದ್ಧಾಂತಿಕ ಅಥವಾ ಪುಸ್ತಕೀಯ ಜ್ಞಾನಕ್ಕೆ ಜ್ಞಾನವೆಂತಲೂ, ಅನುಭವ ಜ್ಞಾನಕ್ಕೆ ವಿಜ್ಞಾನವೆಂತಲೂ ಬಲ್ಲವರು ತಿಳಿಯುತ್ತಾರೆ. ಜ್ಞಾನ ಹಾಗು ಮನೋವೃದ್ಧಿಯ ತಮ್ಮ ಅನುಭವಗಳನ್ನು ಕಿರಿಯರಿಗೆ ತಿಳಿಸಿ ಅವರ ತಿಳುವಳಿಕೆಯ ಮಟ್ಟವನ್ನು ಎತ್ತರಿಸುತ್ತಾರೆ. ಅದೆಷ್ಟೋ ಪುಸ್ತಕಗಳನ್ನು ಓದಿ ಬಹುಕಾಲ ಪರಿಶ್ರಮಪಟ್ಟು ಪಡೆಯಬಹುದಾದ ಜ್ಞಾನವು ಅಲ್ಪಾವಧಿಯಲ್ಲಿ ವೃದ್ಧ-ಸೇವಾನುರಾಗದಿಂದ ದೊರೆಯುತ್ತದೆ. ಚಾಣಕ್ಯನು ಅದನ್ನೇ ಈ ಸೂತ್ರದಲ್ಲಿ ಒತ್ತಿಹೇಳಿದ್ದಾನೆ.

ಇದೇ ಸೂತ್ರವನ್ನು 'ವೃದ್ಧೋಪಸೇವಾಯಾ ವಿಜ್ಞಾನಮ್' ಎಂದು ಹೇಳಿ ವೃದ್ಧೋಪಸೇವೆಗೆ ವಿಜ್ಞಾನವು ಸಾಧನೀಯಭೂತವಾದದ್ದು ಎಂದು ಅರ್ಥಮಾಡಲೂಬಹುದೆಂಬುದು ಇನ್ನೊಂದು ಅಭಿಪ್ರಾಯ. ಅದು ಅಷ್ಟು ಸಮಂಜಸವೆನಿಸುವುದಿಲ್ಲ.

## ೮. ವಿಜ್ಞಾನೇನಾತ್ಮಾನಂ ಸಂಪಾದಯೇತ್

ಸೈದ್ಧಾಂತಿಕ ಜ್ಞಾನಕ್ಕೆ ಅನುಭವದ ಮೆರುಗು ದೊರೆತು ಮನುಷ್ಯನು ವಿವೇಕಿಯಾಗಿ ತನ್ನನ್ನು ತಾನು ತಿಳಿದುಕೊಳ್ಳಬೇಕು ಎಂಬ ಅಭಿಪ್ರಾಯವಿಲ್ಲಿದೆ. ತನ್ನನ್ನು ತಾನು ತಿಳಿದುಕೊಳ್ಳುವುದೆಂದರೆ, ಮನುಷ್ಯ ಸಹಜವಾದ ಕಾಮಕ್ರೋಧಾದಿ ದೋಷಗಳು ನಾಶವಾಗಿ ವಿವೇಕೋದಯವಾಗುವುದು. ಇಂಥ ವಿವೇಕಿಗೆ ಭೋಗಮಯ ಜೀವನದ ಅಸ್ಥಿರತೆ, ಸಂಸಾರದ ಅಸಾರತೆ, ಆತ್ಮನಿತ್ಯತ್ವ - ಇವೆಲ್ಲವುಗಳ ಅರಿವಾಗಿ ಲೌಕಿಕ ಹಾಗೆ

ಪಾರಮಾರ್ಥಿಕಗಳೆರಡನ್ನೂ ಸಾಧಿಸಿಕೊಳ್ಳುತ್ತಾನೆ. ಇಂಥವನು ರಾಜ-ಪದವಿಯನ್ನು ಭೂಷಿಸಿದರೆ ಋಷಿಯಲ್ಲಿರಬೇಕಾದ ತ್ಯಾಗ, ರಾಜನಲ್ಲಿರ-ಬೇಕಾದ ಮಹತ್ವಾಕಾಂಕ್ಷೆ ಇವುಗಳ ಸಾಮರಸ್ಯವನ್ನು ಹೊಂದಿ ರಾಜರ್ಷಿ ಎಂದು ಎನಿಸಿಕೊಳ್ಳಲು ಅರ್ಹನಾಗುತ್ತಾನೆ.

## ೯. ಸಂಪಾದಿತಾತ್ಮಾ ಜಿತಾತ್ಮಾ ಭವತಿ

ಮೇಲಿನ ಸೂತ್ರದಲ್ಲಿ ವರ್ಣಿಸಿದ ಜೀವನದ ಮೌಲ್ಯಗಳನ್ನು ತಿಳಿದು-ಕೊಂಡವನು ಸಂಪಾದಿತಾತ್ಮನೆಂದು ಕರೆಯಲ್ಪಡುತ್ತಾನೆ. ಇಂಥ ವಿವೇ-ಕಿಯು ಜಿತಾತ್ಮನಾಗುತ್ತಾನೆ ಎಂಬುದು ಚಾಣಕ್ಯನ ಅಭಿಪ್ರಾಯ. ಇದರ ಮರ್ಮ ಜೀವನದಲ್ಲಿ ಎಲ್ಲ ರೀತಿಯಿಂದಲೂ ಯಶಸ್ಸನ್ನು ಸಂಪಾದಿಸುತ್ತಾನೆ ಎಂದು ಮಾತ್ರ. ಈ ಸೂತ್ರಗಳು ಪ್ರಾಮುಖ್ಯವಾಗಿ ರಾಜನಿಗೆ ಉಪದೇಶಿ-ಸಲ್ಪಟ್ಟಿದ್ದರೂ ಅನುಷಂಗಿಕವಾಗಿ ಉಳಿದವರಿಗೂ ಅನ್ವಯಿಸುತ್ತವೆ. ' ಆತ್ಮ-ಲಾಭಾತ್ ನ ಪರಂ ವಿದ್ಯತೆ ' ಎಂಬ ವಾಕ್ಯವು ಕೂಡ ಇದೇ ಅಭಿಪ್ರಾಯ-ವನ್ನು ಎತ್ತಿಹಿಡಿಯುತ್ತದೆ. ತಾನು ಆತ್ಮಸ್ವರೂಪನೆಂದು ತಿಳಿದ ಜ್ಞಾನಿ ಅಥವಾ ಜೀವನಮೌಲ್ಯಗಳನ್ನು ಅರಿತು ಅದಕ್ಕನುಗುಣವಾಗಿ ಸಂಸಾರ-ವನ್ನು ಸಾಗಿಸುತ್ತಿರುವ ಸಂಸಾರಿ ಇವರಿಬ್ಬರೂ ಸಂಸಾರಸಾಗರವನ್ನು ಈಸಿ ಜಯಿಸಬಲ್ಲವರು. ಇವರಿಗೆ ಸುಖ-ದುಃಖಾದಿ ದ್ವಂದ್ವಗಳು ಬಾಧಿಸಲಾರವು ಎಂಬುದೇ ತಾತ್ಪರ್ಯ.

## ೧೦. ಜಿತಾತ್ಮಾ ಸರ್ವಾರ್ಥೈಃ ಸಂಯುಜ್ಯೇತ

ಮೇಲಿನ ಸೂತ್ರದಲ್ಲಿ ವರ್ಣಿಸಿದ ಜಿತಾತ್ಮನು ಧರ್ಮಾದಿ ಸರ್ವ ಪುರುಷಾರ್ಥಗಳನ್ನು ಸಂಪಾದಿಸುತ್ತಾನೆ ಎಂದು ಈ ಸೂತ್ರದಲ್ಲಿ ವಿವರಿಸಿ,

ಮೊದಲಿನ ಸೂತ್ರದಿಂದ ಆರಂಭಿಸಿದ ವಿಷಯವನ್ನು ಸಮಾರೋಪಿಸು-ತ್ತಾನೆ. ಇಲ್ಲಿ ನಾವು ಸುಭಾಷಿತವೊಂದನ್ನು ಸ್ಮರಿಸಬಹುದು.

ಜಿತೇಂದ್ರಿಯತ್ವಂ ವಿನಯಸ್ಯ ಕಾರಣಂ ಗುಣಪ್ರಕರ್ಷೋ
ವಿನಯಾದವಾಪ್ಯತೇ ।
ಗುಣಾಧಿಕೇ ಪುಂಸಿ ಜನೋಽನುರಜ್ಯತೇ ಜನಾನುರಾಗ
ಪ್ರಭವಾ ಹಿ ಸಂಪದಃ ॥

ಜಿತೇಂದ್ರಿಯನಾದವನು ವಿನಯವಂತನಾಗುತ್ತಾನೆ. ಇಂಥವನು ಸದ್ಗುಣಗಳ ಆಗರವಾಗಿ ಜನಪ್ರಿಯನಾಗುತ್ತಾನೆ. ಜನಾನುರಾಗಕ್ಕಿಂತ ಶ್ರೇಷ್ಠ ವಾದದ್ದು ಇನ್ನೊಂದಿಲ್ಲ. ಈ ಮಾತು ಸಾಮಾನ್ಯರಿಗೆ ಅನ್ವಯಿಸುವಂತೆಯೇ ರಾಜನಿಗೂ ಅನ್ವಯಿಸುತ್ತದೆ. ಲೋಕಾನುರಾಗವನ್ನು ಸಂಪಾದಿಸಿದ ಮನು-ಷ್ಯನು ಪ್ರಜಾನುರಾಗವನ್ನು ಸಂಪಾದಿಸಿದ ರಾಜನಿಗೆ ಕಡಿಮೆಯಲ್ಲ ಎನ್ನು-ವುದೇ ಇದರ ತಾತ್ಪರ್ಯ. ಪ್ರಜಾನುರಾಗವನ್ನು ಸಂಪಾದಿಸುವುದೇ ರಾಜನ ಪರಮಗುರಿಯಾಗಿರಬೇಕು ಎನ್ನುವುದು ಇಲ್ಲಿ ಧ್ವನಿತವಾಗಿದೆ. ಇಂಥ ರಾಜನು ತನ್ನ ಕರ್ತವ್ಯಪರಿಪಾಲನೆಯಿಂದ ಧರ್ಮಾರ್ಥಗಳನ್ನು ಸಂಪಾದಿಸಿ ಧರ್ಮವನ್ನು ಉಲ್ಲಂಘಿಸದೆ ಸುಖವನ್ನು ಅನುಭವಿಸಿ ಮೋಕ್ಷಕ್ಕೆ ಅಧಿಕಾರಿ-ಯಾಗುತ್ತಾನೆ. ಇದೇ 'ಸರ್ವಾರ್ಥೈಃ ಸಂಯುಜ್ಯೇತ' ಎಂದು ಹೇಳಲ್ಪಟ್ಟಿದೆ.

## ೧೧. ಅಹಿಂಸಾಲಕ್ಷಣೋ ಧರ್ಮಃ

'ಸುಖಸ್ಯ ಮೂಲಂ ಧರ್ಮಃ' ಎಂದು ಸೂತ್ರಗಳನ್ನು ಆರಂಭಿಸಿದ ಚಾಣಕ್ಯನು ಮುಂದೆ ಅದರ ಲಕ್ಷಣವನ್ನು ಅದು ಅಹಿಂಸಾರೂಪಿಯಾಗಿರ-ಬೇಕು ಎಂದು ಸಾರಿಹೇಳಿದ್ದಾನೆ. ಅನಿವಾರ್ಯ ಪ್ರಸಂಗಗಳಲ್ಲಿಯಾದರೂ ಹಿಂಸೆಗೆ ಅನುಮತಿ ನೀಡಿದವನು ಇಲ್ಲಿ ಧರ್ಮವು ಅಹಿಂಸಾರೂಪವಾಗಿರ-ಬೇಕು ಎಂದು ಹೇಳಿದ್ದು ಅಚ್ಚರಿಯೆನಿಸದಿರದು. ಆದರೆ ಹಿಂಸೆಯು

ಸಾಮಾನ್ಯವಾಗಿ ನಿಂದ್ಯವೆನಿಸಿದರೂ, ಮುಂದೆ ಸಂಭವಿಸಬಹುದಾದ ಅಪರಿ-ಮಿತ ಬಾಧೆಯಿಂದ ಪಾರಾಗಲು, ತತ್ಕಾಲದಲ್ಲಿ ಯೋಜಿಸಿದ ಅನಿವಾರ್ಯ-ವೆಂದು ತೋರುವ ಹಿಂಸೆಯು ಒಂದು ರೀತಿಯಲ್ಲಿ ಅಹಿಂಸೆಯೇ ಎನಿಸಿ-ಕೊಳ್ಳುವುದು. ಪರಮೇಶ್ವರನು ಬಕಾಸುರನನ್ನು, ಕುಮಾರ ಕಾರ್ತಿಕೇಯನು ತಾರಕ ದೈತ್ಯನನ್ನು, ಮಹಾವಿಷ್ಣುವು ತನ್ನ ಅನೇಕ ಅವತಾರಗಳಲ್ಲಿ ಅದೆಷ್ಟೋ ರಾಕ್ಷಸರನ್ನು ಸಂಹರಿಸಿ ಲೋಕರಕ್ಷಣೆ ಮಾಡಿದ್ದನ್ನು ಇಲ್ಲಿ ಉದಾಹರಣೆಗಾಗಿ ಸ್ಮರಿಸಿಕೊಳ್ಳಬಹುದು.

ಅಹಿಂಸೆಯನ್ನು ಕಾಯಾ, ವಾಚಾ, ಮನಸಾ ಆಚರಿಸಬೇಕೆಂಬು-ದನ್ನು ಇಲ್ಲಿ ಮರೆಯುವಂತಿಲ್ಲ. ಮಾತಿನಿಂದ ಇನ್ನೊಬ್ಬರ ಮನಸ್ಸನ್ನು ಹಿಂಸಿಸುವುದು ಒಮ್ಮೊಮ್ಮೆ ಶಾರೀರಿಕವಾದ ಹಿಂಸೆಗಿಂತಲೂ ಭೀಕರವೆನಿಸ-ಬಹುದು. ತನ್ನ ಜೀವಕ್ಕಿರುವಷ್ಟೇ ಮಹತ್ವ ಅಥವಾ ಬದುಕುವ ಅಧಿಕಾರ ಬೇರೆ ಜೀವಗಳಿಗೂ ಇದೆ ಎಂಬ ತತ್ವವೇ ಅಹಿಂಸೆಗೆ ತಳಹದಿ.

## ೧೨. ನ ವೇದಬಾಹ್ಯೋ ಧರ್ಮಃ

ಭಾರತೀಯ ಪರಂಪರೆಯಲ್ಲಿ ವೇದಕ್ಕಿರುವಷ್ಟು ಮಹತ್ವದ ಸ್ಥಾನ ಬೇರಾವುದಕ್ಕೂ ಇಲ್ಲ. ಅವು ಮನುಷ್ಯ ರಚಿತವಾದವುಗಳಲ್ಲ. ತಪೋನಿಷ್ಠ-ರಾದ ಋಷಿಗಳಿಗೆ ಧ್ಯಾನಾವಸ್ಥೆಯಲ್ಲಿ, ನಿತ್ಯವಾಗಿರುವ ಈ ವೇದಗಳ ದರ್ಶನಮಾತ್ರವಾಯಿತು ಎಂಬುದು ಮೀಮಾಂಸಕರ ಅಭಿಪ್ರಾಯ. ವೇದ-ದಲ್ಲಿಯ ಯಾವ ಶಬ್ದವೂ ಅಪ್ರಮಾಣವಲ್ಲ ಎಂದು ಅವರು ಸಾರಿಹೇಳು-ತ್ತಾರೆ. ಯಜ್ಞಾದಿ ಕಾರ್ಯಗಳಲ್ಲಿ ಜರುಗುವ ಪಶುಹಿಂಸೆಯು ನಿಜವಾದ ಅರ್ಥದಲ್ಲಿ ಹಿಂಸೆಯೇ ಅಲ್ಲ. ಅದು ವೇದಮಾನ್ಯವಾದದ್ದು, ದೇವತೆ-ಗಳು ನಮಗೆ ದಯಪಾಲಿಸಿರುವ ಅತ್ಯುತ್ಕೃಷ್ಟವೆನಿಸುವ ವಸ್ತುಗಳನ್ನೇ ಅವ-ರಿಗೆ ಯಜ್ಞದ ಮುಖಾಂತರವಾಗಿ ಸಮರ್ಪಿಸುವುದು ಹಿಂಸೆಯಲ್ಲ ಎಂಬುದು

ಅವರ ಸಮರ್ಥನೆ. ಆದ್ದರಿಂದ ' ಅಹಿಂಸಾ ಲಕ್ಷಣೋ ಧರ್ಮಃ ' ಎನ್ನುವ ವಾಕ್ಯಕ್ಕೆ ' ನ ವೇದಬಾಹ್ಯೋ ಧರ್ಮಃ ' ಎಂಬಲ್ಲಿ ವಿರೋಧವಿಲ್ಲ ಎಂದು ಅವರು ಪ್ರತಿಪಾದಿಸುತ್ತಾರೆ. ಅದೇನೇ ಇರಲಿ, ಅಹಿಂಸೆ ಶಬ್ದಕ್ಕೆ ವ್ಯಾಖ್ಯಾನ ಮಾಡುವಾಗ ತಾತ್ಪರ್ಯಾರ್ಥವನ್ನು ತಿಳಿದುಕೊಳ್ಳುವುದು ಅವಶ್ಯ. ಯಾರಾ-ದರೂ ನಮ್ಮನ್ನು ಕೊಲೆಮಾಡಲು ಬಂದರೆ ಅದಕ್ಕೆ ಪ್ರತೀಕಾರ ಮಾಡದೆ ಅಹಿಂಸಾ ಪರಮೋ ಧರ್ಮಃ ಎಂದು ಕೈಕಟ್ಟಿಕೊಂಡು ಕುಳಿತುಕೊಳ್ಳು-ವುದು ಧರ್ಮವಲ್ಲ. ಶತ್ರುವು ಈ ರಾಜ್ಯದ ಮೇಲೆ ಆಕ್ರಮಣ ಮಾಡಿ-ದಾಗಲೂ ಅಹಿಂಸಾ ಮಂತ್ರವನ್ನು ಜಪಿಸುತ್ತ ಕುಳಿತರೆ ರಾಜ್ಯವು ಹಾಳಾ-ಗುತ್ತದೆ. ಇಂಥ ಪ್ರಸಂಗಗಳಲ್ಲಿ ' ಆತ್ಮರಕ್ಷಾ ಕರ್ತವ್ಯಾ ' ಎಂದು ತನ್ನನ್ನು ತಾನು ಸಂರಕ್ಷಿಸಿಕೊಳ್ಳಬೇಕು ಎಂಬ ವೇದವಾಕ್ಯವನ್ನು ಸ್ಮರಿಸಿ ಪ್ರತೀಕಾರ ಮಾಡುವುದು ಅವಶ್ಯ. ಹೀಗಾದಲ್ಲಿ ಮಾತ್ರ ಮೇಲಿನ ಎರಡೂ ಸೂತ್ರ-ಗಳಲ್ಲಿ ಸಮನ್ವಯವನ್ನು ಸಾಧಿಸಿದಂತಾಗುತ್ತದೆ. ಪ್ರತ್ಯಕ್ಷ ಹಾಗು ಅನು-ಮಾನ ಪ್ರಮಾಣಗಳಿಂದ ಯಾವುದನ್ನು ತಿಳಿಯಲು ಸಾಧ್ಯವಿಲ್ಲದೇ ಅದೆಲ್ಲ-ವನ್ನು ವೇದಾಧ್ಯಯನದಿಂದ ತಿಳಿಯಲು ಸಾಧ್ಯವೆಂಬ ಕಾರಣದಿಂದಾಗಿ ವೇದವು ಅಬಾಧಿತವಾದ ಪ್ರಮಾಣವೆನಿಸಿದೆ.

ಪ್ರತ್ಯಕ್ಷೇಣಾನುಮಿತ್ಯಾವಾ ಯಸ್ತೂಪಾಯೋ ನ ಬುಧ್ಯತೇ ।
ಏನಂ ವಿದಂತಿ ವೇದೇನ ತಸ್ಮಾತ್ ವೇದಸ್ಯ ವೇದತಾ ॥

ಎಂಬ ಉಕ್ತಿಯನ್ನು ಇಲ್ಲಿ ಸ್ಮರಿಸಬಹುದು.

## ೧೩. ಕದಾಚಿದಪಿ ಧರ್ಮಂ ನಿಷೇವೇತ

ಈ ಸೂತ್ರದಲ್ಲಿ ಕದಾಚಿತ್ ಶಬ್ದವು ' ಎಂಥ ಪರಿಸ್ಥಿತಿಯಲ್ಲಿಯೂ ' ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಆದ್ದರಿಂದ ಎಂಥ ದುರ್ಧರ ಪ್ರಸಂಗದಲ್ಲಿಯೂ ಧರ್ಮವನ್ನೇ ಆಶ್ರಯಿಸಬೇಕೆಂಬುದೇ ಇದರ ತಾತ್ಪರ್ಯ.

ಇಲ್ಲಿ ಮಹಾಭಾರತದಲ್ಲಿಯ ಸುಪ್ರಸಿದ್ಧ ಶ್ಲೋಕವೊಂದನ್ನು ನೆನಪಿಸಿಕೊಳ್ಳು-ವುದು ಯೋಗ್ಯ.

> ನ ಜಾತು ಕಾಮಾತ್ ನ ಭಯಾತ್ ನ ಲೋಭಾತ್ ಧರ್ಮಂ
> ತ್ಯಜೇತ್ ಜೀವಿತಸ್ಯಾಪಿ ಹೇತೋಃ ।
> ಧರ್ಮೋ ನಿತ್ಯಃ ಸುಖದುಃಖೇತ್ವನಿತ್ಯೇ ಜೀವೋ ನಿತ್ಯಃ
> ಹೇತುರಸ್ಯತ್ವ ನಿತ್ಯಃ ॥

ತಮ್ಮ ಕಾಮನೆಗಳ ತೃಪ್ತಿಗಾಗಿ, ಲೋಭದಿಂದಾಗಲಿ, ಭಯದಿಂದಾಗಲಿ, ಇಷ್ಟೇ ಅಲ್ಲ ಕೇವಲ ಪ್ರಾಣವನ್ನು ಉಳಿಸಿಕೊಳ್ಳುವುದಕ್ಕಾಗಿ [illegible]ರ್ಮ-ವನ್ನು ಬಿಡಬಾರದು. ಏಕೆಂದರೆ ಧರ್ಮವು ನಿತ್ಯವಾದದ್ದು. ಸುಖ-ದುಃಖ-ಗಳು ಅನಿತ್ಯವಾದವುಗಳು. ಇಂಥ ಅನಿತ್ಯ ವಸ್ತುಗಳ ಪ್ರಾಪ್ತಿಗಾಗಿ ನಿತ್ಯ-ವಾದುವಕ್ಕೆ ಎರವಾಗಬಾರದು. ಜೀವದ ಕಾರಣಗಳಾದ ಕರ್ಮಾದಿಗಳು ಅನಿತ್ಯವಾದರೂ 'Each man is potentially Divine' ಎಂಬ ತತ್ವಕ್ಕನುಗುಣವಾಗಿ ಜೀವವು ನಿತ್ಯವಾದದ್ದು. ಆದ್ದರಿಂದ ಎಂಥ ಪ್ರಸಂಗ-ದಲ್ಲಿಯೂ ಧರ್ಮವನ್ನು ಬಿಡಬಾರದು.

## ೧೪. ಧರ್ಮೇಣ ಧಾರ್ಯತೇ ಲೋಕಃ

ಈ ಲೋಕವು ಧರ್ಮದ ಆಧಾರದ ಮೇಲೆಯೇ ನಿಂತಿದೆ. ಮನುಷ್ಯ ದೇಹಕ್ಕೆ ಆಧಾರವಾದ ಕಾಲುಗಳು ಅಶಕ್ತವಾದಾಗ ದೇಹವು ಕುಪ್ಪಳಿಸಿ-ಬೀಳುವಂತೆ ಧರ್ಮ ಲೋಪವಾದರೆ ಈ ಲೋಕವು ಹಾಳಾಗಿಹೋಗುತ್ತದೆ. ಆದ್ದರಿಂದ ಈ ಲೋಕದ ಸಂರಕ್ಷಣೆ ಹಾಗು ಉದ್ಧಾರವಾಗಬೇಕಾದರೆ ಅದ-ರಲ್ಲಿಯ ಎಲ್ಲ ಜನರು ಧರ್ಮದಿಂದ ನಡೆದುಕೊಳ್ಳುವುದೊಂದೇ ಉಪಾಯ. ವಿಚಿತ್ರವೆಂದರೆ, ಅಧರ್ಮಾಚರಣೆಯು ಮನುಷ್ಯರಲ್ಲಿ ಕಂಡುಬರುವ ಪ್ರಮಾಣ ದಲ್ಲಿ ಪಶು-ಪಕ್ಷಿ-ಪ್ರಾಣಿಗಳಲ್ಲಿ ಕೂಡ ಕಂಡುಬರುವುದಿಲ್ಲ. ಧರ್ಮದ

ಆದೇಶಗಳನ್ನು ಪಾಲಿಸಿ ಆತ್ಮೋದ್ಧಾರ ಮಾಡಿಕೊಳ್ಳುವುದು ಇಲ್ಲವೇ ಅದನ್ನು ತಿರಸ್ಕರಿಸಿ ಅಧೋಗತಿಗೀಡಾಗುವುದು ಮನುಷ್ಯನ ಕೈಯಲ್ಲಿಯೇ ಇದೆ. ಅದಕ್ಕೇ ಗೀತೆಯಲ್ಲಿ 'ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್' ಎಂದು ಉಪದೇಶಿಸಲ್ಪಟ್ಟಿದೆ. ಆದರೆ ಕಲಿಯುಗದ ಪ್ರಭಾವವೋ ಏನೋ ಮನುಷ್ಯರ ಪ್ರವೃತ್ತಿಯು ಬೇರೆಯಾಗಿರುವುದು ಕಂಡುಬರುತ್ತದೆ.—

ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ ।
ನ ಪಾಪ ಫಲಮಿಚ್ಛಂತಿ ಪಾಪಂ ಕುರ್ವಂತಿ ಯತ್ನತಃ ॥

ಜನರಿಗೆ ಪುಣ್ಯದ ಫಲವು ಬೇಕು. ಆದರೆ ಪುಣ್ಯಕಾರ್ಯಗಳಲ್ಲಿ ಪ್ರವೃತ್ತಿ ಕಂಡುಬರುವುದಿಲ್ಲ. ಹಾಗೆಯೇ ಪಾಪದ ಫಲವು ಬೇಡವಾದರೂ ಪಾಪ-ಕರ್ಮಗಳಲ್ಲಿ ಪ್ರವೃತ್ತಿ ಬೆಳೆಯುತ್ತಲಿದೆ.

## ೧೫. ಪ್ರೇತಮಪಿ ಧರ್ಮಾಧರ್ಮಾವನುಗಚ್ಛತಃ

ಇಲ್ಲಿ ಧರ್ಮ ಹಾಗು ಅಧರ್ಮ ಶಬ್ದಗಳನ್ನು; ಅವುಗಳ ಫಲಗಳಾದ ಪುಣ್ಯ ಹಾಗು ಪಾಪವೆಂದು ಅರ್ಥಮಾಡಬೇಕಾಗುತ್ತದೆ. ಈ ಲೋಕದಲ್ಲಿ ಯಾವುದಕ್ಕೂ ಹೆದರದೆ ಸ್ವೇಚ್ಛಾಚಾರದಿಂದ ನಡೆದುಕೊಂಡರೆ ಮರಣಾನಂತರ ಈ ದೇಹವೇ ನಾಶವಾಗುವುದರಿಂದ ಪಾಪ ಪುಣ್ಯಗಳು ನಮಗೇನು ಮಾಡ-ಬಲ್ಲವು. ನಾವು ಅವುಗಳಿಂದ ಪಾರಾದಂತೆಯೇ ಎಂಬ ಭ್ರಮೆ ಯಾರಿ-ಗಾದರೂ ಇದ್ದರೆ ಅದನ್ನು ತಳ್ಳಿಹಾಕುವುದೇ ಈ ಸೂತ್ರದ ಉದ್ದೇಶ. ಮರಣಾನಂತರವೂ ಕೂಡ ಕರ್ಮದ ಫಲಗಳು ಮನುಷ್ಯರ ಬೆನ್ನುಬಿಡುವು-ದಿಲ್ಲ. ಜನ್ಮಾಂತರಗಳಲ್ಲಿಯಾದರೂ ಅವನ್ನು ಭೋಗಿಸಿಯೇ ತೀರಬೇಕಾಗು-ತ್ತದೆ ಎಂಬ ಅಭಿಪ್ರಾಯವು ಇಲ್ಲ ಗರ್ಭಿತವಾಗಿದೆ. ಇದೇ ವಿಷಯವನ್ನು ಅತ್ಯಂತ ಮಾರ್ಮಿಕವಾಗಿ ಚಿತ್ರಿಸುವ ಸುಭಾಷಿತ ಶ್ಲೋಕವೊಂದನ್ನು ಇಲ್ಲಿ ಸ್ಮರಿಸುವುದು ಅನುಚಿತವೆನಿಸಲಿಕ್ಕಿಲ್ಲ

ಧನಾನಿ ಭೂಮೌ ಪಶವಶ್ಚ ಗೋಷ್ಠೇ ಕಾಂತಾ
ಗೃಹದ್ವಾರಿ ಜನಾಃ ಸ್ಮಶಾನೇ ।
ದೇಹಶ್ಚಿತಾಯಾಂ ಪರಲೋಕಮಾರ್ಗೇ
ಕರ್ಮಾನುಗೋ ಗಚ್ಛತಿ ಜೀವ ಏಕಃ ॥

ಮರಣಾನಂತರ ಮೃತನ ಐಶ್ವರ್ಯವು ಭೂಲೋಕದಲ್ಲಿ, ಪಶುಗಳು ಹಕ್ಕೆಯಲ್ಲಿ ಉಳಿಯುವುವು. ಹೆಂಡತಿಯು ಮನೆಯ ಬಾಗಿಲ ವರೆಗೆ ಮಾತ್ರ ಹಿಂಬಾಲಿಸುವಳು. ಜನರು ಸ್ಮಶಾನದ ವರೆಗೆ ಬರುವರು. ದೇಹವು ಅಗ್ನಿಯ ಮೇಲೆಯೇ ಸುಟ್ಟುಹೋಗುತ್ತದೆ. ಕೇವಲ ಪುಣ್ಯ ಪಾಪಗಳು ಮಾತ್ರ ಜೀವನನ್ನು ಪರಲೋಕಕ್ಕೆ ಹಿಂಬಾಲಿಸುತ್ತವೆ—ಎಂದು ಹೇಳಿದ್ದು ಯಥಾರ್ಥವೇ. ಇಸ್ಲಾಂ ಹಾಗು ಕ್ರೈಸ್ತ ಧರ್ಮದಲ್ಲಿಯಂತೆ ಸನಾತನ ಧರ್ಮದಲ್ಲಿ ಶಾಶ್ವತ ಸ್ವರ್ಗ ಅಥವಾ ನರಕವಾಸವು ಹೇಳಲ್ಪಟ್ಟಿಲ್ಲ. ಪುನರ್ಜನ್ಮವನ್ನು ಪಡೆದು ಪುನಃ ಸಾಧನೆಯಿಂದ ಸದ್ಗತಿಯನ್ನು ಪಡೆಯಬಹುದು ಎಂದು ಬೋಧಿಸಲಾಗಿದೆ. ಆಶಾವಾದವು ನಮ್ಮ ಸನಾತನ ಹಿಂದೂ ಧರ್ಮದ ವೈಶಿಷ್ಟ್ಯ.

## ೧೬. ದಯಾ ಧರ್ಮಸ್ಯ ಜನ್ಮಭೂಮಿಃ

ಇನ್ನೊಬ್ಬರ ಸಂಕಟಗಳಲ್ಲಿ ಸಹಭಾಗಿಯಾಗುವುದೇ ದಯೆಯ ಲಕ್ಷಣ. ಆದ್ದರಿಂದ ದಯೆಯೇ ಧರ್ಮದ ಮೂಲವೆಂದು ಹೇಳಿದ್ದರಲ್ಲಿ ಅರ್ಥವಿದೆ. ದಯಾಹೀನನು ಸತ್ಕರ್ಮಗಳನ್ನು ಮಾಡಲಾರ, ಸ್ವಾರ್ಥಪ್ರೇರಿತನಾಗಿ ಹಾಗು ಅದರ ಸಾಧನೆಗಾಗಿ ಹಲವೊಂದು ಪ್ರಸಂಗಗಳಲ್ಲಿ ಅವನು ಎಂತಹ ಕ್ರೂರ ಕೃತ್ಯಗಳನ್ನು ಮಾಡಲೂ ಹೇಸಲಾರ. ಆದರೆ ದಯೆಯನ್ನು ಕೂಡ ಎಲ್ಲ ಪ್ರಸಂಗಗಳಲ್ಲಿ ಉಪಯೋಗಿಸಿದಲ್ಲಿ ಅನರ್ಥವಾಗುತ್ತದೆ. ನೀರಿನಿಂದ ಹೊರಬಂದ ಮೊಸಳೆಯನ್ನು ನೀರಿನಲ್ಲಿ ಬಿಟ್ಟು ದಯೆತೋರಿದವನನ್ನೇ ಅದು ತಿಂದಂತೆ, ಅಪಾತ್ರರಿಗೆ ದಯೆದೋರುವುದು ನಮ್ಮ ನಾಶಕ್ಕೆ ಕಾರಣ-

ವಾಗಬಹುದು. ದಯೆಯಿಲ್ಲದ ಧರ್ಮವು ಸದ್ಧರ್ಮವಲ್ಲ ಎಂದು ಹೇಳು-ವಾಗ ಧರ್ಮವಲ್ಲದ ದಯೆಯು ಅಷ್ಟೇ ಹಾನಿಕರವಾದದ್ದೆಂಬುದರ ಅರಿವು ನಮಗೆ ಇರಲೇಬೇಕು.

ಒಂದೇ ವಾಕ್ಯದಲ್ಲಿ ಧರ್ಮದ ಲಕ್ಷಣವನ್ನು ಹೇಳಹೊರಟು ' ಆತ್ಮಾನಿ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ ' ಎಂದು ಹೇಳಿದ್ದನ್ನು ಇಲ್ಲಿ ಸ್ಮರಿಸಿದರೆ ನಮಗೆ ಇನ್ನೊಬ್ಬರು ಹೊಡೆದರೆ ನೋವಾಗುವಾಗ, ನಾವೂ ಇನ್ನೊಬ್ಬರನ್ನು ಹೊಡೆಯಕೂಡದು; ಇದೇ ಧರ್ಮವೆಂದು ಉಪದೇಶಿ-ಸಿದ್ದು ದಯೆಯ ಮಹತ್ವವನ್ನು ಎತ್ತಿಹಿಡಿಯುತ್ತದೆ. ಅಹಿಂಸೆಯಲ್ಲಿ ಅಡಕ-ವಾಗಿದ್ದ ತತ್ವವೂ ಇದೇ ಎಂಬುದನ್ನು ತಿಳಿಯುವುದು ಅವಶ್ಯ.

## ೧೭. ಧರ್ಮಮೂಲೇ ಸತ್ಯದಾನೇ

ಮೇಲೆ ವಿವರಿಸಿದ ದಯಾಪ್ರೇರಿತವಾದ ಧರ್ಮದ ಆಚರಣೆಯಿಂದ ಮನುಷ್ಯನು ಸತ್ಯವಂತನಾಗುತ್ತಾನೆ. ಏಕೆಂದರೆ ಅವನಿಗೆ ತನ್ನಲ್ಲಿ ಸ್ವಾರ್ಥ-ವಿಲ್ಲ, ಕ್ರೌರ್ಯವಿಲ್ಲ, ತತ್ವನಿಷ್ಠೆ ಇದೆ ಎಂಬ ಅರಿವಾಗಿ ಯಾವಾಗಲೂ ನಿರ್ಭಯದಿಂದ ಸತ್ಯವನ್ನೇ ಆಶ್ರಯಿಸುತ್ತಾನೆ. ಭಯದ ಸೋಂಕೂ ಅವನಿಗೆ ಆಗುವುದಿಲ್ಲ. ಹಾಗೆಯೇ ನಿಸ್ವಾರ್ಥ ಭಾವನೆಯುಳ್ಳದ್ದರಿಂದ ಯೋಗ್ಯ ಪ್ರಸಂಗಗಳಲ್ಲಿ ದಯಾಭಾವನೆಯನ್ನು ಪ್ರಕಟಿಸುವಂತೆ ತನ್ನ ಯೋಗ್ಯತೆ-ಗನುಗುಣವಾಗಿ ದಾನ ( ತ್ಯಾಗ ) ವನ್ನೂ ಆಚರಿಸುತ್ತಾನೆ. ಇಲ್ಲಿ ಸತ್ಯ ಧರ್ಮ ಹಾಗು ದಾನ ಇವು ತ್ರಿಕೋಣದ ಮೂರು ಭುಜಗಳಿದ್ದಂತೆ ಎಂದು ತಿಳಿದರೆ, ಧರ್ಮವೇ ಅದರ ತಳ.

## ೧೮. ಧರ್ಮೇಣ ಜಯತೇ ಲೋಕಾನ್

ಮೇಲಿನ ಸೂತ್ರಗಳಲ್ಲಿ ವಿವರಿಸಿದ ಸದ್ಗುಣಸಂಪನ್ನನಾದವನಿಗೆ ಶತ್ರು-ಗಳೆನ್ನುವವರೇ ಉಳಿಯುವುದಿಲ್ಲ. ಕೆಲವರು ಅವನ ಅನುಯಾಯಿಗಳಾದರೆ,

ಉಳಿದವರು ಅವನನ್ನು ಆದರಿಸುತ್ತಾರೆ. ಹೀಗಾಗಿ ಲೋಕವೇ ಅವನಿಗೆ ಅನುಕೂಲವಾಗುತ್ತದೆ. ಅದೇ ಲೋಕಜಯವೆಂದು ಸೂತ್ರಕಾರನ ಅಭಿಪ್ರಾಯ.

## ೧೯. ಮೃತ್ಯುರಪಿ ಧರ್ಮಿಷ್ಠಂ ರಕ್ಷತಿ

ಧರ್ಮದಿಂದ ನಡೆದುಕೊಳ್ಳುವವನ್ನು ಮೃತ್ಯುವು ಕೂಡ ಸಂರಕ್ಷಿಸುತ್ತದೆ. ಇದರ ಅರ್ಥ ಅವನಿಗೆ ಮರಣವಿಲ್ಲವೆಂದಲ್ಲ, ಆದರೆ ಮನುಷ್ಯನ ಜೀವನದಲ್ಲಿ ಅಪಮೃತ್ಯುವಿಗೆ ಒಂದು ನೂರು ಅವಕಾಶಗಳಿವೆಯಂತೆ. ಅತ್ಯುತ್ಕಟವಾದ ಪಾಪಾಚರಣೆಯಿಂದ ಸಂಕಲ್ಪಿತ ಅವಧಿಗಿಂತ ಮೊದಲೇ ಬರುವ ಮೃತ್ಯುವು ಅಪಮೃತ್ಯುವೆಂದೆನಿಸಿಕೊಳ್ಳುತ್ತದೆ. ಜ್ಯೋತಿಷ್ಯಶಾಸ್ತ್ರದಲ್ಲಿ ಇಂಥ ಅಪಮೃತ್ಯುಗಳ ಸಂಭಾವ್ಯತೆಯ ಬಗೆಗೆ ವಿವರಣೆ ಬರುತ್ತದೆ. ಧರ್ಮಿಷ್ಠನು ಇಂಥ ಅಪಮೃತ್ಯುಗಳಿಂದ ಪಾರಾಗಬಲ್ಲನೆಂದು ಈ ಸೂತ್ರವು ಹೇಳುತ್ತದೆ. ಅಂದರೆ ಅವನಿಗೆ ಪೂರ್ಣಾಯುಷ್ಯವನ್ನು ಅನುಭವಿಸಲು ಅನುವು ದೊರೆಯುತ್ತದೆ. 'ಆಚಾರಾತ್ ಲಭತೇ ಹ್ಯಾಯುಃ' ಎಂದು ಮಹಾಭಾರತದಲ್ಲಿ ಭೀಷ್ಮಪಿತಾಮಹರು ಹೇಳಿದ್ದರ ಅರ್ಥವೂ ಇದೇ.

## ೨೦. ಧರ್ಮಾತ್ ವಿಪರೀತಂ ಪಾಪಂ ಯತ್ರ ಪ್ರಸಜ್ಯತೆ ತತ್ರ ಧರ್ಮಾವಮತಿರ್ಮಹತಿ ಪ್ರಸಜ್ಯತೆ

ಧರ್ಮಾಚರಣೆ ಎಂದರೆ ಪುಣ್ಯಕಾರ್ಯಗಳನ್ನು ಮಾಡುವುದು. ಆದ್ದರಿಂದ ಇದಕ್ಕೆ ವಿಪರೀತವಾದ ಪಾಪಾಚರಣೆಯು ಎಲ್ಲಿ ನಡೆಯುತ್ತದೆಯೋ ಅಲ್ಲಿ ಧರ್ಮಕ್ಕೆ ಘೋರ ಅನ್ಯಾಯವಾಗುತ್ತದೆ. ಇದರ ಪರಿಣಾಮ ಸರ್ವ-

ನಾಶವೆಂದು ಬೇರೆ ಹೇಳಬೇಕಾಗಿಲ್ಲ ಎನ್ನುವುದೇ ಸೂತ್ರಕಾರನ ಅಭಿ-ಪ್ರಾಯ.

## ೨೧. ಉಪಸ್ಥಿತ ವಿನಾಶಾನಾಂ ಪ್ರಕೃತ್ಯಾ ಕಾರ್ಯೇಣ ಲಕ್ಷ್ಯತೇ

ಯಾರದೇ ಆಗಲಿ ವಿನಾಶವು ಸಮೀಪಿಸಿದ್ದನ್ನು ಅವರ ಸ್ವಭಾವ ಹಾಗು ಕೃತಿಗಳ ಮೇಲಿಂದ ತಿಳಿದುಕೊಳ್ಳುವುದು ಸಾಧ್ಯ. ಮನುಷ್ಯನು ದುಷ್ಟ ವಿಚಾರಗಳು ಬರಹತ್ತಿ ಅವರಂತೆ ನಡೆದುಕೊಳ್ಳಲು ಆರಂಭಿಸಿದರೆ ಅವನ ವಿನಾಶವು ಸಮೀಪಿಸಿದೆ ಎಂದು ತಿಳಿದುಕೊಳ್ಳಬೇಕೆಂಬುದು ಈ ಸೂತ್ರದ ತಾತ್ಪರ್ಯ. ರಾವಣನಿಗೆ ಸೀತಾಪಹರಣದ ಬುದ್ಧಿ ಉತ್ಪನ್ನವಾಗಿ ಆ ದಿಶೆ-ಯಲ್ಲಿ ಮುನ್ನುಗ್ಗಿದ್ದು ಅವನ ವಿನಾಶವನ್ನು ಸೂಚಿಸಿತ್ತು. ದುರ್ಯೋ-ಧನನಿಗೆ ಪಾಂಡವರ ವಿಷಯಕ್ಕೆ ಉತ್ಪನ್ನವಾದ ದುರ್ಬುದ್ಧಿಯು ಅನೇಕ ಅನ್ಯಾಯಗಳಿಗೆ ಕಾರಣವಾಗಿ ಅವನು ಹಾಳಾಗಿಹೋದನು. ಇಂತಹ ಅದೆಷ್ಟೋ ಉದಾಹರಣೆಗಳು ಇತಿಹಾಸ, ಪುರಾಣಗಳಲ್ಲಿ ದೊರೆಯುತ್ತವೆ. ಆದರೆ ಹಲವು ಸಲ ದುಷ್ಟರು ಎಷ್ಟೇ ದುಷ್ಕರ್ಮಗಳನ್ನು ಮಾಡಿದರೂ ಇನ್ನೂ ಉಚ್ಛ್ರಾಯ ಸ್ಥಿತಿಯಲ್ಲಿ ಮೆರೆಯುತ್ತಿರುವುದನ್ನು ನೋಡಿ ಈ ವಿಷಯ-ದಲ್ಲಿ ಸಂದೇಹ ಉಂಟಾಗುವುದು ಸಹಜ. ಶಾಸ್ತ್ರವು ಇಂಥವರ ಸಂಚಿತ ಪುಣ್ಯವು ಇನ್ನೂ ಮುಗಿದಿರುವುದಿಲ್ಲವಾದ್ದರಿಂದ ಅವರು ಪಾಪಮಾಡಿದರೂ ಮೆರೆಯುತ್ತಾರೆ ಎಂದು ಸ್ಪಷ್ಟಪಡಿಸುತ್ತದೆ. ಪುಣ್ಯಕ್ಷಯವಾದ ನಂತರ ತತ್‌ಕ್ಷಣ ವಿನಾಶವು ಖಂಡಿತ ಎಂದು ಸಾರುತ್ತದೆ.

## ೨೨. ಆತ್ಮವಿನಾಶಂ ಸೂಚಯತ್ಯಧರ್ಮ ಬುದ್ಧಿಃ

ಮೇಲಿನ ಸೂತ್ರದಲ್ಲಿಯ ವಿಷಯವನ್ನೇ ನಿರ್ಣಯಾತ್ಮಕವಾಗಿ ಪ್ರಸ್ತುತ ಸೂತ್ರದಲ್ಲಿ ವ್ಯಕ್ತಪಡಿಸಲಾಗಿದೆ. ಅಧರ್ಮಬುದ್ಧಿ ಮನಸ್ಸಿನಲ್ಲಿ ಮೂಡಿ-

ವುದೇ ಸರ್ವನಾಶಕ್ಕೆ ನಾಂದಿ. ಇದನ್ನೇ ' ವಿನಾಶಕಾಲೇ ವಿಪರೀತ ಬುದ್ಧಿಃ ' ಎಂದು ಸುಭಾಷಿತವು ಸಾರಿಹೇಳುತ್ತದೆ. ತಾತ್ಪರ್ಯದಲ್ಲಿ ಮನುಷ್ಯರು ಹುಟ್ಟುವ ಮುನ್ನವೇ ದುಷ್ಟ ವಿಚಾರಗಳಿಗೆ ಎಡೆಗೊಡಕೂಡದು ಎಂದು ತಿಳಿದುಕೊಳ್ಳುವುದು ಅವಶ್ಯ.

## ೨೩. ವಿವಾದೇ ಧರ್ಮಮನುಸ್ಮರೇತ್

ವಿವಾದಗಳಲ್ಲಿ ಸಂಬಂಧಪಟ್ಟವರೆಲ್ಲ ಧರ್ಮವನ್ನು ಸ್ಮರಿಸಿಕೊಳ್ಳ-ಬೇಕು ಎಂದು ಈ ಸೂತ್ರವು ಹೇಳುತ್ತದೆ. ಇದನ್ನೇ ಬೇರೆ ಮಾತಿನಲ್ಲಿ ಹೇಳುವುದಾದರೆ ಧರ್ಮದ ಆಧಾರದ ಮೇಲೆಯೇ ವಿವಾದಗಳನ್ನು ಬಗೆ-ಹರಿಸಬೇಕು ಎಂದರ್ಥ. ಸಮಾಜದಲ್ಲಿ ವಿವಾದಗಳು ಸಂಭವಿಸಿದಾಗ ಹಲವು ಸಲ ಬಲದ ಆಧಾರದ ಮೇಲೆ, ಇನ್ನೂ ಕೆಲವು ಸಲ ಬಹುಮತದ ಆಧಾರದ ಮೇಲೆ ನಿರ್ಣಯಿಸುವುದನ್ನು ನಾವು ನೋಡುತ್ತೇವೆ. ಆದರೆ ಸೂತ್ರಕಾರನ ಅಭಿಪ್ರಾಯದಂತೆ ಧರ್ಮವೆಂದರೇನೇ ನ್ಯಾಯ. ಅದರ ಆಧಾರದ ಮೇಲೆಯೇ ವಿವಾದಗಳು. ವಾಜ್ಯಗಳು ನಿರ್ಣಯಿಸಲ್ಪಡಬೇಕು. ನಮ್ಮ ಸಂಸತ್ತಿನಲ್ಲಿ ಬಹುಮತದ ಬಲದಿಂದ ವಿಶಿಷ್ಟ ಕೋಮುಗಳ ಮತಗಳ ಆಸೆ-ಯಿಂದ ಅದೆಷ್ಟೋ ಸಲ ಧರ್ಮವನ್ನು ಬದಿಗಿಟ್ಟು ನಿರ್ಣಯಗಳನ್ನು ತೆಗೆದು-ಕೊಂಡದ್ದನ್ನು ಇಲ್ಲಿ ಸ್ಮರಿಸಬಹುದು.

## ೨೪. ವ್ಯವಹಾರಾನುಲೋಮೋ ಧರ್ಮಃ

ಚಾಣಕ್ಯನು ಸಂಪ್ರದಾಯಶರಣನಾದರೂ ಕಾಲಕ್ಕೆ ತಕ್ಕಂತೆ ಸಮಾಜ-ದಲ್ಲಿ ಬದಲಾವಣೆಗಳಾಗುತ್ತವೆ ಎಂಬುವನ್ನು ನಂಬಿದವನು. ಧರ್ಮದಲ್ಲ

ಕೂಡ ಸನಾತನ ಧರ್ಮ, ದೇಶ ಧರ್ಮ, ಕಾಲ ಧರ್ಮ ಎಂಬ ಅನೇಕ ಭೇದಗಳಿವೆ. ಒಂದು ಪ್ರಸಂಗದಲ್ಲಿ ಧರ್ಮವಾದುದು, ಇನ್ನೊಂದೆಡೆ ಅಧರ್ಮವೆನಿಸುತ್ತದೆ. ಹಿಂದಿನ ಯುಗದಲ್ಲಿ ನಿಪುತ್ರಿಕೆಯಾದ ಅಣ್ಣನ ವಿಧವೆಯಲ್ಲಿ ತಮ್ಮನು ಪುತ್ರೋತ್ಪತ್ತಿಯನ್ನು ಮಾಡುವುದು ನಿಯೋಗ-ಧರ್ಮವೆಂದೆನಿಸಿಕೊಳ್ಳುತ್ತಿತ್ತು. ಈಗ ಅದು ನಿಷಿದ್ಧ. ಇಸ್ಲಾಂ ಧರ್ಮ-ದಲ್ಲಿ ಯಾವುದು ವಿಹಿತವೋ ಅದು ನಮ್ಮ ಧರ್ಮದಲ್ಲಿ ನಿಷಿದ್ಧವೆನಿಸು-ವುದು. ಉದಾಹರಣೆಗಾಗಿ ಗೋವಧೆಯನ್ನು ತೆಗೆದುಕೊಳ್ಳಬಹುದು.

ಧರ್ಮವು ವ್ಯವಹಾರಕ್ಕೂ ವಿರುದ್ಧವಾಗಿರಬಾರದು ಎಂದು ಚಾಣ-ಕ್ಯನು ಈ ಸೂತ್ರದಲ್ಲಿ ಹೇಳುತ್ತಾನೆ. ಐತಿಹಾಸಿಕ ಹಾಗು ಸಾಮಾಜಿಕ ಬದ-ಲಾವಣೆಗಳಿಂದಾಗಿ ಧರ್ಮವು ಕಾಲಕ್ಕೆ ತಕ್ಕಂತೆ ಹೊಂದಿಕೊಂಡಿರಬೇಕೆಂಬುದೇ ಇದರ ತಾತ್ಪರ್ಯ. ಇದರಿಂದಾಗಿ ಕುರುಡುನಂಬಿಕೆಯಿಂದ ಪರಂಪರೆಯನ್ನು ನಂಬಲಾಗದೆಂದೂ, ಅಂಧಾನುಕರಣವೂ ಯೋಗ್ಯವಲ್ಲವೆಂದೂ ಸ್ಪಷ್ಟಪಡಿಸಿ-ದಂತಾಗುತ್ತದೆ. ವ್ಯವಹಾರವೆಂದರೆ ಇಲ್ಲಿ ಕಾನೂನು ಎಂದು ಅರ್ಥ, ದೇಶದ ಕಾಲಮಾನ, ಪರಿಸ್ಥಿತಿಗನುಸಾರವಾಗಿ ಕಾನೂನುಗಳು ಬದಲಾಗಬೇಕಾದದ್ದು ಅವಶ್ಯ. ಆದ್ದರಿಂದ ಸನಾತನ ಧರ್ಮದಲ್ಲಿ ಯಾವುದೇ ಅಂಶವು ಅನುಕರ-ಣಕ್ಕೆ ಅಯೋಗ್ಯವೆನಿಸಿದರೆ ಅಲ್ಲಿ ವ್ಯವಹಾರವು ಧರ್ಮಕ್ಕಿಂತ ಪ್ರಬಲ ಪ್ರಮಾಣವಾಗುತ್ತದೆಂಬುವುದೇ ಈ ಸೂತ್ರದ ಆಶಯ. ಇದಕ್ಕೂ ಮುಂದೆ ಹೋಗಿ ಅರ್ಥಶಾಸ್ತ್ರದಲ್ಲಿ,

> ಧರ್ಮಶ್ಚ ವ್ಯವಹಾರಶ್ಚ ಚರಿತ್ರಂ ರಾಜಶಾಸನಮ್ ।
> ವಿವಾದಾರ್ಥಶ್ಚತುಷ್ಪಾದಃ ಪಶ್ಚಿಮಃ ಪೂರ್ವಬಾಧಕಃ ॥

ಎಂದು ಹೇಳಲಾಗಿದೆ. ಇದರ ಪ್ರಕಾರ ನ್ಯಾಯದ ನಾಲ್ಕು ಸ್ತಂಭ-ಗಳಾದ—೧. ಸನಾತನ ಧರ್ಮ, ೨. ಅರ್ಥಶಾಸ್ತ್ರೋಕ್ತ ವ್ಯವಹಾರ, ೩. ಲೋಕಾಚಾರ, ೪. ರಾಜಶಾಸನ ಇವುಗಳಲ್ಲಿ ವಿಪರ್ಯಾಸ ಕಂಡು-ಬಂದರೆ ಉತ್ತರೋತ್ತರವಾಗಿ ಒಂದಕ್ಕಿಂತ ಮತ್ತೊಂದು ಬಲಿಷ್ಠ ಪ್ರಮಾಣ-ವಾಗುತ್ತವೆ ಎಂದು ಹೇಳಿದ್ದು ಚಾಣಕ್ಯನ ಕ್ರಾಂತಿದರ್ಶಿತ್ವವನ್ನು ಎತ್ತಿ-ತೋರಿಸುತ್ತದೆ.

## ೨೫. ಧರ್ಮಾದಪಿ ವ್ಯವಹಾರೋ ಗರೀಯಾನ್

ಮೇಲಿನ ಸೂತ್ರದ ವಿಷಯವನ್ನು ನಿರ್ಣಯಾತ್ಮಕವಾಗಿ ಪ್ರಸ್ತುತ ಸೂತ್ರದಲ್ಲಿ ಧರ್ಮಕ್ಕಿಂತ ವ್ಯವಹಾರವು ಶ್ರೇಷ್ಠ ಎಂದು ಪ್ರತಿಪಾದಿಸಲಾಗಿದೆ.

## ೨೬. ಸರ್ವಜ್ಞತಾ ಲೋಕಜ್ಞತಾ

ಮನುಷ್ಯನು ಕೇವಲ ಗ್ರಂಥಗಳನ್ನು ಓದಿದರೆ ಸರ್ವಜ್ಞನಾಗಲಾರ. ಲೋಕಾನುಭವವೂ ಅಷ್ಟೇ ಮಹತ್ವದ್ದಿರುತ್ತದೆ. ಗ್ರಂಥಾಭ್ಯಾಸದಿಂದ ಮಾತ್ರ ಪಂಡಿತನಾಗಿ ವ್ಯವಹಾರ ಜ್ಞಾನವಿಲ್ಲದಿದ್ದರೆ ಪಂಚತಂತ್ರದಲ್ಲಿ ಬರುವ ಮೂರ್ಖ ಪಂಡಿತರಂತೆ ಅವನ ಪಾಡಾಗುತ್ತದೆ. ಅದೆಷ್ಟೋ ರಾಜಕಾರಣಗಳು ಪಾಂಡಿತ್ಯವಿರದಿದ್ದರೂ ಕೇವಲ ವ್ಯವಹಾರಜ್ಞಾನದಿಂದ ಒಳ್ಳೆಯ ಆಡಳಿತಕಾರನೆನಿಸಿಕೊಂಡದನ್ನು ಇಲ್ಲಿ ಸ್ಮರಿಸಬಹುದು.

## ೨೭. ಶಾಸ್ತ್ರಜ್ಞೋಽಪಿ ಅಲೋಕಜ್ಞೋ ಮೂರ್ಖತುಲ್ಯಃ

ಮೇಲಿನ ಸೂತ್ರದಲ್ಲಿಯ ವಿಷಯವನ್ನೇ ಇಲ್ಲಿ ನಿರ್ಣಯಾತ್ಮಕವಾಗಿ, ಎಷ್ಟೇ ಶಾಸ್ತ್ರಜ್ಞನಿದ್ದರೂ ಲೋಕವ್ಯವಹಾರವಿಲ್ಲದವನು ಶುದ್ಧ ಮೂರ್ಖನೆಂದು ಹೇಳಲಾಗಿದೆ. ನ್ಯಾಯ, ವ್ಯಾಕರಣ, ವೇದಾಂತ, ಮೀಮಾಂಸಾದಿ ಶಾಸ್ತ್ರಗಳನ್ನೋದಿದವನಿಗೆ ಅನೇಕ ಪ್ರಸಂಗಗಳಲ್ಲಿ ವಿಭಿನ್ನ ಜನರೊಂದಿಗೆ ಹೇಗೆ ವ್ಯವಹರಿಸಬೇಕು ಎಂಬುದು ತಿಳಿದಿರಲಿಲ್ಲವಾದರೆ ಅಪಹಾಸ್ಯಕ್ಕೀಡಾಗುತ್ತಾನೆ.

## ೨೮. ಶಾಸ್ತ್ರಪ್ರಯೋಜನಂ ತತ್ತ್ವದರ್ಶನಮ್

ಧರ್ಮಶಾಸ್ತ್ರವೇ ಆಗಲಿ ಅಥವಾ ವ್ಯವಹಾರಶಾಸ್ತ್ರವೇ ಆಗಲಿ ಅಬಾಧಿತವಾದ ಯಥಾರ್ಥಜ್ಞಾನವನ್ನು ಬೋಧಿಸಬೇಕು ಎನ್ನುವುದು ಈ ಸೂತ್ರದ ಆಶಯ. ಅಗ್ನಿಯು ಉಷ್ಣವಾಗಿರುತ್ತದೆ ಎಂಬುದು ತ್ರಿಕಾಲಾಬಾಧಿತವಾದ ಸತ್ಯ. ಇಂಥ ಜ್ಞಾನಕ್ಕೆ ಸಮ್ಯಕ್‌ಜ್ಞಾನವೆನ್ನುವರು. ಶಾಸ್ತ್ರಗಳು ಇಂಥ ಜ್ಞಾನವನ್ನು ಬೋಧಿಸಬೇಕೇ ಹೊರತು ಜನರನ್ನು ದುರ್ಮಾರ್ಗಕ್ಕೆ ಎಳೆಯುವುದನ್ನು ಮಾಡಕೂಡದು.

ಶಾಸ್ತ್ರಗಳು ಸಪ್ರಮಾಣವಾಗಿ ಭಗವಸ್ತಿತ್ವವನ್ನು ಸಿದ್ಧಮಾಡಿದ್ದರೂ ನಾಸ್ತಿಕ ದರ್ಶನಗಳು ದುಸ್ತರ್ಕದ ಸಹಾಯದಿಂದ ಜನರನ್ನು ದಿಙ್ಮೂಢಗೊಳಿಸಿ ದುರ್ಮಾರ್ಗಕ್ಕೆಳೆಯುತ್ತವೆ ಎನ್ನುವುದು ಎಲ್ಲರಿಗೂ ಗೊತ್ತು. ಇದೂ ಅಲ್ಲದೆ ಹಲವು ಶಾಸ್ತ್ರಜ್ಞರು ತಮ್ಮ ಜ್ಞಾನವನ್ನು ತತ್ತ್ವಪ್ರತಿಪಾದನೆಗಿಂತ ಹೆಚ್ಚಾಗಿ ಉದರಭರಣಕ್ಕಾಗಿ ಅಥವಾ ವಾದದಲ್ಲಿ ಜಯಗಳಿಸುವುದಕ್ಕಾಗಿ ಉಪಯೋಗಿಸುವುದನ್ನು ನಾವು ನೋಡುತ್ತೇವೆ. ಹಾಗಾಗಬಾರದೆಂದು ಈ ಸೂತ್ರವು ಶಾಸ್ತ್ರದ ಮುಖ್ಯಪ್ರಯೋಜನವು ಯಥಾರ್ಥಜ್ಞಾನವನ್ನು ಬೋಧಿಸುವುದಾಗಿರಬೇಕೆಂದು ಪ್ರತಿಪಾದಿಸುತ್ತದೆ.

## ೨೯. ತತ್ತ್ವಜ್ಞಾನಂ ಕಾರ್ಯಮೇವ ಪ್ರಕಾಶಯತಿ

ತತ್ತ್ವಜ್ಞಾನವು ಯಥಾರ್ಥಜ್ಞಾನವನ್ನು ಬೋಧಿಸಿ ಜನರನ್ನು ಸತ್ಕಾರ್ಯ ಪ್ರವೃತ್ತರನ್ನಾಗಿ ಮಾಡುತ್ತದೆ ಎನ್ನುವುದೇ ಈ ಸೂತ್ರದ ಅಭಿಪ್ರಾಯ. 'ಕಾರ್ಯ' ಶಬ್ದಕ್ಕೆ ಇಲ್ಲಿ ಸತ್ಕಾರ್ಯವೆಂದೇ ಅರ್ಥ. ಇದನ್ನೇ ಬೇರೆ ರೀತಿಯಾಗಿ ಹೇಳುವುದಾದರೆ ಯಥಾರ್ಥಜ್ಞಾನವು ಮನುಷ್ಯರನ್ನು ಅಕಾರ್ಯ ಎಂದರೆ ದುಷ್ಕರ್ಮಪ್ರವೃತ್ತರನ್ನಾಗಿ ಮಾಡುವುದಿಲ್ಲ. ಎಂತಹ ಪ್ರಸಂಗಗಳಲ್ಲಿಯೂ ಅಕಾರ್ಯದಿಂದ ದೂರವಿರುವಷ್ಟು ಮನೋದಾರ್ಢ್ಯ ಅವರಿಗೆ ಸಮ್ಯಕ್‌ಜ್ಞಾನದಿಂದ ಲಭಿಸಿರುತ್ತದೆ.

## ೩೦. ವ್ಯವಹಾರೇ ಪಕ್ಷಪಾತೋ ನ ಕಾರ್ಯಃ

ಲೋಕದಲ್ಲಿಯ ಪ್ರತಿಯೊಂದು ವ್ಯವಹಾರದಲ್ಲಿ ಪಕ್ಷಪಾತವಿರಬಾರದು. ಏಕೆಂದರೆ ಅದು ಎಲ್ಲ ಅನ್ಯಾಯಗಳಿಗೆ ಮೂಲ. ವಿಶೇಷತಃ ನ್ಯಾಯದಾನವಂತಹ ಪ್ರಸಂಗಗಳಲ್ಲಿ ಕಾನೂನುಬದ್ಧವಾಗಿ ಪ್ರತಿಯೊಂದು ವ್ಯವಹಾರವು ನಿರ್ಣಯಿಸಲ್ಪಡಬೇಕೆಂಬುದೇ ಚಾಣಕ್ಯನ ಆಶಯ. ಈ ಮಾತನ್ನು ಅರ್ಥಶಾಸ್ತ್ರದಲ್ಲಿ,

ಏವಂ ಕಾರ್ಯಾಣಿ ಧರ್ಮಸ್ಥಾಃ ಕುರ್ಯುರಚ್ಛಲ ದರ್ಶಿನಃ ।
ಸಮಾಃ ಸರ್ವೇಷು ಭಾವೇಷು ವಿಶ್ವಾಸ್ಯಾ ಲೋಕಸಂಪ್ರಿಯಾಃ ॥

ಎಂದು ಹೇಳಿದ್ದಾನೆ. ಧರ್ಮಸ್ಥರೆಂದರೆ ನ್ಯಾಯಾಧೀಶರು ಲೋಭದಿಂದ, ಛಲ, ಮೋಸ ಇತ್ಯಾದಿಗಳಿಗೆ ಶರಣುಹೋಗದೆ ಎಲ್ಲರನ್ನು ಸಮತ್ವ ಭಾವದಿಂದ ನೋಡಿ ಪಕ್ಷಪಾತರಹಿತವಾದ ನಿರ್ಣಯವನ್ನು ಕೊಡಬೇಕು, ಅಂದರೇನೇ ಅವರು ಎಲ್ಲರ ವಿಶ್ವಾಸಕ್ಕೂ ಪಾತ್ರರಾಗಿ ಲೋಕದಲ್ಲಿ ಪ್ರಿಯರಾಗುತ್ತಾರೆ.

## ೩೧. ಆತ್ಮಾ ಹಿ ಸರ್ವ ವ್ಯವಹಾರಸ್ಯ ಸಾಕ್ಷೀ

ಚಾಣಕ್ಯನು ನಾಸ್ತಿಕನಲ್ಲವಾದ್ದರಿಂದ ಪ್ರತಿಯೊಬ್ಬರ ಶರೀರದಲ್ಲಿಯೂ ಜೀವರೂಪದಲ್ಲಿ ಆತ್ಮನ ಅಧಿಷ್ಠಾನವಿರುತ್ತದೆ ಎಂಬುದನ್ನು ನಂಬಿ, ಇಂಥ ಆತ್ಮನು ಎಲ್ಲ ವ್ಯವಹಾರಗಳಿಗೂ ಸಾಕ್ಷಿಯಾಗಿರುತ್ತಾನೆ ಎಂಬುದನ್ನು ಘೋಷಿಸುತ್ತಾನೆ. ನಾವು ಅನ್ಯಾಯ ಮಾಡಿದ್ದನ್ನು ಎಲ್ಲರಿಂದ ಬಚ್ಚಿಟ್ಟರೂ ಆತ್ಮನಿಂದ ಬಚ್ಚಿಡಲು ಸಾಧ್ಯವಿಲ್ಲ. ಏಕಾದಶಿಯ ದಿವಸ ನಾನು ನಿರಾಹಾರದಿಂದ ಇದ್ದೇನೆ ಎಂದು ಲೋಕಕ್ಕೆಲ್ಲ ಸಾರಿ ಅದನ್ನು ನಂಬುವಂತೆ ವಾತಾವರಣವನ್ನು ಕಲ್ಪಿಸಿದರೂ ಅಂಥವನು ಯಾರಿಗೂ ಗೊತ್ತಿಲ್ಲದೆ ಗುಪ್ತವಾಗಿ ಊಟಮಾಡಿದ್ದರೆ ಸಾಕ್ಷೀರೂಪನಾದ ಆತ್ಮನಿಗೆ

ಅದು ಗೊತ್ತೇ ಇರುತ್ತದೆ. ಇದನ್ನೇ 'ಮನುಷ್ಯನು ಯಾರನ್ನಾದರೂ ಮೋಸ-ಗೊಳಿಸಬಹುದು, ಆದರೆ ತನ್ನನ್ನು ತಾನೇ ಮೋಸಗೊಳಿಸುವುದು ಅಸಾಧ್ಯ' ಎಂದು ಬೇರೆ ಮಾತಿನಲ್ಲಿ ಹೇಳುತ್ತಾರೆ ಆದ್ದರಿಂದ ಲೋಕದಲ್ಲಿ ಧರ್ಮ, ವ್ಯವಹಾರ ಇವೆಲ್ಲವೂ ಆತ್ಮಸಾಕ್ಷಿಯಾಗಿ ನಡೆಯಬೇಕು.

## ೩೨. ಸರ್ವಸಾಕ್ಷಿಹ್ಯಾತ್ಮಾ

ಮೇಲಿನ ಸೂತ್ರದಲ್ಲಿಯ ವಿಚಾರವೇ ಸಿದ್ಧಾಂತರೂಪವಾಗಿ ಆತ್ಮನು ಸರ್ವಸಾಕ್ಷಿ ಎಂದು ಇಲ್ಲಿ ಹೇಳಲ್ಪಟ್ಟಿದೆ. ಇದರಲ್ಲಿ ಇನ್ನೂ ಒಂದು ಗೂಢ-ವಿದೆ. ಎಂತಹ ಅನ್ಯಾಯ ಜರುಗಿದರೂ ಅದರ ಲೇಪವು ಆತ್ಮನಿಗಿಲ್ಲ. ಅವನು ಕೇವಲ ಸಾಕ್ಷಿ ಮಾತ್ರ. ಸಾಕ್ಷೀದಾರನಿಗೆ ಹೇಗೆ ಶಿಕ್ಷೆ ಇಲ್ಲವೋ ಹಾಗೆಯೇ ಆತ್ಮನಿಗೂ ಇಲ್ಲ ನಿಜವಾಗಿಯೂ ಸಂಬಂಧವಿಲ್ಲದ್ದೆಲ್ಲ ಆತ್ಮನಿಗೆ ಜ್ಞಾನದಿಂದಾಗಿ ಸಂಬಂಧಿಸಿದೆ ಎಂಬ ಭ್ರಮೆಯುಂಟಾಗುತ್ತದೆ. 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂದು ಆತ್ಮನ ಸ್ವರೂಪವನ್ನು ಉಪನಿ-ಷತ್ಕಾರರು ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು. ದೇಹ, ಇಂದ್ರಿಯ ಹಾಗು ಮನಸ್ಸು ಇವುಗಳ ಸಂಬಂಧದಿಂದ ಆತ್ಮನಿಗೆ ಜೀವತ್ವವು ಬಂದು ಕರ್ಮ-ಬಂಧನಕ್ಕೆ ಈಡಾಗುವ ಪ್ರಸಂಗವು ಬರುತ್ತದೆ. ಈ ಬಂಧನಕ್ಕೆ ಅಜ್ಞಾನವೇ ಕಾರಣ ಎಂಬ ಅರಿವಾದಾಗ ಬಂಧನಗಳು ಕಳಚಿಹೋಗುತ್ತವೆ.

## ೩೩. ಅರ್ಥಮೂಲೌ ಧರ್ಮಕಾಮೌ

ಎರಡನೆಯ ಸೂತ್ರವನ್ನು ವಿವರಿಸುವಾಗ ಅರ್ಥವು ಕರ್ಮರೂಪೀ ವೃಕ್ಷದ ಬೇರು ಹಾಗು ಕಾಮವು ಅದರ ಫಲ ಎಂದು ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು. ಈ ಸೂತ್ರದಲ್ಲಿ ಇದನ್ನೇ ಪರ್ಯಾಯವಾಗಿ ಧರ್ಮ

ಕಾಮಗಳೆರಡೂ ಅರ್ಥದ ಆಧಾರದ ಮೇಲೆಯೇ ನಿಂತಿರುತ್ತವೆ ಎಂದು ಚಾಣಕ್ಯನು ಹೇಳುತ್ತಾನೆ. ಅವಶ್ಯವಿದ್ದಷ್ಟು ಕೂಡ ಹಣವಿರಲಿಲ್ಲವಾದಲ್ಲಿ ಧರ್ಮಾಚರಣೆಯು ಅಸಾಧ್ಯವೆಂಬ ಮಾತಿನಲ್ಲಿ ಹುರುಳಿಲ್ಲದಿಲ್ಲ. ಹಾಗೆಯೇ ಜೀವನದಲ್ಲಿ ಪಂಚೇಂದ್ರಿಯಗಳಿಂದ ಅನುಭವಿಸಬೇಕಾದ ಸುಖಗಳೆಲ್ಲವೂ ಅರ್ಥವಿದ್ದರೇನೇ ಸಾಧ್ಯ ಎಂಬ ಮಾತೂ ಕೂಡ ಅಬಾಧಿತವಾದ ಸತ್ಯ. ಚಾಣಕ್ಯನು ಅರ್ಥಶಾಸ್ತ್ರದಲ್ಲಿ ಧರ್ಮ, ಅರ್ಥ ಹಾಗು ಕಾಮಗಳಲ್ಲಿ ಅರ್ಥವೇ ಪ್ರಧಾನವಾದದ್ದು ಎಂದು ಹೇಳುತ್ತಾನೆ. ( ಅರ್ಥ ಏವ ಪ್ರಧಾನ ಇತಿ —ಕೌಟಿಲ್ಯ ).

ಆಪಸ್ತಂಭ ಋಷಿಗಳು ಮಾವಿನ ಮರವಿದ್ದಲ್ಲಿ ನೆರಳು ಹಾಗು ಪರಿಮಳ ತಾನೇ ತಾನಾಗಿ ದೊರೆಯುವಂತೆ ಧರ್ಮವನ್ನು ಅರ್ಥ, ಕಾಮಗಳು ಹಿಂಬಾಲಿಸುತ್ತವೆ ಎಂದು ಹೇಳಿ ಧರ್ಮವೇ ಪ್ರಧಾನ ಎಂದಿದ್ದಾರೆ. ತದ್ವಿರುದ್ಧವೆನ್ನುವಂತಿದೆ ಚಾಣಕ್ಯನ ಈ ಸಿದ್ಧಾಂತ. ಆದರೆ ಈ ವಿರೋಧಾಭಾಸದಲ್ಲಿ ಸಾಮರಸ್ಯವು ಸಾಧ್ಯವೆಂಬುದನ್ನು ಮರೆಯಲಾಗದು. ಲೌಕಿಕದಲ್ಲಿ ಹೇಗೆ ಅರ್ಥವು ಪ್ರಧಾನವೆನಿಸಬಹುದೋ ಹಾಗೆಯೇ ಪಾರಮಾರ್ಥಿಕ ದೃಷ್ಟಿಯಿಂದ ಧರ್ಮವು ಪ್ರಧಾನವಾದದ್ದು. ಭಾರತೀಯರು ಶ್ವೇತವರ್ಣೀಯರೋ ಅಥವಾ ಕೃಷ್ಣವರ್ಣೀಯರೋ ಎಂದು ಪ್ರಶ್ನಿಸಿದಾಗ ಆಂಗ್ಲರಿಗಿಂತಲೂ ಕಪ್ಪು ಹಾಗು ನಿಗ್ರೋಗಳಿಗಿಂತಲೂ ಬಿಳಿ ಎಂದು ಉತ್ತರಿಸಿದಂತಿದೆ ಈ ಸಿದ್ಧಾಂತ.

## ೩೪. ಅರ್ಥಮೂಲಂ ಕಾರ್ಯಮ್

ಯಾವುದೇ ಕಾರ್ಯವಾಗಲಿ ' ಅರ್ಥ ' ಎಂದರೆ ಹಣದಿಂದಲೇ ಸಾಧ್ಯ. ಇತರ ಸಾಧನ–ಸಾಹಿತ್ಯಗಳೆಲ್ಲ ತಾವೇ ತಾವಾಗಿ ಹಣವನ್ನು ಹಿಂಬಾಲಿಸಿ ಬರು-

ತ್ತವೆ. ಇದು ಎಲ್ಲರಿಗೂ ಸಾಮಾನ್ಯವಾಗಿ ಬರುವ ಅನುಭವ. ಅದಕ್ಕೆಂದೇ ಮುಂದಿನ ಸೂತ್ರದಲ್ಲಿ,

## ೩೫. ಯದಲ್ಪ ಪ್ರಯತ್ನಾತ್ ಕಾರ್ಯಸಿದ್ಧಿರ್ಭವತಿ

ಹಣವಿದ್ದರೆ ಅತ್ಯಲ್ಪ ಪ್ರಯತ್ನದಿಂದಲೇ ಸರ್ವಕಾರ್ಯಗಳು ಸಿದ್ಧಿಸುತ್ತವೆ ಎಂಬ ಸರ್ವವಿದಿತವಾದ ಸಿದ್ಧಾಂತವನ್ನು ಸೂತ್ರಕಾರನು ತಿಳಿಯಪಡಿಸುತ್ತಾನೆ.

## ೩೬. ವೃತ್ತಿಮೂಲಮರ್ಥಲಾಭಃ

ಹಣವು ಅನಾಯಾಸವಾಗಿ ದೊರೆಯುವುದು ದುರ್ಲಭ, ವೃತ್ತಿಯೇ ಅದರ ಮೂಲ. ' ವೃತ್ತಿ ' ಶಬ್ದಕ್ಕೆ ಇಲ್ಲಿ ಉದ್ಯೋಗ ಅಥವಾ ವ್ಯವಸಾಯವೆಂಬ ಅರ್ಥ. ವೈಯಕ್ತಿಕ ಜೀವನದ ವಿವಿಧ ಕ್ಷೇತ್ರಗಳಲ್ಲಿಯೇ ಆಗಲಿ ಅಥವಾ ರಾಜನೀತಿಯದಲ್ಲಿಯೇ ಆಗಲಿ ವ್ಯವಸಾಯ ಅಂದರೆ ಅರ್ಥಾತ್ ಉದ್ಯೋಗ, ಕೃತಿ, ಪ್ರಯತ್ನ ಇತ್ಯಾದಿಗಳ ಮೂಲಕವೇ ಧನಸಂಗ್ರಹವು ಸಾಧ್ಯವೆಂದು ಈ ಸೂತ್ರವು ಹೇಳುತ್ತದೆ. ವಾಸ್ತವಿಕವಾದಿಯಾದ ಚಾಣಕ್ಯನು ದೈವವಿದ್ದರೆ ಧನಲಾಭವಾಗುತ್ತದೆಂಬ ವಾದವನ್ನು ಇಲ್ಲಿ ಪುರಸ್ಕರಿಸಿಲ್ಲ.

## ೩೭. ಅರ್ಥಸಂಪತ್ ಪ್ರಕೃತಿಸಂಪದಂ ಕರೋತಿ

ಅರ್ಥಸಂಪತ್ತು ಎಂದರೆ ಧನದ ಸಮೃದ್ಧಿ ಇದ್ದ ದೇಶದಲ್ಲಿ ಪ್ರಕೃತಿ-

ಸಂಪತ್ತಿನ ಅಭಿವೃದ್ಧಿಗೆ ಆಸ್ಪದವಿರುತ್ತದೆ ಎಂದು ಪ್ರಸ್ತುತ ಸೂತ್ರವು ಹೇಳುತ್ತದೆ.

ರಾಜ್ಯದ ಪ್ರಕೃತಿಗಳು ಏಳು—೧. ಸ್ವಾಮಿ (ರಾಜ), ೨. ಅಮಾತ್ಯ ಅಥವಾ ಮಂತ್ರಿ, ೩. ಮಿತ್ರರಾಜರು, ೪. ರಾಷ್ಟ್ರ ಎಂದರೆ ದೇಶದ ನೆಲ, ನೀರು, ಜನತೆ ಇತ್ಯಾದಿ ಸಂಪತ್ತುಗಳು, ೫. ದುರ್ಗ ಅಥವಾ ಕೋಟೆ-ಕೊತ್ತಲಗಳು, ೬. ಬಲ ಅಂದರೆ ರಾಜ್ಯದ ಸೈನ್ಯಬಲ, ೭. ಕೋಶ ಅಥವಾ ಸರಕಾರದ ಉತ್ಪನ್ನ (ಹಣಕಾಸಿನ ಸ್ಥಿತಿ). ರಾಜ್ಯದ ಸಾಂಪತ್ತಿಕ ಸ್ಥಿತಿಯು ಚೆನ್ನಾಗಿದ್ದರೆ ಉಳಿದ ಪ್ರಕೃತಿಗಳು ಸುಸ್ಥಿತಿಯಲ್ಲಿರುವುದು ಸಾಧ್ಯ. ಎಲ್ಲದಕ್ಕೂ ಅರ್ಥವೇ ಮೂಲವೆಂಬ ಸಿದ್ಧಾಂತವನ್ನು ಚಾಣಕ್ಯನು ಇಲ್ಲಿ ಹೇಳಿದ್ದಾನೆ. ಒಳ್ಳೆಯ ಸಾಂಪತ್ತಿಕ ಸ್ಥಿತಿ ಇದ್ದ ದೇಶಕ್ಕೆ ಬುದ್ಧಿವಂತರಾದ ಸಚಿವರು ದೊರೆಯುವರು. ಅಂಥ ದೇಶದೊಂದಿಗೆ ಇತರ ರಾಜರು ಮಿತ್ರತ್ವವನ್ನು ಬಯಸುವುದೂ ಸಹಜ. ದೇಶದಲ್ಲಿ ನಾನಾ ಅಭಿವೃದ್ಧಿಪರ ಯೋಜನೆಗಳನ್ನು ರೂಪಿಸಿ, ಸರ್ವತೋಮುಖವಾದ ಅಭ್ಯುದಯವನ್ನು ಹೊಂದಬಹುದು. ಶ್ರೇಷ್ಠವಾದ ಸೈನ್ಯಬಲವನ್ನು ಸದಾಕಾಲವೂ ಸಜ್ಜಾಗಿ ಇಡುವುದೂ ಕೂಡ ಆರ್ಥಿಕ ಸುಸ್ಥಿತಿಯಿಂದಲೇ ಸಾಧ್ಯ. ಕೋಟೆ-ಕೊತ್ತಲಗಳನ್ನು ಹೊಸದಾಗಿ ನಿರ್ಮಿಸುವುದು ಹಾಗು ಇದ್ದವುಗಳನ್ನು ಸುಸ್ಥಿತಿಯಲ್ಲಿ ಕಾಯ್ದುಕೊಂಡು ಹೋಗುವುದಕ್ಕೂ ಕೂಡ ಹಣವೇ ಸಾಧನ. ಹೀಗೆ ದೇಶದ ಸರ್ವತೋಮುಖವಾದ ಅಭಿವೃದ್ಧಿಗೆ ಅವಶ್ಯವಿದ್ದ ಸಪ್ತಪ್ರಕೃತಿಗಳಿಗೆ ಸಂಪತ್ತೇ ಆಧಾರವೆಂದು ಇಲ್ಲಿ ಪ್ರತಿಪಾದಿಸಲಾಗಿದೆ.

## ೩೮. ಮತ್ಸ್ಯಾರ್ಥೀ ಇವ ಜಲಮುಪಯುಜ್ಯ ಅರ್ಥಂ ಗೃಹ್ಣೀಯಾತ್

ಮೀನುಗಾರನು ಜಲಾಶಯಗಳಿಂದ ಮೀನುಗಳನ್ನು ಹಿಡಿದು ತನ್ನ ಚರಿತಾರ್ಥವನ್ನು ಸಾಗಿಸುವಂತೆ, ರಾಜನು ತನ್ನ ಪ್ರಕೃತಿಗಳ ಸಹಾಯದಿಂದ

ಅನೇಕಾನೇಕ ಯೋಜನೆಗಳನ್ನು ರೂಪಿಸಿ ತನ್ನ ರಾಜ್ಯವನ್ನು ಸಮೃದ್ಧವಾಗಿಸ-ಬೇಕು ಎಂಬುದೇ ಈ ಸೂತ್ರದ ಅಭಿಪ್ರಾಯ.

## ೩೯. ಪ್ರಕೃತಿಸಂಪದಾಹ್ಯನಾಯಕಮಪಿ ರಾಜ್ಯಂ ನೀಯತೆ

ರಾಜ್ಯದ ಏಳು ಪ್ರಕೃತಿಗಳಲ್ಲಿ ಒಂದುವೇಳೆ ಕೆಲವೊಂದು ಸೀಮಿತ ಕಾಲಾವಧಿಯ ವರೆಗೆ ಸ್ವಾಮಿ ಎಂದರೆ ರಾಜನಿಲ್ಲದಿದ್ದರೂ ಉಳಿದ ಆರು ಪ್ರಕೃತಿಗಳು ರಾಜ್ಯಶಾಸನವನ್ನು ನಡೆಸಿಕೊಂಡು ಹೋಗುವುದು ಸಾಧ್ಯ-ವೆಂಬುದು ಈ ಸೂತ್ರದ ಅಭಿಪ್ರಾಯ. ಪೇಶವೆಯರ ಕಾಲಕ್ಕೆ ಹಾಗು ಇನ್ನೂ ಹಲವು ಸಂದರ್ಭಗಳಲ್ಲಿ ರಾಜನು ಚಿಕ್ಕವನಿರುವಾಗ ಉಳಿದ ರಾಜ್ಯಾಂಗಗಳು ಆದರಲ್ಲಿಯೂ ವಿಶೇಷವಾಗಿ ಸಮರ್ಥ ಹಾಗು ಸ್ವಾಮಿ-ನಿಷ್ಠ ಮಂತ್ರಿಗಳು ರಾಜನು ದೊಡ್ಡವನಾಗುವ ವರೆಗೆ ಆಡಳಿತವನ್ನು ಸಮರ್ಥವಾಗಿ ನಿರ್ವಹಿಸಿದ ಉದಾಹರಣೆಗಳು ದೊರೆಯುತ್ತವೆ. ಇಲ್ಲಿ ಅನಾಯಕ ಶಬ್ದಕ್ಕೆ ಯಾವಾಗಲೂ ರಾಜನು ಇರದೇ ಇದ್ದಾಗ ಎಂದು ಅರ್ಥಮಾಡಕೂಡದು. ಈ ಸೂತ್ರದಲ್ಲಿ ಹೇಳಿದ್ದು ತಾತ್ಕಾಲಿಕ ವ್ಯವಸ್ಥೆ ಮಾತ್ರ. ಏಕೆಂದರೆ ಅರ್ಥಶಾಸ್ತ್ರದಲ್ಲಿ, ಸಪ್ತಪ್ರಕೃತಿಗಳಲ್ಲಿ ರಾಜನಿಗೇ ಅಗ್ರ-ಸ್ಥಾನ. ಅವನು ಯೋಗ್ಯತಾಸಂಪನ್ನನಿದ್ದರೆ ಉಳಿದ ಪ್ರಕೃತಿಗಳು ತಾನೇ ತಾನಾಗಿ ಕೆಲಸ ಮಾಡುತ್ತವೆ ಎಂದು ಹೇಳಿದ್ದನ್ನು ಮರೆಯಕೂಡದು.

## ೪೦. ಪ್ರಕೃತಿ ಕೋಪಃ ಸರ್ವಕೋಪೇಭ್ಯೋ ಗರೀಯಾನ್

ಏಳು ಪ್ರಕೃತಿಗಳಲ್ಲಿ ಉಳಿದ ಆರು ಪ್ರಕೃತಿಗಳು ಕ್ಷೋಭಗೊಂಡು ರಾಜನಿಗೆ ಪ್ರತಿಕೂಲವಾದರೆ ರಾಜನು ಎಷ್ಟು ಸಮರ್ಥನಿದ್ದರೂ ತೊಂದರೆ-

ಗೀಡಾಗುತ್ತಾನೆ ಎನ್ನುವುದೇ ಇದರ ಮರ್ಮ. ಹೊರಗಿನ ಶತ್ರುಗಳಿಗಿಂತಲೂ ಆಂತರಿಕ ಶತ್ರುಗಳು ದೇಶವನ್ನು ಶೀಘ್ರವಾಗಿ ಹಾಳುಮಾಡುತ್ತವೆ ಎಂದು ಹೇಳುವುದು ಇದಕ್ಕಾಗಿಯೇ. ಎಲ್ಲ ಪ್ರಕೃತಿಗಳು ವ್ಯವಸ್ಥಿತವಾಗಿ ಕಾರ್ಯ ನಿರ್ವಹಿಸುವಾಗ ಪರಚಕ್ರಗಳು ದಾಳಿಮಾಡಿದರೆ ಐಕ್ಯದಿಂದ ಅದನ್ನು ಎದುರಿಸಬಹುದು. ಆದರೆ ಪ್ರಜೆಗಳು, ಮಂತ್ರಿಗಳು ಇಲ್ಲವೆ ಸೈನಿಕರು ತಿರುಗಿಬಿದ್ದರೆ ರಾಜ್ಯವು ಹಾಳಾಗುವುದರಲ್ಲಿ ಸಂಶಯವಿಲ್ಲ ಎನ್ನುವುದೇ ಇದರ ತಾತ್ಪರ್ಯ.

## ೪೧. ಅವಿನೀತ ಸ್ವಾಮಿ–ಲಾಭಾತ್ ಅಸ್ವಾಮಿ ಲಾಭಃ ಶ್ರೇಯಾನ್

ಅಯೋಗ್ಯನು ಎಂದರೆ ಅವಿನೀತನಾದ ರಾಜನಿರುವುದಕ್ಕಿಂತ ರಾಜನಿಲ್ಲದೆ ಇರುವುದೇ ಲೇಸು ಎಂದು ಪ್ರಕೃತ ಸೂತ್ರವು ಹೇಳುತ್ತದೆ. ಇದರ ಅರ್ಥ ರಾಜನ ಆವಶ್ಯಕತೆ ಇಲ್ಲವೆಂದಲ್ಲ. ಆದರೆ ಅಯೋಗ್ಯ ರಾಜನಿರುವುದು ದೇಶದ ದುರ್ದೈವವೆಂಬುದು. ಅರ್ಥಶಾಸ್ತ್ರವು ರಾಜನಲ್ಲಿ ಆಭಿಗಾಮಿಕ, ಪ್ರಾಜ್ಞ ಹಾಗು ಉತ್ಸಾಹ ಗುಣಗಳಿರಬೇಕೆಂಬುದು ಹೇಳುತ್ತದೆ. ಅಂದರೆ ಪ್ರಜೆಗಳು ರಾಜನಿಗೆ ಪ್ರತ್ಯಕ್ಷ ಭೇಟಿಯಾಗಲು ಅನುಕೂಲತೆಗಳಿರಬೇಕು. ರಾಜನು ಅವರ ದೂರುಗಳನ್ನು ಕೇಳಿಕೊಂಡು ಸಮಸ್ಯೆಗಳನ್ನು ಬಗೆಹರಿಸುವಷ್ಟು ಬುದ್ಧಿವಂತನೂ, ಉತ್ಸಾಹಿಯೂ ಇದ್ದು ಕಾರ್ಯತತ್ಪರನೂ ಆಗಿರಬೇಕೆಂಬುದು ಸೂತ್ರಕಾರನ ಅಭಿಪ್ರಾಯ.

## ೪೨. ಅರ್ಥವಾನ್ ಸರ್ವಲೋಕಸ್ಯ ಬಹುಮತಃ

ಸಾಂಪತ್ತಿಕ ಸ್ಥಿತಿಯನ್ನು ಸರಿಯಾಗಿ ಇಟ್ಟುಕೊಂಡ ರಾಜನು ಚೆನ್ನಾಗಿ ಆಡಳಿತವನ್ನು ನಡೆಸಿ ಪ್ರಜಾನುರಾಗಕ್ಕೆ ಪಾತ್ರನಾಗುತ್ತಾನೆ. ಆದ್ದರಿಂದ

ಹಿಂದಿನ ಸೂತ್ರಗಳಲ್ಲಿ ಹೇಳಿದಂತೆ ರಾಜ್ಯದ ಭದ್ರತೆಗೆ ಸಾಂಪತ್ತಿಕ ಸ್ಥಿತಿ ಹಾಗು ಸುರಿತ ಸೈನ್ಯಬಲ ಇವು ಮುಖ್ಯವಾದವುಗಳು. ಲೋಕದಲ್ಲಿ ಕೂಡ ಹಣವಿದ್ದವನಿಗೆ ಸಮಾಜದಲ್ಲಿ ಸ್ಥಾನ-ಮಾನಗಳು ದೊರೆಯುವುದನ್ನು ನೋಡಿದರೆ ವೈಯಕ್ತಿಕ ಜೀವನದಲ್ಲಿಯೂ ಹಣದ ಮಹತ್ತ್ವವು ಇದ್ದೇ ಇದೆ ಎಂಬುದನ್ನು ಈ ಸೂತ್ರವು ವ್ಯಾವಹಾರಿಕ ಮಟ್ಟದಲ್ಲಿ ತಿಳಿಯಪಡಿಸುತ್ತದೆ.

## ೪೩. ಅಮರವತ್ ಅರ್ಥಜಾತಂ ವರ್ಧಯೇತ್

ಸಾಮಾನ್ಯ ಮನುಷ್ಯರೇ ಆಗಲಿ, ರಾಜನೇ ಆಗಲಿ ಅರ್ಥಸಂಗ್ರಹದ ವಿಷಯದಲ್ಲಿ ನಿರುತ್ಸಾಹಿಗಳಾಗಿ ಇರದೆ ಅವ್ಯಾಹತವಾಗಿ ಸಂಪತ್ತನ್ನು ಬೆಳೆಸುವ ಪ್ರವೃತ್ತಿಯನ್ನು ಇಟ್ಟುಕೊಳ್ಳಬೇಕು ಎಂದು ಈ ಸೂತ್ರವು ಬೋಧಿಸುತ್ತದೆ. ಆದರೆ ಏನಕೇನ ಪ್ರಕಾರೇಣ ದುಡ್ಡು ಗಳಿಸುವುದೇ ಧರ್ಮ ಎಂದು ಮಾತ್ರ ಇಲ್ಲಿ ಅರ್ಥ ಮಾಡಕೂಡದು. ಅನ್ಯಾಯದಿಂದ ಗಳಿಸಿದ ಸಂಪತ್ತು ಮನುಷ್ಯನ ಕಲ್ಯಾಣವನ್ನು ಸಾಧಿಸಲಾರದು. ಈ ವಿಷಯದಲ್ಲಿರುವ ಪ್ರಸಿದ್ಧ ಸುಭಾಷಿತವೊಂದನ್ನು ಇಲ್ಲಿ ನೆನೆಯಬಹುದು.

> ಅಜರಾಮರವತ್ ಪ್ರಾಜ್ಞೋ ವಿದ್ಯಾಮರ್ಥಂಚ ಚಿಂತಯೇತ್ ।
> ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್ ॥

ಹಣವನ್ನು ಗಳಿಸುವ ವಿಷಯದಲ್ಲಿಯೇ ಆಗಲಿ, ವಿದ್ಯಾರ್ಜನೆಯ ವಿಷಯವಾಗಿಯೇ ಆಗಲಿ ಮನುಷ್ಯನು ತಾನು ಇಂದಿಲ್ಲ ನಾಳೆ ಸಾಯುವವನು ಅಥವಾ ಮುದುಕನಾಗಿದ್ದೇನೆ ಎಂದು ಬಗೆದು ನಿರಾಶಾವಾದವನ್ನವಲಂಬಿಸಿ ನಿಷ್ಕ್ರಿಯನಾಗಿರಬಾರದು. ನಾನು ಸಾಯುವುದೂ ಇಲ್ಲ, ಮುದುಕನವನೂ ಅಲ್ಲ ಎಂಬ ನಿರ್ಧಾರದಿಂದ ಯಾವಾಗಲೂ ಎರಡೂ ವಿಷಯಗಳಲ್ಲಿ ಕಾರ್ಯತತ್ಪರನಾಗಿರಬೇಕು ಎಂದು ಹೇಳಿದರೂ, ಅದೇ

ಉಸುರಿನಲ್ಲಿ ಅನ್ಯಾಯ ಮಾತ್ರ ಆಗಬಾರದು ಎಂದು ಹೇಳಲಾಗಿದೆ. ಸಾಕ್ಷಾತ್ ಮೃತ್ಯುದೇವತೆಯೇ ನಮ್ಮ ತಲೆಗೂದಲನ್ನು ಮುಷ್ಟಿಯಲ್ಲಿ ಹಿಡಿದು ಶಿರಚ್ಛೇದ ಮಾಡುವಾಗ ಹೇಗೆ ಧರ್ಮದ ನೆನಪಾಗುವುದೋ ಹಾಗೆಯೇ ಯಾವಾಗಲೂ ಧರ್ಮವನ್ನು ಸ್ಮರಿಸಿ ಹಣವನ್ನು ಸಂಪಾದಿಸಬೇಕು ಎಂದು ಎಚ್ಚರಿಸಲಾಗಿದೆ. ಆದ್ದರಿಂದ ತಾನು ಅಮರನೆಂದು ಬಗೆದು ಸಂಪದಭಿವೃದ್ಧಿಗೆ ಯತ್ನಿಸಬೇಕೆಂದು ಈ ಸೂತ್ರದಲ್ಲಿ ಹೇಳಿದ್ದರೂ ಅದನ್ನು ಸರಿಯಾಗಿ ತಿಳಿದುಕೊಳ್ಳುವುದು ಅವಶ್ಯ.

## ೪೪. ಮಹೇಂದ್ರಮಪ್ಯರ್ಥಹೀನಂ ನ ಮನ್ಯತೇ ಲೋಕಃ

ಚಾಣಕ್ಯನು ಅರ್ಥವೇ ಪ್ರಧಾನವೆಂಬ ತತ್ವದ ಪುರಸ್ಕರ್ತೃವಾಗಿ ಅರ್ಥಶಾಸ್ತ್ರವನ್ನು ಬರೆಯುತ್ತಿದ್ದುದರಿಂದ ಸಂಪತ್ತಿನ ಮಹತ್ವವನ್ನು ಅನೇಕ ರೀತಿಯಲ್ಲಿ ಹೇಳುತ್ತಲಿದ್ದಾನೆ. ಅದಕ್ಕೆಂದೇ ಪ್ರಸ್ತುತ ಸೂತ್ರದಲ್ಲಿ ದೇವೇಂದ್ರನು ಕೂಡ ಸಂಪತ್ತನ್ನು ಕಳೆದುಕೊಂಡರೆ ಯಾರೂ ಅವನಿಗೆ ಬೆಲೆ ಕೊಡಲಾರರು ಎಂದು ಅಲಂಕಾರಿಕವಾಗಿ ಪ್ರತಿಪಾದಿಸುತ್ತಾನೆ.

## ೪೫. ದಾರಿದ್ರ್ಯಂ ಖಲು ಪುರುಷಸ್ಯ ಜೀವಿತಂ ಮರಣಮ್

ದಾರಿದ್ರ್ಯವೆಂದರೆ ಹಣವಿಲ್ಲದಿರುವುದು ಮರಣಕ್ಕಿಂತಲೂ ಕೆಟ್ಟುದೆಂದು ಈ ಸೂತ್ರವು ತಿಳಿಯಪಡಿಸುತ್ತದೆ. ಮರಣಾನಂತರ ಅವನ ಮಟ್ಟಿಗೆ ಮನುಷ್ಯನ ಎಲ್ಲ ಚಿಂತೆಗಳು ಮುಕ್ತಾಯಗೊಳ್ಳುತ್ತವೆ. ಆದರೆ ದಾರಿದ್ರ್ಯ-

ದಿಂದ ಅವು ಹೆಚ್ಚಾಗುತ್ತವೆ. ಬಡತನವೆಂಬುದು ಬಹಳ ಕೆಟ್ಟ ಜನ್ಮ ಎಂಬ ಜಾನಪದ ಹಾಡನ್ನು ಇಲ್ಲಿ ನೆನೆಯಬಹುದು. 'ದಾರಿದ್ರ್ಯ ದೋಷೋ ಗುಣರಾಶಿ ನಾಶೀ' ಎಂದರೆ ದಾರಿದ್ರ್ಯವೆಂಬ ಒಂದೇ ಒಂದು ದೋಷವು ರಾಶಿ, ರಾಶಿ ಗುಣಗಳನ್ನು ನಾಶಮಾಡುತ್ತದೆ ಎಂದು ಸಾರುವ ಈ ಸುಭಾಷಿತವು ದರಿದ್ರನ ಕಷ್ಟಪರಂಪರೆಯನ್ನು ಸುಂದರವಾಗಿ ಚಿತ್ರಿಸುತ್ತದೆ.

## ೪೬. ವಿರೂಪೋಪ್ಯರ್ಥವಾನ್ ಸುರೂಪಃ

## ೪೭. ಅಕುಲೀನೋಪಿ ಧನೀ ಕುಲೀನಾತ್ ವಿಶಿಷ್ಟಃ

ಹಣವಿದ್ದವನು ಕುರೂಪಿಯಾಗಿದ್ದರೂ ಅಥವಾ ಹೀನಕುಲದಲ್ಲಿ ಜನಿಸಿದವನು ಇದ್ದರೂ ಕೂಡ ಕೇವಲ ಸಿರಿವಂತನೆಂಬ ಒಂದೇ ಒಂದು ಕಾರಣದಿಂದ ಎಲ್ಲರೂ ಅವನನ್ನು ಗೌರವಿಸುವುದನ್ನು ನಾವು ಎಲ್ಲೆಡೆಯಲ್ಲಿಯೂ ನೋಡುತ್ತೇವೆ. ಅದನ್ನೇ ಈ ಸೂತ್ರಗಳು ವಿರೂಪಿಯಾದರೂ ಅವನು ಸುರೂಪಿಯೇ, ಅಕುಲೀನನಾದರೂ ಕುಲೀನನೇ ಎಂದು ಅಲಂಕಾರಿಕವಾಗಿ ಹೇಳುತ್ತೇವೆ. ಈ ಸಂದರ್ಭದಲ್ಲಿ ಭರ್ತೃಹರಿಯ ನೀತಿಶತಕದಲ್ಲಿಯ ಶ್ಲೋಕವೊಂದು ನೆನಪಿಗೆ ಬರುತ್ತದೆ.

> ಯಸ್ಯಾಸ್ತಿ ವಿತ್ತಂ ಸ ನರಃ ಕುಲೀನಃ ಸ ಪಂಡಿತಃ
> ಸ ಶ್ರುತವಾನ್ ಗುಣಜ್ಞಃ ।
> ಸ ಏವ ವಕ್ತಾ ಸ ಚ ದರ್ಶನೀಯಃ ಸರ್ವೇ ಗುಣಾಃ
> ಕಾಂಚನಮಾಶ್ರಯಂತೇ ॥

ಎಲ್ಲ ಸದ್ಗುಣಗಳು ಹಣವನ್ನೇ ಆಶ್ರಯಿಸಿರುತ್ತವೆ. ಏಕೆಂದರೆ ಜನರು ಏನೇ ಆಗಲಿ ಹಣವಿದ್ದವರ ಕುಲವನ್ನು ನೋಡುವುದಿಲ್ಲ. ಅವನನ್ನು ಪಂಡಿತನಂತೆ ಗೌರವಿಸುತ್ತಾರೆ. ಬಲ್ಲವನೆಂದು ಬಗೆಯುತ್ತಾರೆ. ಸದ್ಗುಣಿ.

ಯೆಂದು ತಿಳಿಯುತ್ತಾರೆ. ಒಳ್ಳೆಯ ವಾಗ್ಮಿಯೆಂದೂ, ಘನವಾದ ವ್ಯಕ್ತಿತ್ವ-
ವುಳ್ಳ ಸುಂದರನೆಂದೂ ಬಗೆಸುತ್ತಾರೆ. ಇದಕ್ಕೆ ಮುಖ್ಯ ಕಾರಣ ಕೇವಲ
ಆವನ ಹಣ. ಸಮಾಜದಲ್ಲಿ ಹಣವೊಂದಿದ್ದರೆ ಸಾಕು. ರಾಜಕಾರಣ ಮೊದಲು
ಗೊಂಡು ಎಲ್ಲ ಕ್ಷೇತ್ರಗಳಲ್ಲಿಯೂ ಅವರಿಗೆ ತುಂಬಾ ಗೌರವ ದೊರೆಯುವು-
ದನ್ನು ನಾವು ನೋಡುತ್ತೇವೆ. ಇತ್ತಿತ್ತಲಾಗಿಯಂತೂ ಕಳ್ಳ ವ್ಯಾಪಾರಿ-
ಗಳು, ಅಮಲಿನ ಪದಾರ್ಥಗಳ ವ್ಯವಹಾರ ಮಾಡುವವರೆಲ್ಲ ಸನ್ಮಾನ್ಯ-
ರೆನಿಸಿಕೊಳ್ಳುತ್ತಿರುವ ಅನುಭವ ಯಾರಿಗಿಲ್ಲ ?

## ೪೮. ಆದಾತಾರಮಪ್ಯರ್ಥವಂತಂ ಅರ್ಥಿನೋ ನ ತ್ಯಜಂತಿ

ದುಡ್ಡಿನ ಮೋಹವು ಮನುಷ್ಯನಿಗೆ ಎಷ್ಟು ಪ್ರಮಾಣದಲ್ಲಿರುತ್ತದೆಂದರೆ
ಅತ್ಯಂತ ಜಿಪುಣನಾದ ಧನಿಯು ಕೂಡ ಇಂದಿಲ್ಲ ನಾಳೆ ಅಲ್ಪ ಸ್ವಲ್ಪ
ಹಣವನ್ನಾದರೂ ಕೊಟ್ಟಾನೆಂಬ ಆಸೆಯಿಂದ ಆವನ ಸೇವೆಯನ್ನು ಅಥವಾ
ಸ್ತುಖಸ್ತುತಿಯನ್ನು ಮಾಡಲು ಯಾರೂ ಹಿಂಜರಿಯುವುದಿಲ್ಲ. ಹೀಗಿವೆ
ಈ ಲೋಕದಲ್ಲಿ ಸಂಪತ್ತಿನ ಪ್ರಭಾವ.

## ೪೯. ಅಧನಸ್ಯ ಬುದ್ಧಿರ್ನ ವಿದ್ಯತೇ

ಹಣವಿಲ್ಲದವನಿಗೆ ಬುದ್ಧಿ ಇರುವುದಿಲ್ಲವೆಂದು ಈ ಸೂತ್ರವು ಹೇಳು-
ತ್ತದೆ. ಇದರ ತಾತ್ಪರ್ಯವೇನೆಂದರೆ, ದಾರಿದ್ರ್ಯದಿಂದ ಕಂಗಾಲಾದ ಮನು-
ಷ್ಯನು ಏನು ಮಾಡಬೇಕೆಂಬುದು ತಿಳಿಯದೆ ಮೂರ್ಖನಂತಾಗುತ್ತಾನೆ ಎಂಬು

ತಿಳಿಯಬಹುದು. ಹಾಗೆಯೇ ಎಷ್ಟೇ ಬುದ್ಧಿವಂತನಿದ್ದರೂ ದಾರಿದ್ರ್ಯಾವಸ್ಥೆಯಿಂದಾಗಿ ಸಮಾಜವು ಒಮ್ಮೊಮ್ಮೆ ಅವನು ಹೇಳಿದ ಬುದ್ಧಿವಾದವನ್ನು ಕೂಡ ಅರ್ಥಮಾಡಿಕೊಳ್ಳದೆ ಬುದ್ಧಿಹೀನನೆಂದು ಅವನ ಅಪಹಾಸ್ಯ ಮಾಡುತ್ತದೆ. ಇದನ್ನೇ ಹೆಚ್ಚು ಸ್ಪಷ್ಟವಾಗಿ ಮುಂದಿನ ಸೂತ್ರವು

## ೫೦. ಹಿತಮಪ್ಯಧನಸ್ಯ ವಾಕ್ಯಂ ನ ಗ್ರಹ್ಯತೇ

ಹಿತಕಾರಕವಾಗಿದ್ದರೂ ದರಿದ್ರನ ಮಾತಿಗೆ ಯಾರೂ ಬೆಲೆ ಕೊಡುವುದಿಲ್ಲ ಎಂದು ತೀರ್ಮಾನಿಸುತ್ತದೆ.

## ೫೧. ಅಧನಃ ಸ್ವಭಾರ್ಯಯಾ ಅಪ್ಯವಮನ್ಯತೇ

ದರಿದ್ರನನ್ನು ಸಮಾಜವಷ್ಟೇ ಕಡೆಗಣಿಸುವುದಿಲ್ಲ. ಅವನ ಹೆಂಡತಿಯೂ ಕೂಡ ಹಣವಿಲ್ಲದಾಗ ಅವನನ್ನು ಹೀಯಾಳಿಸಲು ಹಿಂದೆಮುಂದೆ ನೋಡುವುದಿಲ್ಲ - ಎಂಬುದು ಪ್ರಕೃತ ಸೂತ್ರದ ಅಭಿಪ್ರಾಯ.

ಹೀಗೆಂದಾಗ ಜಗತ್ತಿನಲ್ಲಿ ಪ್ರತಿಯೊಬ್ಬ ಸ್ತ್ರೀಯೂ ಹಣವಿದ್ದಾಗ ಮಾತ್ರ ಪತಿಯನ್ನು ಗೌರವಿಸುತ್ತಾಳೆ ಅವಳಲ್ಲಿ ಗಂಡನ ವಿಷಯಕ್ಕೆ ನಿಜವಾದ ಆದರ ಅಥವಾ ಪ್ರೇಮ ಎಂದೂ ಇರುವುದಿಲ್ಲವೆಂದಲ್ಲ. ಇತಿಹಾಸ, ಪುರಾಣಗಳಲ್ಲಿ ದ್ರೌಪದಿ. ದಮಯಂತಿ.. ಸೀತೆ ಇವರೆಲ್ಲರೂ ಎಂತಹ ಪರಿಸ್ಥಿತಿಯಲ್ಲಿಯೂ ತಮ್ಮ ಪತಿಸೇವೆಯನ್ನು ಬಿಡಲಿಲ್ಲವೆಂಬುದನ್ನು ಮರೆಯಲಾಗದು. ಆದರೆ ಇಂತಹ ಆದರ್ಶ ಸ್ತ್ರೀಯರು ಸಮಾಜದಲ್ಲಿ ಅಧಿಕ ಸಂಖ್ಯೆಯಲ್ಲಿ ದೊರೆಯುವುದು ಕಠಿಣ. ಆದ್ದರಿಂದ ಹಣವಿಲ್ಲದಾಗ ಗಂಡನಿಗೂ ಕೂಡ ಹೆಂಡತಿಯು ಬೆಲೆ ಕೊಡುವುದಿಲ್ಲ ಎಂದು ಬಹ್ವಂಶದಲ್ಲಿ ಸಮಾಜದಲ್ಲಿ ಉಂಟಾಗುವ ಪರಿಸ್ಥಿತಿಯನ್ನು ಇಲ್ಲಿ ವಿವರಿಸಲಾಗಿದೆ.

## ೫೨. ಪುಷ್ಪಹೀನಂ ಸಹಕಾರಮಪಿ ನೋಪಾಸತೇ ಭ್ರಮರಾಃ

ಮೇಲಿನ ಸೂತ್ರದಲ್ಲಿಯ ಸಿದ್ಧಾಂತಕ್ಕೆ ದೃಷ್ಟಾಂತರೂಪವಾಗಿ ಈ ಸೂತ್ರದಲ್ಲಿ ಹೂಬಿಡದ ಮಾವಿನ ಮರಗಳೆಡೆಗೆ ಭ್ರಮರಗಳು ಹೋಗುವು-ದಿಲ್ಲ, ಏಕೆಂದರೆ ಪರಿಮಳವಿದ್ದೆಡೆ ಮಾತ್ರ ಅವುಗಳ ಲಕ್ಷ್ಯವಿರುವುದರಿಂದ ಹೂವುಗಳಿಲ್ಲದ ಮಾವಿನ ಮರಗಳೆಡೆ ತಮಗೆ ಏನೂ ಲಾಭವಿಲ್ಲವೆಂದು ಅವು ಹೋಗುವ ಮನಸ್ಸು ಮಾಡುವುದಿಲ್ಲ ಎಂದು ಮಾರ್ಮಿಕವಾಗಿ ಹೇಳ-ಲ್ಪಟ್ಟಿದೆ.

## ೫೩. ವಿದ್ಯಾಧನಮಧನಾನಾಮ್

ಲೌಕಿಕವಲ್ಲಿ ಹಣಕ್ಕೆ ಇರುವ ಮಹತ್ವವನ್ನು ಹಾಗು ರಾಷ್ಟ್ರದ ಅಭಿ-ವೃದ್ಧಿಗಾಗಿ ಸಾಂಪತ್ತಿಕ ಪರಿಸ್ಥಿತಿಯು ಚೆನ್ನಾಗಿರಬೇಕೆಂಬುದನ್ನು ಬಿಂಬಿಸಿ ಚಾಣಕ್ಯನು ಪ್ರಸ್ತುತ ಸೂತ್ರದಲ್ಲಿ ವಿದ್ಯೆಗೆ ಇರುವ ಮಹತ್ವವನ್ನು ಹೇಳಲು ಹೊರಟಿದ್ದಾನೆ. ಇವರ ಅರ್ಥ ಹಣದ ಆವಶ್ಯಕತೆ ಜೀವನದಲ್ಲಿ ಎಷ್ಟೇ ಇರಲಿ ಅದೇ ಸರ್ವಸ್ವವಲ್ಲ. ಮನುಷ್ಯನು ಸಿರಿವಂತನಾಗಬೇಕಾದುದು ಇಷ್ಟ-ವಾದರೂ ಅವನು ಅವಿದ್ಯಾವಂತನಾಗಿದ್ದರೆ ಮೇಲೆ ಮೇಲೆ ಜನರು ಅವನಿಗೆ ಮರ್ಯಾದೆ ಕೊಟ್ಟಂತೆ ತೋರಿದರೂ ಹಿಂದೆ ಅಸಂಸ್ಕೃತನೆಂದು ತೆಗಳುತ್ತಾರೆಂಬುದು ಸರ್ವವೇದ್ಯವಾದ ವಿಷಯ. ಒಳ್ಳೆಯ ಸಂಸ್ಕೃತಿಯು ಬೆಳೆಯಬೇಕಾದರೆ ವಿದ್ಯಾಸಂಪಾದನೆಯ ಹೊರತಾಗಿ ಬೇರೆ ಮಾರ್ಗವಿಲ್ಲ. ಆದ್ದರಿಂದ ಈ ಸೂತ್ರವು ನಿರ್ಧನರಿಗೆ ವಿದ್ಯೆಯೇ ಧನವು ಎಂದು ಘೋಷಿ-ಸುತ್ತದೆ. ವಿದ್ಯೆ ಇದ್ದವನು ಬಡತನವಿದ್ದರೂ ಸರ್ವಮಾನ್ಯನಾಗುತ್ತಾನೆ ಎಂಬುದು ಎಲ್ಲರ ಅನುಭವಕ್ಕೆ ಬರುವ ಮಾತು. ರಾಜನು ತನ್ನ ದೇಶ-ದಲ್ಲಿ ಪೂಜ್ಯನಾಗಿದ್ದರೆ ವಿದ್ವಾಂಸನು ಎಲ್ಲೆಡೆಯಲ್ಲಿಯೂ ಪೂಜಿಸಲ್ಪಡು-

ತ್ತಾನೆಂಬ ಸುಭಾಷಿತವನ್ನು ಇಲ್ಲಿ ಸ್ಮರಿಸಬಹುದು. ( ಸ್ವದೇಶೇ ಪೂಜ್ಯತೇ ರಾಜಾ ವಿದ್ವಾನ್ ಸರ್ವತ್ರ ಪೂಜ್ಯತೇ ) ಇದರಿಂದ ವಿದ್ಯೆಯ ಶ್ರೇಷ್ಠತೆಯು ತಿಳಿದುಬರುತ್ತದೆ. ಪ್ರಾಚೀನ ಭಾರತದಲ್ಲಿ ಜ್ಞಾನಿಗಳಾದ ಋಷಿಗಳನ್ನು ರಾಜಮಹಾರಾಜರು ಪರಮಾದರದಿಂದ ಕಾಣುತ್ತಿದ್ದುದನ್ನು ಇಲ್ಲಿ ದೃಷ್ಟಾಂತಕ್ಕಾಗಿ ಸ್ಮರಿಸಬಹುದು.

## ೫೪. ವಿದ್ಯಾ ಚೋರೈರಪಿ ನ ಗ್ರಾಹ್ಯಾ

ಹಣವನ್ನು ಕಳ್ಳರು ಕದಿಯಬಹುದು. ಆದರೆ ವಿದ್ಯೆಯನ್ನು ಯಾರೂ ಕದಿಯಲು ಸಾಧ್ಯವಿಲ್ಲ. ಹಾಗೆಯೇ ವೆಚ್ಚಮಾಡಿದಂತೆಲ್ಲ ಹಣವು ತೀರುತ್ತ ಹೋಗುತ್ತದೆ. ಆದರೆ ವಿದ್ಯೆಯು ಪ್ರಸಾರಮಾಡಿದಂತೆಲ್ಲ ಬೆಳೆಯುತ್ತದೆ. ಹಣಕ್ಕಿಂತ ವಿದ್ಯೆಯು ಶ್ರೇಷ್ಠವಾದುದೆಂಬುದನ್ನು ಇದು ಎತ್ತಿತೋರಿಸುತ್ತದೆ. ಇಲ್ಲಿ ಬೋಧಪ್ರದವಾದ ಒಂದೆರಡು ಸುಭಾಷಿತಗಳನ್ನು ಉದಾಹರಿಸಬಹುದು.

ವಿದ್ಯಾನಾಮ ನರಸ್ಯ ರೂಪಮಧಿಕಂ ಪ್ರಚ್ಛನ್ನಗುಪ್ತಂ ಧನಮ್ ।
ವಿದ್ಯಾ ಭೋಗಕರೀ ಯಶಸ್ಸುಖಕರೀ ವಿದ್ಯಾ ಗುರೂಣಾಂ ಗುರುಃ ॥
ವಿದ್ಯಾ ಬಂಧುಜನೋ ವಿದೇಶಗಮನೇ ವಿದ್ಯಾ ಪರಾದೇವತಾ ।
ವಿದ್ಯಾ ರಾಜಸು ಪೂಜ್ಯತೇ ನ ಹಿ ಧನಂ ವಿದ್ಯಾವಿಹೀನಃ ಪಶುಃ ॥

ವಿದ್ಯಾವಂತರನ್ನು, ಮನ್ಮಥನಂತ ಅವರು ಸುಂದರವಾಗಿರದಿದ್ದರೂ ಕೇವಲ ನೋಡುವುದಕ್ಕಾಗಿ ಜನರು ಬರುತ್ತಾರೆ. ಇದು ವಿದ್ವತ್ತೇ ಅವರ ರೂಪವೆಂಬುದಕ್ಕೆ ಸಾಕ್ಷಿ. ವಿದ್ಯಾರೂಪೀ ಧನವು ಕಣ್ಣಿಗೆ ಕಾಣುವುದಿಲ್ಲವಾದ್ದರಿಂದ ಅದನ್ನು ಯಾರೂ ಅಪಹರಿಸಲಾರರು. ವಿದ್ಯೆಯು ಮನುಷ್ಯರಿಗೆ ಭೋಗ ಹಾಗು ಯಶಸ್ಸನ್ನು ತಂದುಕೊಟ್ಟು ಗುರುಗಳ ಗುರುವೆಂದು ಎನಿಸಿಕೊಳ್ಳುತ್ತದೆ. ಇಲ್ಲಿ ಗುರುಸ್ಥಾನದಲ್ಲಿರುವ ಸ್ವಾಮಿಗಳೂ ಕೂಡ ಧನ

ವಿದ್ವಾಂಸರಿಗೆ ಆಶ್ರಯಕೊಟ್ಟು ಅವರನ್ನು ಮನ್ನಿಸುತ್ತಿರುವುದನ್ನು ಸ್ಮರಿಸ-ಬಹುದು. ಪರಸ್ಥಳಕ್ಕೆ ಹೋದಾಗ ವಿದ್ಯಾಪ್ರಭಾವದಿಂದಲೇ ಅನೇಕರು ಅವರ ಬಾಂಧವ್ಯವನ್ನು ಬಯಸಿ ಮರ್ಯಾದೆಯನ್ನು ಕೊಡುತ್ತಾರೆ. ಹೀಗಾಗಿ ಅದು 'ಪರಾ' ಎಂದರೆ ಎಲ್ಲಕ್ಕೂ ಮಿಗಿಲಾದ ದೇವತೆ ಇದ್ದಂತೆ. ರಾಜರೂ ಕೂಡ ವಿದ್ಯೆಗೆ ಮಹತ್ತ್ವ ಕೊಡುವುದರಿಂದ ವಿದ್ಯಾಹೀನರು ಶುದ್ಧ ಪಶುಗಳಿದ್ದಂತೆ ಎಂದು ಹೇಳಲಾಗಿದೆ.

> ನ ಚೋರ ಹಾರ್ಯಂ ನ ಚ ರಾಜಹಾರ್ಯಂ
> ನ ಭ್ರಾತೃಭಾಜ್ಯಂ ನ ಚ ಭಾರಕಾರಿ ।
> ವ್ಯಯೇಕೃತೇ ವರ್ಧತ ಏವ ನಿತ್ಯಂ ವಿದ್ಯಾಧನಂ
> ಸರ್ವ ಧನ ಪ್ರಧಾನಮ್ ॥

ಕಳ್ಳರು ವಿದ್ಯೆಯನ್ನು ಕದಿಯರು. ರಾಜರು ಕೂಡ ಇದನ್ನು ಕರದ ರೂಪದಲ್ಲಿ ಹರಣ ಮಾಡಲಾರರು. ಅಣ್ಣ ತಮ್ಮಂದಿರು ಇವರಲ್ಲಿ ಪಾಲು ಕೇಳಲು ಸಾಧ್ಯವಿಲ್ಲ, ವಿದ್ಯೆಯು ಜಡವಸ್ತುವಿನಂತೆ ಭಾರವೆನಿಸುವುದಿಲ್ಲ, ಇನ್ನೊಬ್ಬರಿಗೆ ದಾನ ಮಾಡಿದಂತೆಲ್ಲ ಇದು ಬೆಳೆಯುತ್ತ ಹೋಗುವುದರಿಂದ ಎಲ್ಲ ಪ್ರಕಾರದ ಸಂಪತ್ತಿಗಿಂತಲೂ ಇದು ಮಿಗಿಲಾದದ್ದು ಎಂದು ಇಲ್ಲಿ ಸ್ಪಷ್ಟ-ಪಡಿಸಲಾಗಿದೆ.

## ೫೫. ವಿದ್ಯಯಾಖ್ಯಾಪಿತಾ ಖ್ಯಾತಿಃ

ಹಿಂದಿನ ಸೂತ್ರದಲ್ಲಿಯ ಚರ್ಚೆಯ ಆಧಾರದ ಮೇಲಿಂದ ವಿದ್ಯಾ-ವಂತನು ಕೀರ್ತಿವಂತನಾಗುತ್ತಾನೆಂಬ ಸಿದ್ಧಾಂತವನ್ನು ಈ ಸೂತ್ರವು ಪ್ರಸ್ತಾಪಿಸುತ್ತದೆ. ಆದರೆ ಇಂದಿನ ಯುಗದಲ್ಲಿ ವಿದ್ಯಾವಂತರಿಗಿಂತಲೂ ಕ್ರಿಕೆಟ್ ಪಟುಗಳು ಹಾಗು ಚಲಚ್ಚಿತ್ರ ತಾರೆಯರು ಹೆಚ್ಚು ಪ್ರಸಿದ್ಧಿ-ಯನ್ನು ಪಡೆಯುತ್ತಿರುವುದು ಸಂಸ್ಕೃತಿಯ ಅಧಃಪತನವನ್ನು ಸೂಚಿಸುತ್ತದೆ

ಎನ್ನಬಹುದೇ ? ಚಿಕ್ಕ ಚಿಕ್ಕ ಮಕ್ಕಳಿಗೂ, ಅಶಿಕ್ಷಿತರಾದ ಸ್ತ್ರೀಯರಿಗೂ ಕೂಡ ಈಗ ಚಲಚ್ಚಿತ್ರ ಹಾಗು ಕ್ರಿಕೆಟ್ ಆಟದಲ್ಲಿ ಎಷ್ಟು ಆಸಕ್ತಿ ಉಂಟಾಗಿದೆ ಎಂಬುದು ಟಿ. ವ್ಹಿ. ಇದ್ದವರ ಮನೆಗಳಲ್ಲಿ ನೋಡಬಹುದು. ಹೀಗಾಗಿ ವಿದ್ಯೆಗೆ ಇದ್ದ ಕೀರ್ತಿ ಅಳಿಸಿಹೋಗುತ್ತದೆ ಅಥವಾ ಕೃತಿಯಲ್ಲಿ ಇಳಿಯದೆ ತತ್ವರೂಪದಲ್ಲಿ ಮಾತ್ರ ಉಳಿದಿದೆ ಎನ್ನಬಹುದೆ ? ಆದರೂ ಇದು ಚಾಣಕ್ಯನ ಕಾಲದ ಸಂಸ್ಕೃತಿ ಎಂಬುದನ್ನು ನೆನಸಿಕೊಳ್ಳುವುದು ಅವಶ್ಯ.

## ೫೬. ಯಶಶ್ಶರೀರಂ ನ ವಿನಶ್ಯತಿ

ಪಂಚಭೂತಾತ್ಮಕವಾದ ನಮ್ಮ ಶರೀರಗಳು ನಾಶವಾದರೂ ಜೀವನದಲ್ಲಿ ಸಂಪಾದಿಸಿದ ಕೀರ್ತಿ ಮಾತ್ರ ಶಾಶ್ವತವಾಗಿ ಉಳಿಯುತ್ತದೆ. ಆದ್ದರಿಂದ ಕೀರ್ತಿಯನ್ನು ತರುವ ವಿದ್ಯೆಯು ಎಲ್ಲಕ್ಕೂ ಮಿಗಿಲಾದದ್ದು ಎಂಬುದು ಈ ಸೂತ್ರದ ಅಭಿಪ್ರಾಯ. ರಾಮಕೃಷ್ಣ ಪರಮಹಂಸ, ವಿವೇಕಾನಂದ, ಬುದ್ಧ, ಆಚಾರ್ಯ ಶಂಕರ, ಮಹಾತ್ಮಾ ಗಾಂಧಿ, ಸುಭಾಸಚಂದ್ರ ಬೋಸ್ ಇತ್ಯಾದಿ ಮಹಾಮಹಿಮರ ಜೀವನಗಳೇ ಇದಕ್ಕೆ ಸಾಕ್ಷಿ.

## ೫೭. ಸಂಪಾದ್ಯಾತ್ಮಾನಮನ್ವಿಚ್ಛೇತ್ ಸಹಾಯವಾನ್

ಧರ್ಮಕ್ಕೆ ಅರ್ಥ, ಅರ್ಥಕ್ಕೆ ರಾಜ್ಯವೇ ಮೂಲವೆಂದು ಆರಂಭಮಾಡಿದ ಈ ಚರ್ಚೆಯು ಧರ್ಮದ ಸ್ವರೂಪ, ವ್ಯವಹಾರದೊಂದಿಗೆ ಅದರ ಸಂಬಂಧ, ನಂತರ ಅರ್ಥದ ಮಹತ್ವ ಇತ್ಯಾದಿ ತಿಳಿಯಪಡಿಸಿ ಲೌಕಿಕದಲ್ಲಿ ಕೂಡ ಹಣದ ಮಹತ್ವವನ್ನು ಆನುಷಂಗಿಕವಾಗಿ ಚರ್ಚಿಸಿ ಹಣವಿಲ್ಲದವನಿಗೆ ವಿದ್ಯೆಯೇ ಹಣ, ಆದರಿಂದ ಶಾಶ್ವತವಾದ ಕೀರ್ತಿ—ಎಂದು ಚಾಣಕ್ಯನು

ಪ್ರಸ್ತಾಪಿಸಿದ್ದಾಯಿತು. ಪ್ರಕೃತ ಸೂತ್ರದಲ್ಲಿ ಎಂಟು, ಒಂಬತ್ತು, ಹತ್ತ-ನೆಯ ಸೂತ್ರಗಳಲ್ಲಿ ವರ್ಣಿಸಲಾದ 'ಸಂಪಾದಿತಾತ್ಮಾ' ಎಂದರೆವಿವೇಕಿ-ಯಾದ ರಾಜನು ತನ್ನ ಗುರಿಯನ್ನು ಮುಟ್ಟುವುದಕ್ಕಾಗಿ ಕೈಕೊಳ್ಳಬೇಕಾದ ಸಾಧನೆಗಳ ಚರ್ಚೆಯನ್ನು ಸೂತ್ರಕಾರನು ಆರಂಭಿಸುತ್ತಾನೆ.

ಜೀವನದ ಮೌಲ್ಯಗಳನ್ನು ಅರಿತುಕೊಂಡ ವಿವೇಕಿಯಾದ ರಾಜನು ಹಲವೆಡೆಗಳಿಂದ ಸಹಕಾರವನ್ನು ಪಡೆಯುವುದು ಅವಶ್ಯ. ಏಕೆಂದರೆ ಕೇವಲ ಒಂದು ಮನೆತನದ ವ್ಯವಹಾರವನ್ನು ಸರಿಯಾಗಿ ನೋಡಿಕೊಂಡು ಹೋಗ-ಬೇಕಾದರೆ ಯಜಮಾನನಿಗೆ ಅನೇಕರ ಸಹಾಯವು ಬೇಕಾಗುತ್ತದೆ. ಹೀಗಿರು-ವಾಗ ವಿಶಾಲವಾದ ಒಂದು ರಾಜ್ಯದ ವ್ಯವಸ್ಥೆಯನ್ನು ನಿರ್ವಹಿಸುವಲ್ಲಿ ಅದೆಷ್ಟೋ ತೆರನಾದ ಸಹಾಯ, ಸಹಕಾರಗಳು ಬೇಕಾಗುವುದು ಸಹಜ. ಆದ್ದ-ರಿಂದ ತನ್ನ ಸಹಾಯಕ್ಕೆಂದು ಯೋಗ್ಯರಾದ ಮಂತ್ರಿ, ದೂತ, ಗುಪ್ತಚಾರ ಹಾಗು ಆಡಳಿತಾಧಿಕಾರಿಗಳನ್ನು ನಿಯಮಿಸುವುದಕ್ಕಾಗಿ ಕ್ರಮಗಳನ್ನು ಕೈಕೊಳ್ಳಬೇಕೆಂಬುದನ್ನು ಇಲ್ಲಿ ಸೂಚಿಸಲಾಗಿದೆ.

## ೫೮. ನೈಕಂ ಚಕ್ರಂ ಪರಿಭ್ರಮತಿ

ಒಂದೇ ಗಾಲಿಯಿಂದ ರಥವು ಹೇಗೆ ನಡೆಯಲಾರದೋ ಹಾಗೆಯೇ ಮಂತ್ರಿಗಳ ಸಹಾಯವಿಲ್ಲದೆ ರಾಜನೊಬ್ಬನೇ ಆಡಳಿತವನ್ನು ನಡೆಸಲಾರ-ನೆಂಬುದನ್ನು ಈ ಸೂತ್ರವು ದೃಷ್ಟಾಂತ ಸಹಿತವಾಗಿ ವಿವರಿಸುತ್ತದೆ. ರಾಜ್ಯ-ಕಾರ್ಯವೆಂದರೆ ಅನೇಕ ಬಗೆಯವು ಹಾಗು ಅನೇಕ ಸ್ಥಳಗಳಿಗೆ ಸಂಬಂಧ-ಪಟ್ಟವುಗಳಾಗಿರುವುದರಿಂದ ಪ್ರತ್ಯಕ್ಷ ಹಾಗು ಪರೋಕ್ಷವಾಗಿ ಅವುಗಳ ನಿರ್ವ-ಹಣೆ ಆಗಬೇಕಾಗುತ್ತದೆ. ಹೀಗಾಗಿ ಅನೇಕ ಜನರ ಸಹಕಾರವು ಅವಶ್ಯ-ವೆಂಬುದೇ ತಾತ್ಪರ್ಯ.

## ೫೯. ನ ಅಸಹಾಯಸ್ಯ ಮಂತ್ರ ನಿಶ್ಚಯಃ

ಅಸಹಾಯ ಎಂದರೆ ಸಹಾಯ. ಸಹಕಾರಗಳಿಲ್ಲದ ರಾಜನ ಮಂತ್ರವು ಫಲಿಸದು. ಇಲ್ಲಿ ' ಮಂತ್ರ ' ಶಬ್ದಕ್ಕೆ ರಾಜನೀತಿ ಅಥವಾ ಗುಪ್ತ ಸಮಾ-ಲೋಚನೆ ಎಂದರ್ಥ. ರಾಜನು ಯಾವುದೇ ಮಹತ್ತ್ವದ ಕಾರ್ಯವನ್ನಾ-ರಂಭಿಸುವಾಗ ಮಂತ್ರಿಗಳೊಂದಿಗೆ ಗುಪ್ತವಾಗಿ ಆ ವಿಷಯದಲ್ಲಿ, ಎಂಥ ಯೋಜನೆಯನ್ನು ರೂಪಿಸಿ ಕಾರ್ಯಗತಗೊಳಿಬೇಕು ಎಂಬುದನ್ನು ಸಮಾ-ಲೋಚಿಸುತ್ತಾನೆ. ಮಂತ್ರಣವು ಐದು ಹಂತಗಳಲ್ಲಿ ನಡೆಯಬೇಕೆಂದು ಅರ್ಥ-ಶಾಸ್ತ್ರವು ಸೂಚಿಸುತ್ತದೆ. ೧. ಕಾರ್ಯಗಳನ್ನು ಆರಂಭಿಸಲು ಉಪಾಯ-ಗಳನ್ನು ಹುಡುಕುವುದು, ೨. ಕಾರ್ಯವನ್ನು ನೆರವೇರಿಸಲು ಅವಶ್ಯವಿದ್ದ ಜನಬಲ ಹಾಗು ಧನಬಲಗಳನ್ನು ಪರೀಕ್ಷಿಸಿ ನೋಡುವುದು. ೩. ಸರಿಯಾದ ವೇಳೆ ಹಾಗು ಸ್ಥಳಗಳಲ್ಲಿ ಕಾರ್ಯಾರಂಭ ಮಾಡುವುದು. ೪. ಕೈಕೊಂಡ ಕಾರ್ಯಗಳಲ್ಲಿ ಸಂಭವಿಸಬಹುದಾದ ತೊಂದರೆಗಳ ಬಗ್ಗೆ ಮೊದಲೇ ವಿಚಾರ-ಮಾಡಿ ಅವನ್ನು ಎದುರಿಸಲು ಉಪಾಯಗಳನ್ನು ಯೋಜಿಸುವುದು, ೫. ಕಾರ್ಯಸಿದ್ಧಿ—ಇವೇ ಮಂತ್ರಣದ ಐದು ಅಂಗಗಳು.

## ೬೦. ಸಹಾಯಃ ಸಮ ಸುಖ ದುಃಖಃ

ಮಂತ್ರಣ ಕಾರ್ಯದಲ್ಲಿ ಸಹಾಯವನ್ನು ನೀಡಬಹುದಾದ ಮಂತ್ರಿ ಹಾಗು ಅಧಿಕಾರಿ ವರ್ಗವು ಎಲ್ಲ ದೃಷ್ಟಿಯಿಂದಲೂ ಸ್ವಾಮಿನಿಷ್ಠವಾಗಿರ-ಬೇಕೆಂದು ಬೇರೆ ಹೇಳಬೇಕಾಗಿಲ್ಲ. ಅದನ್ನೇ ಈ ಸೂತ್ರವು ಸಹಾಯ ಮಾಡಬಹುದಾದ ಜನರು ಸಮ ಸುಖ-ದುಃಖಿರಾಗಿರಬೇಕು ಎಂದು ವಿವರಿಸು-ತ್ತದೆ. ಅಂದರೆ, ಅವರು ರಾಜನ ಸುಖದಲ್ಲಿ ತಮ್ಮ ಸುಖವನ್ನೂ ಅವನ ದುಃಖವನ್ನು ತಮ್ಮದೇ ದುಃಖವೆಂದೂ ತಿಳಿದು, ಆತ್ಮೀಯತೆ ಹಾಗು

ಸಾಮರಸ್ಯದಿಂದ ವ್ಯವಹರಿಸಬೇಕೆಂಬುದೇ ಆಶಯ. ಪರಸ್ಪರರಲ್ಲಿ ವೈಮನಸ್ಯ ಹಾಗು ವಿಶ್ವಾಸಘಾತ ಇವುಗಳಿಗೆ ಮಂತ್ರಣೆಯಲ್ಲಿ ಎಳ್ಳಷ್ಟೂ ಸ್ಥಾನವಿಲ್ಲ.

## ೬೧. ಮಾನೀ ಪ್ರತಿಮಾನಿನಂ ಆತ್ಮನಿ ದ್ವಿತೀಯಂ ಮಂತ್ರಮುತ್ಪಾದಯೇತ್

ಸ್ವಾಭಿಮಾನಿಯಾದ ರಾಜನು ತನ್ನಷ್ಟೇ ಸ್ವಾಭಿಮಾನಿಯಾದ ಮಂತ್ರಿಯ ಸಹಾಯದಿಂದ ರಾಜಕಾರಣದ ವಿಷಯವನ್ನು ಚರ್ಚಿಸತಕ್ಕದ್ದು. ಈ ಸೂತ್ರದ ವೈಶಿಷ್ಟ್ಯವೆಂದರೆ. ಕೇವಲ ಗುಲಾಮರಂತೆ ' ಜೀ ಹುಜೂರ್ ' ಎನ್ನುವ ಸ್ವಭಾವದವರನ್ನು ಮಂತ್ರಿಗಳನ್ನಾಗಿ ಮಾಡಬಾರದು ಎನ್ನುವುದು. ವಿಧೇಯರಾಗಿದ್ದರೂ ಸ್ವಾಭಿಮಾನಶೂನ್ಯರಾದ್ದರಿಂದ, ಕೇವಲ ರಾಜನಿಗೆ ಪ್ರಿಯರಾಗಿರಬೇಕೆಂಬ ಭಾವನೆಯಿಂದ ಇಂಥವರು ಕಠಿಣ ಪ್ರಸಂಗಗಳಲ್ಲಿ ಪ್ರಾಮಾಣಿಕ ಸಲಹೆಯನ್ನು ಕೊಡಲಾರರು. ಸ್ವಾಭಿಮಾನಿಯು ತತ್ವನಿಷ್ಠ-ನಾದುದರಿಂದ ರಾಜನ ಶ್ರೇಯಸ್ಸಿಗಾಗಿ ಅಪ್ರಿಯವೆನಿಸಬಹುದಾದರೂ ಯೋಗ್ಯ ಸಲಹೆಯನ್ನು ಕೊಡಬಲ್ಲನು. ಇದರಲ್ಲಿಯೆ ರಾಜನ ಕಲ್ಯಾಣ.

## ೬೨. ಅವಿನೀತಂ ಸ್ನೇಹಮಾತ್ರೇಣ ನ ಮಂತ್ರೇ ಕುರ್ವೀತ್

ಕೇವಲ ತನ್ನ ಸ್ನೇಹಿತನೆಂಬ ಕಾರಣದಿಂದ ಅವಿವೇಕಿಯೊಬ್ಬನನ್ನು ಮಂತ್ರಿಯನ್ನಾಗಿ ಮಾಡಬಾರದು. ತನ್ನ ಔದ್ಧತ್ಯದಿಂದ ಅವನು ಜನಾನು-ರಾಗವನ್ನು ಕಳೆದುಕೊಂಡು ರಾಜನಿಗೂ ಕೆಟ್ಟ ಹೆಸರು ತರುತ್ತಾನೆ. ತನ್ನ ಸ್ವಭಾವಕ್ಕನುಗುಣವಾಗಿ ಅಸಮಂಜಸವಾದ ಸಲಹೆಗಳನ್ನು ಕೊಡುತ್ತಾನೆ.

ಇದರಿಂದ ರಾಜನೀತಿಯು ಫಲಿಸದೇ ದೇಶದ ಪ್ರಗತಿಗೆ ಬಾಧಕವಾಗುತ್ತದೆ.

## ೬೩. ಶ್ರುತವಂತಂ ಉಪಧಾಶುದ್ಧಂ ಮಂತ್ರಿಣಂ ಕುರ್ವೀತ್

ರಾಜ್ಯಶಾಸ್ತ್ರದಲ್ಲಿ ಪರಿಣತನಾಗಿ ಜ್ಞಾನಿಯಾದವನನ್ನು ಹಾಗು 'ಉಪಧಾ' ಶುದ್ಧನನ್ನು ಮಂತ್ರಿಯನ್ನಾಗಿ ನಿಯಮಿಸಬೇಕು. ಉಪಧಾ ಶುದ್ಧಯೆಂದರೆ ಮಂತ್ರಿಪದಕ್ಕೆ ನಿಯಮಿಸಬೇಕಾದವನನ್ನು ಧರ್ಮ, ಅರ್ಥ ಹಾಗು ಕಾಮಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಅನೇಕ ಯುಕ್ತಿಗಳ ಮುಖಾಂತರವಾಗಿ ಬಲೆಯಲ್ಲಿ ಬೀಳುವಂತೆ ಪ್ರಯತ್ನ ಮಾಡಿದಾಗ. ಅಂಥವನು ಅದರಿಂದ ಪಾರಾದರೆ ಶುದ್ಧನೆಂದು ಬಗೆದು ಮಂತ್ರಿಪದಕ್ಕೆ ನಿಯಮಿಸುವುದು. ಉದಾಹರಣೆಗಾಗಿ, 'ರಾಜನು ಅಧರ್ಮದಿಂದ ಒಬ್ಬ ನೀಚನ ಪೌರೋಹಿತ್ಯ ಮಾಡುವಂತೆ ಹೇಳುತ್ತಾನೆ. ಅಯೋಗ್ಯರನ್ನು ಪುರಸ್ಕರಿಸಿ ಯೋಗ್ಯರಿಗೆ ಬೆಲೆ ಕೊಡುವುದಿಲ್ಲ. ರಾಣಿಯು ನಿನ್ನನ್ನು ಮೋಹಿಸುತ್ತಾಳೆ' ಇತ್ಯಾದಿ ಅನೇಕಾನೇಕ ಯುಕ್ತಿಗಳಿಂದ ಗುಪ್ತಚಾರರ ಮುಖಾಂತರ ಮಂತ್ರಿಪದ ಬಯಸುವವರನ್ನು ಪ್ರಲೋಭಿಸಲು ಪ್ರಯತ್ನಿಸುವುದೇ 'ಉಪಧಾ'.

ಮಂತ್ರಿಗಳನ್ನು ನಿಯಮಿಸುವ ವಿಧಾನವು ಅರ್ಥಶಾಸ್ತ್ರದಲ್ಲಿ ವಿವರವಾಗಿ ಚರ್ಚಿಸಲ್ಪಟ್ಟಿದೆ. ಅನೇಕಾನೇಕ ಋಷಿಗಳ ಅಭಿಪ್ರಾಯಗಳನ್ನು ವಿವರಿಸಿ ಕೊನೆಗೆ ಚಾಣಕ್ಯನು ರಾಜಕಾರ್ಯವನ್ನು ನಿರ್ವಹಿಸಲು ಸಮರ್ಥರಾದ ಸ್ವಾಮಿನಿಷ್ಠರನ್ನು ಮಾತ್ರ ಮಂತ್ರಿಗಳನ್ನಾಗಿ ನಿಯಮಿಸಬೇಕು ಎಂದು ತನ್ನ ಅಭಿಪ್ರಾಯವನ್ನು ಕೊಡುತ್ತಾನೆ. ಕೇವಲ ರಕ್ತಸಂಬಂಧ, ವಂಶ ಪಾರಂಪರ್ಯ, ಜಾತಿ, ಮತ, ಇಂಥವುಗಳನ್ನು ಲೆಕ್ಕಿಸದೆ ಗುಣ ಹಾಗು ಯೋಗ್ಯತೆಗೆ (Merit) ಮಹತ್ವ ಕೊಡಬೇಕೆಂಬುದೇ ಇವನ ಅಭಿಪ್ರಾಯ.

## ೬೪. ಮಂತ್ರಮೂಲಾಃ ಸರ್ವಾರಂಭಾಃ

ಯಾವುದೇ ಕಾರ್ಯವನ್ನು ಆರಂಭಿಸಬೇಕಾದಾಗ ಅದು ಮಂತ್ರ-ಮೂಲವಾಗಿರಬೇಕು ಅರ್ಥಾತ್ ಪೂರ್ವಾಪರ ಆಗು-ಹೋಗುಗಳನ್ನು ಲಕ್ಷ್ಯ-ದಲ್ಲಿಟ್ಟು, ಸಂಪೂರ್ಣ ವಿಚಾರಮಾಡಿ ಆರಂಭಿಸಬೇಕು. ಮಂತ್ರದ ಶಾಸ್ತ್ರೀಯವಾದ ವಿವೇಚನೆಯು ಇಂದಿನ ಸೂತ್ರದಲ್ಲಿ ಬಂದಿದೆ. ಸಂಪೂರ್ಣ ವಿಚಾರ ಮಾಡದೆ ಕೇವಲ ಸಿಟ್ಟಿನ ಭರದಲ್ಲಿ, ಮಾನಸಿಕ ಉದ್ವೇಗದಿಂದ ಅಥವಾ ಅವಾಸ್ತವ ಉತ್ಸಾಹದಿಂದ ಯಾವುದೇ ಕಾರ್ಯವನ್ನು ಆರಂಭಿಸಿದರೆ, ನಂತರ ಪಶ್ಚಾತ್ತಾಪಪಡುವ ಪರಿಸ್ಥಿತಿ ಬರುತ್ತದೆ. ಈ ಸಂದರ್ಭದಲ್ಲಿ ಮಹಾ ಕವಿ ಭಾರವಿಯ ಮಾತುಗಳನ್ನು ನೆನೆಯಬಹುದು.

> ಸಹಸಾ ವಿದಧೀತ ನ ಕ್ರಿಯಾಂ ಅವಿವೇಕಃ
> ಪರಮಾಪದಾಂ ಪದಮ್ ।
> ವೃಣುತೇ ಹಿ ವಿಮೃಶ್ಯಕಾರಿಣಂ ಗುಣಲುಬ್ಧಾಃ
> ಸ್ವಯಮೇವ ಸಂಪದಃ ॥

ಯಾವುದೇ ಕೆಲಸವನ್ನು ಅವಿವೇಕದಿಂದ ಒಮ್ಮೆಲೇ ಕೈಕೊಳ್ಳ-ಬಾರದು. ಅದು ಬಹಳ ಸಂಕಟಗಳಿಗೆ ಆಸ್ಪದಕೊಡುತ್ತದೆ. ಸಂಪತ್ತು, ಪೂರ್ಣ ವಿಚಾರಮಾಡಿ ಕಾರ್ಯಗಳನ್ನು ಕೈಕೊಳ್ಳುವವನನ್ನು ಹಿಂಬಾಲಿ-ಸುತ್ತದೆ.

## ೬೫. ಮಂತ್ರರಕ್ಷಣೇ ಕಾರ್ಯಸಿದ್ಧಿರ್ಭವತಿ

ಗುಪ್ತವಾಗಿ ರಾಜನೀತಿಯನ್ನು ಚರ್ಚಿಸುವ ಸ್ಥಾನವು ಎಲ್ಲ ದೃಷ್ಟಿ-ಯಿಂದ ಭದ್ರವೂ, ಗೌಪ್ಯವನ್ನು ಕಾಯಲು ಸಹಾಯಕವಾದದ್ದೂ ಇರಬೇಕು. ಅರ್ಥಾತ್ ಅದರ ಸುತ್ತಲು ಎಲ್ಲ ವಿಧಿಗೂ ಗೌಪ್ಯ ಸ್ಫೋಟವಾಗದಂತಹ ವ್ಯವಸ್ಥೆ ಇರಬೇಕು. ಪಕ್ಷಿಗಳಿಗೂ ಕೂಡ ಮಾತುಗಳನ್ನು ಕೇಳುವಂತಹ

ಅವಕಾಶ ಇರಬಾರದು. ಏಕೆಂದರೆ, ಶುಕಸಾರಿಕಾದಿ ಪಕ್ಷಿಗಳು, ನಾಯಿ ಮೊದಲಾದ ಪಶುಗಳು ಕೂಡ ಗುಪ್ತಮಂತ್ರಣೆಯ ವಿಷಯವನ್ನು ಶಬ್ದ ಹಾಗು ಸಂಜ್ಞಾದಿಗಳ ಮೂಲಕವಾಗಿ ಹೊರಗೆಡಹಬಹುದೆಂದು ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಮಂತ್ರಣೆಯ ಸಮಯದಲ್ಲಿ ಕರೆಯದೇ ಅಲ್ಲ ಹೋಗಲು ಯಾರಿಗೂ ಅವಕಾಶವಿರಬಾರದು.

## ೬೬. ಸರ್ವದ್ವಾರೇಭ್ಯೋ ಮಂತ್ರೋ ರಕ್ಷಿತವ್ಯಃ

ಮೇಲಿನ ಸೂತ್ರದಲ್ಲಿಯ ವಿಚಾರಗಳಂತೆ ಎಲ್ಲ ರೀತಿಯಿಂದಲೂ ಮಂತ್ರದ ಗೌಪ್ಯತೆಯನ್ನು ರಕ್ಷಿಸತಕ್ಕದ್ದೆಂದು ಈ ಸೂತ್ರವು ತಿಳಿಸುತ್ತದೆ. ಹಾಗೆಯೇ—

## ೬೭. ಶ್ರೇಷ್ಠತಮಾಂ ಮಂತ್ರಗುಪ್ತಿಮಾಹುಃ

ಮಂತ್ರವನ್ನು ಗುಪ್ತವಾಗಿ ಇಡುವುದೇ ಈ ವಿಷಯದಲ್ಲಿ ಎಲ್ಲಕ್ಕೂ ಶ್ರೇಷ್ಠವಾದದ್ದು. ಅರ್ಥಾತ್ ಗೌಪ್ಯವೇ ಮಂತ್ರ. ಮಂತ್ರವೇ ಗೌಪ್ಯ ಎಂದು ಅಲಂಕಾರಿಕವಾಗಿ ಹೇಳಬಹುದು.

## ೬೮. ಮಂತ್ರವಿನಾಶೋ ಕಾರ್ಯಂ ನಾಶಯತಿ

ಒಂದು ವೇಳೆ ಗೌಪ್ಯ ಸ್ಫೋಟವಾದರೆ ಕೈಕೊಂಡ ಕಾರ್ಯವು ಸರ್ವ-ನಾಶಕ್ಕೆ ಈಡಾಗುತ್ತದೆ. ಈ ವಿಷಯಕ್ಕೆ ಅರ್ಥಶಾಸ್ತ್ರದಲ್ಲಿ ಒಂದು ಸುಂದರ-ವಾದ ಉದಾಹರಣೆಯನ್ನು ಕೊಡಲಾಗಿದೆ. ಅದೇನೆಂದರೆ, ಗೌಪ್ಯ ಸ್ಫೋಟ-ವಾಗುವುದು ಹಾಗು ನಡುನೀರಿನಲ್ಲಿ ದೋಣಿ ಮುಳುಗುವುದು ಎರಡೂ ಒಂದೇ ಇದ್ದಂತೆ.

## ೬೯. ಪ್ರಮಾದಾತ್ ದ್ವಿಷತಾಂ ವಶಮುಪಯಾತಿ

ಮಂತ್ರಭೇದದ ದುಷ್ಪರಿಣಾಮವೆಂದರೆ, ರಾಜನು ವೈರಿಗಳ ವಶ-ನಾಗುವುದು. ತಾನು ಇನ್ನೊಂದು ರಾಜ್ಯದ ಮೇಲೆ ದಂಡೆತ್ತಿ ಹೋಗುವ ವಿಷಯದಲ್ಲಿ ಯೋಚಿಸಿದ ಮಂತ್ರಣೆಯು ಯಾವುದೇ ಕಾರಣದಿಂದ ಶತ್ರು-ವಿಗೆ ಮೊದಲೇ ತಿಳಿದರೆ ಅವನು ಪೂರ್ವಸಿದ್ಧತೆಯಿಂದ ಪರಚಕ್ರವನ್ನು ಎದುರಿಸುತ್ತಾನೆ. ಇದರಿಂದಾಗಿ ದಂಡೆತ್ತಿಹೋದವನಿಗೆ ಪರಾಜಯವು ಖಚಿತ ಎಂದು ಬೇರೆ ಹೇಳಬೇಕಾಗಿಲ್ಲ.

## ೭೦. ಮಂತ್ರಸಂಪದಾ ರಾಜ್ಯಂ ವರ್ತತೇ

ಗುಪ್ತತೆಯನ್ನು ರಕ್ಷಿಸಿಕೊಂಡು ಆರಂಭಿಸಿದ ರಾಜನ ಕಾರ್ಯವು ಫಲಿಸಿ ಅವನ ರಾಜ್ಯವು ದಿನದಿನಕ್ಕೆ ಬೆಳೆದು ಅಭ್ಯುದಯವನ್ನು ಹೊಂದುತ್ತದೆ. ರಘುವಂಶ ಮಹಾಕಾವ್ಯದಲ್ಲಿ ಕಾಲಿದಾಸನು ದಿಲೀಪರಾಜನ ಗುಪ್ತಮಂತ್ರ-ಣೆಯ ವಿಷಯದಲ್ಲಿ ಹೇಳಿದ ಶ್ಲೋಕವೊಂದನ್ನು ಇಲ್ಲಿ ಸ್ಮರಿಸುವುದು ಉಚಿತ-ವೆನಿಸೀತು.

ತಸ್ಯ ಸಂವೃತ ಮಂತ್ರಸ್ಯ ಗೂಢಾಕಾರೇಂಗಿತಸ್ಯ ಚ ।
ಫಲಾನುಮೇಯಾಃ ಪ್ರಾರಂಭಾಃ ಸಂಸ್ಕಾರಾಃ ಪ್ರಾಕ್ತನಾ ಇವ ॥

ದಿಲೀಪರಾಜನ ಮಂತ್ರದ ಗೌಪ್ಯತೆ ಹಾಗೆಯೇ ಅವನ ಕೃತಿ ಹಾಗು ಆಕೃತಿಗಳಲ್ಲಿ ಏನೂ ಬದಲಾವಣೆ ತೋರದಿರುವುದು. ಇದರಿಂದಾಗಿ ಅವನ ಯೋಜನೆಗಳು ಇತರರಿಗೆ ಅವು ಫಲಪ್ರದವಾದ ನಂತರವೇ ಗೊತ್ತಾಗು-ತ್ತಿದ್ದವು ಎಂದು ಅತಿ ಸುಂದರವಾಗಿ ವರ್ಣಿಸಲಾಗಿದೆ. ಇಂಥ ಮಂತ್ರ-ಶಕ್ತಿಯ ಬಲದಿಂದಲೇ ರಘುವಂಶದ ರಾಜರು 'ಆಸಮುದ್ರ ಕ್ಷಿತೀಶಾ-ನಾಮ್' ಎಂದರೆ ಚತುಃಸಮುದ್ರಗಳ ವರೆಗೆ ತಮ್ಮ ರಾಜ್ಯದ ಮೇರೆ-ಗಳನ್ನು ಅವರು ವಿಸ್ತರಿಸಿದರು.

## ೭೧. ಕಾರ್ಯಾಂಧಸ್ಯ ಪ್ರದೀಪೋ ಮಂತ್ರಃ

ಯಾವುದೇ ಕಾರ್ಯವನ್ನು ಕೈಕೊಂಡ ಮೇಲೆ ಅಸಂಖ್ಯ ಸಮಸ್ಯೆ-ಗಳು ಉತ್ಪನ್ನವಾಗಿ ಮುಂದೇನು ಮಾಡಬೇಕೆಂಬುದು ತಿಳಿಯದಾದಾಗ, ಅವನನ್ನು ಕಾರ್ಯಾಂಧನಾಗಿದ್ದಾನೆಂದು ವರ್ಣಿಸಬಹುದು. ಆಗ ಅವನು ಮುನ್ನಡೆಯಬೇಕಾದರೆ ಮಂತ್ರವೇ ಸಹಾಯಕವಾಗುವುದು. ಬುದ್ಧಿವಂತ-ರಾದ ಮಂತ್ರಿಗಳೊಡನೆ ಗುಪ್ತ ಸಮಾಲೋಚನೆ ಮಾಡಿ ಯಥಾರ್ಥ ಕ್ರಮ-ವನ್ನು ಕೈಕೊಳ್ಳಲು ಸಾಧ್ಯವಾಗುವುದೆಂದು ಕಾರ್ಯಾಂಧನಿಗೆ ಮಂತ್ರವು ಬೆಳಗುತ್ತಿರುವ ದೀಪವಿದ್ದಂತೆ ಎಂದು ಹೇಳಲಾಗಿದೆ. ಕತ್ತಲೆಯಲ್ಲಿ ಕಣ್ಣ-ದ್ದವನು ಕುರುಡನಾಗುವಂತೆ ಕಿಂಕರ್ತವ್ಯ ಮೂಢನಾಗಿ ರಾಜಕೀಯ ವಿಚಾರದಲ್ಲಿ ಏನೂ ಹೊಳೆಯದಿರುವಾಗ ಅಂತಹ ಕುರುಡುತನಕ್ಕೆ ಮಂತ್ರವೇ ದೀಪವೆಂದು ಪ್ರತಿಪಾದಿಸಲ್ಪಟ್ಟಿರುವುದು ಯಥಾರ್ಥವೇ.

## ೭೨. ಮಂತ್ರಚಕ್ಷುಷಾ ಪರಚ್ಛಿದ್ರಾಣ್ಯವಲೋಕಯತಿ

ಮಂತ್ರವೆಂಬ ಕಣ್ಣಿನಿಂದ ಶತ್ರುವಿನ ನ್ಯೂನತೆಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ಮಂತ್ರಣ ಕಾರ್ಯದಲ್ಲಿ ಮಂತ್ರಿಗಳ ಬುದ್ಧಿ ಹಾಗು ಗುಪ್ತಚಾರರಿಂದ ಬಂದ ಸಮಾಚಾರ ಇವುಗಳಿಂದಾಗಿ ರಾಜನಿಗೆ ತನ್ನ ಸಾಮರ್ಥ್ಯವೆಷ್ಟು, ಶತ್ರುವಿನ ಬಲವೆಷ್ಟು ಎಂಬುದನ್ನು ತಾರತಮ್ಯದಿಂದ ನೋಡಲು ಸಾಧ್ಯವಾಗುತ್ತದೆ. ಅಮೇರಿಕಾ, ರಶಿಯಾ, ಇಸ್ರೇಲ್ ಇತ್ಯಾದಿ ದೇಶಗಳ ಗುಪ್ತಚಾರರು ಸಮರ್ಥ ರೀತಿಯಿಂದ ಕಾರ್ಯನಿರ್ವಹಿಸುತ್ತಿರು-ವುದರಿಂದಾಗಿ ಶತ್ರುದೇಶಗಳಲ್ಲಿಯ ಆಗು-ಹೋಗುಗಳ ಯಥಾವತ್ತಾದ ಕಲ್ಪನೆ ಬರುತ್ತದೆ. ಇದರ ಆಧಾರದ ಮೇಲೆ ರಾಜನೀತಿಯನ್ನು ರೂಪಿಸಲು ಸಹಾಯವಾಗುತ್ತದೆ.

## ೭೩. ಮಂತ್ರಣೇ ನ ಮತ್ಸರಃ ಕರ್ತವ್ಯಃ

ಗುಪ್ತಸಮಾಲೋಚನೆಯ ಕಾಲದಲ್ಲಿ ಪರಸ್ಪರ ಮಾತ್ಸರ್ಯಭಾವವಿರಲಾಗದು. ಹಾಗಾದಲ್ಲಿ ಎಲ್ಲರೂ ಒಟ್ಟಾಗಿ ದೇಶದ ಕಲ್ಯಾಣವನ್ನು ಚಿಂತಿಸುವುದರ ಬದಲಾಗಿ ಒಬ್ಬರು ಇನ್ನೊಬ್ಬರನ್ನು ಪೇಚಿಗೆ ಸಿಕ್ಕಿಸುವುದನ್ನೇ ವಿಚಾರ ಮಾಡುತ್ತಾರೆ. ಆದ್ದರಿಂದ ಮಂತ್ರಣೆಯಲ್ಲಿ ಪಾಲ್ಗೊಳ್ಳುವ ಎಲ್ಲರಲ್ಲಿಯೂ ಎಲ್ಲ ದೃಷ್ಟಿಯಿಂದ ಏಕವಾಕ್ಯತೆಯಿರಬೇಕು.

## ೭೪. ತ್ರಯಾಣಾಂ ಏಕವಾಕ್ಯೇ ಸಂಪ್ರತ್ಯಯಃ

ಮಂತ್ರಣ ಕಾಲಕ್ಕೆ ಮೂವರ ಅಭಿಪ್ರಾಯವು ಒಂದಾದರೆ ಹಾಗೆ ಮುನ್ನಡೆಯಲು ಪ್ರತ್ಯಂತರವಿಲ್ಲವೆಂದು ಈ ಸೂತ್ರವು ಹೇಳುತ್ತದೆ. ಬಹಳಷ್ಟು ಜನರು ಮಂತ್ರಣೆಯಲ್ಲಿ ಪಾಲ್ಗೊಂಡರೆ ಗೌಪ್ಯ ಸ್ಫೋಟವಾಗುವ ಹೆದರಿಕೆ. ಇಬ್ಬರೇ ಇದ್ದಾಗ ಪರಸ್ಪರ ಏಕವಾಕ್ಯತೆ ಆಗದಿದ್ದರೆ ಕಠಿಣ. ಮೂವರಿದ್ದಾಗ ಇಬ್ಬರು ಕೂಡಿಕೊಂಡು ಬೇರೊಬ್ಬನ ಮೇಲೆ ತನ್ನ ಅಭಿಪ್ರಾಯವನ್ನು ಹೇರುವ ಹೆದರಿಕೆ ಹೆಚ್ಚು. ನಾಲ್ಕು ಜನರಿದ್ದಾಗ ಮೂವರಲ್ಲಿ ಏಕವಾಕ್ಯತೆ ಉಂಟಾಗಿ ಮುಂದಕ್ಕೆ ಸಾಗಲು ಅನುಕೂಲ ಎಂದು ಅರ್ಥಶಾಸ್ತ್ರವು ಉಪದೇಶಿಸುತ್ತದೆ.

ಬೇರೊಂದು ಸಂದರ್ಭದಲ್ಲಿ ಗುಪ್ತಚಾರರಲ್ಲಿ ಮೂವರಿಂದ ಒಂದೇ ತರನಾದ ಸಮಾಚಾರವು ಬಂದಲ್ಲಿ ಅವನ್ನು ನಂಬಲು ಅಡ್ಡಿಯಿಲ್ಲ ಎಂದು ಈ ಸೂತ್ರದ ಅರ್ಥಮಾಡಬಹುದು. ಏಕೆಂದರೆ ಅನೇಕ ಜನರನ್ನು ಗುಪ್ತಚಾರರೆಂದು ಒಂದು ದೇಶಕ್ಕೆ ಕಳಿಸಿದಾಗ ಎಲ್ಲರೂ ಬೇರೆ ಬೇರೆ ವರದಿಗಳನ್ನು ಕೊಟ್ಟರೆ ತೊಡಕುಂಟಾಗುವುದು ಸಹಜ. ಅಂತಹ ಪ್ರಸಂಗದಲ್ಲಿ ಮೂವರ ವರದಿಗಳಲ್ಲಿ ಐಕ್ಯಮತ್ಯವಿದ್ದರೆ ನಂಬಬಹುದೆಂದು ಇಲ್ಲಿ ಸೂಚಿಸಲಾಗಿದೆ.

## ೭೫. ಕಾರ್ಯಾಕಾರ್ಯ ತತ್ವಾರ್ಥದರ್ಶಿನೋ ಮಂತ್ರಿಣಃ

ಯಾವುದು ಕಾರ್ಯ, ಯಾವುದು ಅಕಾರ್ಯ ಎಂಬುದನ್ನು ಶಾಸ್ತ್ರ ಹಾಗು ಅನುಭವಗಳ ಆಧಾರದ ಮೇಲೆ ನಿರ್ಣಯಿಸುವ ಶಕ್ತಿ ಮಂತ್ರಿಗಳಿಗಿರಬೇಕಾದದ್ದು ಅವಶ್ಯ ಎಂಬ ಅರ್ಥವು ಈ ಸೂತ್ರದಲ್ಲಿ ಅಡಕವಾಗಿದೆ. ಮಂತ್ರಿಗಳು ಎಲ್ಲ ರೀತಿಯಿಂದಲೂ ಯೋಗ್ಯರಾಗಿದ್ದು ಕಾರ್ಯನಿರ್ವಹಣೆಯಲ್ಲಿ ಸಮರ್ಥರಾಗಿರಬೇಕೆಂಬ ವಿಷಯವು ಈ ಹಿಂದೆ ಬಂದಿದೆ. ಕೌಟಿಲ್ಯನ ಕಾಲಕ್ಕೆ ಗುಣ ಅರ್ಥಾತ್ ಯೋಗ್ಯತೆಗೆ ಬೆಲೆಯಿತ್ತು. ಜಾತಿಯ ಆಧಾರದ ಮೇಲೆ ಅಥವಾ ಪ್ರಾದೇಶಿಕವಾಗಿ ಮಂತ್ರಿಗಳನ್ನು ನೇಮಿಸುವುದಕ್ಕೆ ಆಗಲಿ ಅಥವಾ ಇಂದಿನ ಮೀಸಲಾತಿ ಪದ್ಧತಿಗೇ ಆಗಲಿ ಆಗ ಸಮ್ಮತಿ ಇರಲಿಲ್ಲ. ದೇಶದ ಕಲ್ಯಾಣವನ್ನು ಸಾಧಿಸಬಲ್ಲ ಸಮರ್ಥರೇ ರಾಜಕಾರ್ಯವನ್ನು ನಿರ್ವಹಿಸಬೇಕು ಎಂಬುದು ಅವನ ಅಭಿಪ್ರಾಯವಾಗಿತ್ತು.

## ೭೬. ಷಟ್ಕರ್ಣಾತ್ ಭಿದ್ಯತೇ ಮಂತ್ರಃ

ಆರು ಕಿವಿ ಎಂದರೆ ಮೂರು ಜನರು ಒಂದು ವಿಷಯವನ್ನು ಚರ್ಚಿಸಿದರೆ ಗೌಪ್ಯಸ್ಫೋಟದ ಸಾಧ್ಯತೆ ಹೆಚ್ಚು ಎಂದು ಈ ಸೂತ್ರವು ಹೇಳುತ್ತದೆ. ಇದೇ ಚಾಣಕ್ಯನು ಅರ್ಥಶಾಸ್ತ್ರದಲ್ಲಿ ಮೂರು-ನಾಲ್ಕು ಜನ ಮಂತ್ರಣೆಯಲ್ಲಿ ಪಾಲ್ಗೊಳ್ಳಬಹುದು ಎಂದು ಹೇಳಿದಾಗ ಪ್ರಸ್ತುತ ಸೂತ್ರವು ಅದಕ್ಕೆ ವಿರೋಧವಾಗಿದೆ ಎಂದು ಅನಿಸಬಹುದು. ಆದರೆ ನಿಜಕ್ಕೂ ಹಾಗಿಲ್ಲ. ಈ ಸೂತ್ರದ ತಾತ್ಪರ್ಯವೆಂದರೆ, ಹೆಚ್ಚು ಜನರು ಮಂತ್ರಣೆಯಲ್ಲಿ ಪಾಲ್ಗೊಳ್ಳುವುದರಿಂದ ಗೌಪ್ಯಸ್ಫೋಟವಾಗುವ ಭಯವೂ ಹೆಚ್ಚಾಗುವುದು ಎಂಬುದು ಮಾತ್ರ. ಆದರೆ ವಿಶ್ವಾಸಪಾತ್ರರಾದ ಮೂವರು ಮಂತ್ರಿಗಳಿದ್ದರೂ ಅವರಲ್ಲಿ ಏಕವಾಕ್ಯತೆ ಇದ್ದರೆ ಅವರೆಲ್ಲ ಕೂಡಿ ಒಬ್ಬರೇ ಇದ್ದಂತೆ. ಆದ್ದರಿಂದ

ಷಟ್ಕರ್ಣಕ್ಕೆ ಅಕ್ಷರಶಃ ಅರ್ಥಮಾಡದೆ ಭಿನ್ನಾಭಿಪ್ರಾಯವುಂಟಾದರೆ ಮೂವ-
ರಿಂದ ಮಂತ್ರಸ್ಫೋಟವಾಗುತ್ತದೆಂದು ತಿಳಿಯಬಹುದು. ಇಲ್ಲಿ ಸರ್ವಜ್ಞನ
ವಚನವೊಂದನ್ನು ನೆನೆಸಿಕೊಳ್ಳಬಹುದು.

> ಒಬ್ಬನರಿದರೆ ಸ್ವಾಂತ ಇಬ್ಬರೊಳು ಏಕಾಂತ
> ಒಬ್ಬರಿಂದೊಬ್ಬ ಬೇರೊಬ್ಬ ತಾನರಿದಿಹರೆ
> ಹಬ್ಬ ಲೋಕಾಂತ ಕೇಳೋ ಸರ್ವಜ್ಞ ॥

## ೭೭. ಆಪತ್ಸು ಸ್ನೇಹಸಂಯುಕ್ತಂ ಮಿತ್ರಮ್

ಆಂಗ್ಲ ಭಾಷೆಯಲ್ಲಿ 'A friend in need is a friend indeed' ಎಂದು ಹೇಳುವ ಮಾತನ್ನೇ ಪ್ರಸಕ್ತ ಸೂತ್ರವು ದೃಢಪಡಿಸು-
ತ್ತದೆ. ಸಂಕಟ ಸಮಯದಲ್ಲಿ ನೆರವಾಗುವವನೇ ಗೆಳೆಯನು. ನಮ್ಮ ಪರಿ-
ಸ್ಥಿತಿ ಚೆನ್ನಾಗಿದ್ದಾಗ ಅವರ ಲಾಭವನ್ನು ಪಡೆಯಲು ಅನೇಕರು ಮಿತ್ರತ್ವ-
ವನ್ನು ಬಯಸಿ ಬರಬಹುದು. ಅವರು ನಿಜವಾದ ಅರ್ಥದಲ್ಲಿ ನಮ್ಮ ಮಿತ್ರ-
ರಾಗಿರದೇ ನಮ್ಮ ಉಪಯೋಗವನ್ನು ತೆಗೆದುಕೊಳ್ಳುವವರು ಮಾತ್ರ.
(They just use others to serve their own interest) ಇಂಥವರಿಗೆ ಇಂಗ್ಲಿಷ್ ಭಾಷೆಯಲ್ಲಿ 'Fair weather friends' ಎಂದು
ಕರೆಯುತ್ತಾರೆ. ಲೌಕಿಕವಲ್ಲಿಯಂತೇ ರಾಜಕಾರಣದಲ್ಲಿಯೂ ಕೂಡ ಆಪ-
ತ್ಕಾಲವಲ್ಲಿ ನೆರವಾಗುವವನೇ ಮಿತ್ರನು ಎಂಬುದು ಚಾಣಕ್ಯನ ಅಭಿಪ್ರಾಯ.
ಅರ್ಥಶಾಸ್ತ್ರದಲ್ಲಿ ಮಿತ್ರಲಕ್ಷಣವನ್ನು 'ಪಿತೃಪೈತಾಮಹಂ ನಿತ್ಯಂ ವಶ್ಯಂ
ಅದ್ವೈಧ್ಯಂ ಮಹತ್ ಲಘುಸಮುತ್ಥಾನಮಿತಿ ಮಿತ್ರ ಸಂಪತ್' ಎಂದು
ವಿವರಿಸಲಾಗಿದೆ. ಇದರ ತಾತ್ಪರ್ಯವೇನೆಂದರೆ, ಎರಡು ರಾಜಕುಲಗಳಲ್ಲಿ
ವಂಶಪರಂಪರಾಗತವಾಗಿ ನಡೆದುಬಂದ ಮಿತ್ರತ್ವವೇ ಒಳ್ಳೆಯದು. ಅದು
ಸ್ವಾರ್ಥಪ್ರೇರಿತವಾಗಿರದೆ ಶಾಶ್ವತವೂ, ಕಪಟವಿಲ್ಲದ್ದೂ ಆಗಿರಬೇಕು. ಇದ-
ಲ್ಲದೇ ಸಕಾಲಕ್ಕೆ ಸಹಾಯಕ್ಕಾಗಿ ಒದಗುವಂಥದಿರಬೇಕು. ಹಾಗು ಬಲಾಢ್ಯ

ರಾಷ್ಟ್ರದೊಡನಿರಬೇಕು. ಕ್ಷುದ್ರ ರಾಷ್ಟ್ರದೊಂದಿಗಿನ ಮೈತ್ರಿಯಿಂದ ಏನು ಲಾಭ ?

## ೭೮. ಮಿತ್ರಸಂಗ್ರಹಣೇ ಬಲಂ ಸಂಪದ್ಯತೇ

ಮಿತ್ರರಾಷ್ಟ್ರಗಳೊಂದಿಗೆ ಒಳ್ಳೆಯ ಸಂಬಂಧವನ್ನಿಟ್ಟುಕೊಳ್ಳುವುದರಿಂದ ಸ್ವರಾಷ್ಟ್ರದ ಬಲವು ಹೆಚ್ಚುತ್ತದೆ. ಏಕೆಂದರೆ ಬಲಾಢ್ಯ ರಾಷ್ಟ್ರಗಳು ವಿಜಿಗೀಷುವಿನ ಸಹಾಯಕ್ಕೆ ಬರುವವೆಂಬ ವಿಶ್ವಾಸದಿಂದ ಶತ್ರುಗಳು ಉಪದ್ರವವನ್ನುಂಟುಮಾಡುವ ಧೈರ್ಯವನ್ನು ತೋರುವುದಿಲ್ಲ. ಪಾಕಿಸ್ತಾನವು ಅಮೇರಿಕೆ ಹಾಗು ಚೀನಾಗಳೊಂದಿಗೆ ಮೈತ್ರೀಭಾವದಿಂದಿರಲು ಪ್ರಯತ್ನಿಸುತ್ತಿರುವುದು ಇದಕ್ಕಾಗಿಯೇ ಎನ್ನುವುದು ಅನುಭವಗಮ್ಯವಾದ ಮಾತು.

## ೭೯. ಬಲವಾನ್ ಅಲಬ್ಧ ಲಾಭೇ ಪ್ರಯತತೇ

ಬಲಿಷ್ಠನಾದ ರಾಜನು ತನಗಿಲ್ಲದ್ದನ್ನು ಪಡೆಯುವುದಕ್ಕಾಗಿ ಪ್ರಯತ್ನಿಸುತ್ತಾನೆ. ಪಾಕಿಸ್ತಾನವು ಅಮೇರಿಕದ ನೆರವಿನಿಂದ ಕಾಶ್ಮೀರವನ್ನು ಕಬಳಿಸುವ ಪ್ರಯತ್ನ ಮಾಡುತ್ತಿರುವುದು ಇದಕ್ಕೆ ದೃಷ್ಟಾಂತ. ಆದರೆ ವಿಜಿಗೀಷುವು ( ಜಯಾಪೇಕ್ಷಿಯಾದ ರಾಜನು ) ಯಾವಾಗಲೂ ತನ್ನ ರಾಜ್ಯವನ್ನು ಬೆಳೆಸಲು ಉತ್ಸುಕನಾಗಿರುತ್ತಾನೆ ಆದರೆ ಅವನು ಸ್ವತಃ ಬಲಿಷ್ಠನಾಗಿದ್ದರೇನೇ ಇದು ಸಾಧ್ಯವಾದೀತು. ಕೇವಲ ಮಿತ್ರಬಲದಿಂದ ಇದು ಸಾಧಿಸುವ ವಿಷಯವಲ್ಲ. ಭಾರತಕ್ಕಿಂತಲೂ ಬಲಿಷ್ಠವಲ್ಲದ ಪಾಕಿಸ್ತಾನವು ಇದನ್ನು ಮರೆತಂತಿದೆ.

## ೮೦. ಅಲಬ್ಧ ಲಾಭೋನಾಲಸಸ್ಯ

ರಾಜನು ಬಲಿಷ್ಠನಾಗಿದ್ದರೂ ಆಲಸ್ಯವಿಲ್ಲದಿರುವುದು ಅರ್ಥಾತ್ ಉತ್ಸಾಹಿಯಾಗಿರುವುದು ಅಷ್ಟೇ ಮಹತ್ವದ್ದು. ಆಲಸಿಯಾದವನು ತನ್ನ ಬಲವನ್ನು ಉಪಯೋಗಿಸದೆ ಕೇವಲ ವಿಲಾಸಮಯ ಜೀವನವನ್ನು ಬಯಸಿದರೆ ಅವನ ಬಲವು ನಿಷ್ಪ್ರಯೋಜಕವಾಗುತ್ತದೆ. ಆದ್ದರಿಂದ ಬಲರೂಪವಾದ ಗುಣದೊಂದಿಗೆ ಆಲಸ್ಯವೆಂಬ ದೋಷವು ಇರಕೂಡದೆಂಬುದು ತಾತ್ಪರ್ಯ. ಸುಭಾಷಿತವೊಂದರಲ್ಲಿ ಆಲಸ್ಯವೆಂಬುದು ನಮ್ಮ ಶರೀರದಲ್ಲಿಯೇ ನೆಲೆಸಿದ ಒಂದು ದೊಡ್ಡ ಶತ್ರು ಎಂದು ಹೇಳಲ್ಪಟ್ಟಿದೆ. ( ಆಲಸ್ಯಂ ಹಿ ಮನುಷ್ಯಾಣಾಂ ಶರೀರಸ್ಥೋ ಮಹಾರಿಪುಃ ).

## ೮೧. ಅಲಸಸ್ಯ ಲಬ್ಧಮಪಿ ರಕ್ಷಿತುಂ ನ ಶಕ್ಯತೇ

ಆಲಸೀವೃತ್ತಿಯ ಮನುಷ್ಯನೇ ಆಗಲಿ. ರಾಜನೇ ಆಗಲಿ ಇಲ್ಲದ್ದನ್ನು ದೊರಕಿಸುವುದು ದೂರಕ್ಕೆ ಉಳಿಯಿತು. ಇದ್ದದ್ದನ್ನು ಕೂಡ ಕಳೆದುಕೊಳ್ಳುತ್ತಾನೆಂದು ಈ ಸೂತ್ರದ ಅಭಿಪ್ರಾಯ. ಎರಡನೆಯ ಬಾಜೀರಾವ ಪೇಶವೆಯ ಉದಾಹರಣೆಯು ಈ ತತ್ವವನ್ನು ಎತ್ತಿಹಿಡಿಯುತ್ತದೆ.

## ೮೨. ನ ಅಲಸಸ್ಯ ರಕ್ಷಿತಂ ವಿವರ್ಧತೇ

ಪೂರ್ವಜರಿಂದ ಸಂಪಾದಿಸಿ ರಕ್ಷಿಸಿಕೊಂಡು ಬಂದ ರಾಜ್ಯವನ್ನು ಬೆಳೆಸುವುದು ಆಲಸಿಗೆ ಸಾಧ್ಯವಿಲ್ಲ. ಹಾಗೆಯೇ—

## ೮೩. ನ ಭೃತ್ಯಾನ್ ಪೋಷಯತಿ

ತನ್ನ ಸೇವಕ ಸಿಬ್ಬಂದಿಯನ್ನು ಚೆನ್ನಾಗಿ ಪೋಷಿಸುವುದು ಕೂಡ ಅವನಿಗೆ ಅಸಾಧ್ಯವಾಗುತ್ತದೆ. ಒಟ್ಟಿನ ಮೇಲೆ ಆಲಸಿಯಾದ ರಾಜನು ಎಲ್ಲ ದೃಷ್ಟಿಯಿಂದಲೂ ಅಪಾತ್ರನಾಗುತ್ತಾನೆ. ಅಂತೆಯೇ—

## ೮೪. ನಾಸ್ತ್ಯಲಸಸ್ಯ ಶಾಸ್ತ್ರಾಗಮಃ

ಆಲಸಿಗೆ ರಾಜನೀತಿಶಾಸ್ತ್ರದ ಅಭ್ಯಾಸ ಹಾಗು ಅನುಭವ ಜ್ಞಾನ ಇವು ಎಂದೂ ಸಾಧ್ಯವಾಗುವುದಿಲ್ಲ. ಅದರಂತೆ —

## ೮೫. ನಾಸ್ತಿ ಅಲಸಸ್ಯ ಐಹಿಕಾಮುಷ್ಮಿಕಮ್

ಆಲಸಿಗೆ ಈ ಲೋಕದ ಸುಖವಿಲ್ಲ. ಪರಲೋಕ ಪ್ರಾಪ್ತಿಯ ಆಸೆಯೂ ಇಲ್ಲ.

## ೮೬. ನಿರುತ್ಸಾಹಾದ್ದೈವಂ ಪತತಿ

ಆಲಸಿಯು ಉತ್ಸಾಹವಿಲ್ಲದವನಾದ್ದರಿಂದ ದೈವವು ಅವನಿಗೆ ಎಂದೂ ಅನುಕೂಲವಾಗುವುದಿಲ್ಲ. ಈ ಸೂತ್ರದಲ್ಲಿ ಅಡಕವಾಗಿರುವ ಅತಿ ಮಹತ್ವದ ತತ್ವವೆಂದರೆ, ದೈವವು ಆಕಸ್ಮಾತ್ತಾಗಿ ಒಲಿಯುವ ವಸ್ತುವಲ್ಲ. ಅವಕಕ ಆಲಸ್ಯರ ಹಿತವಾದ ಕೃತಿಯ ಆವಶ್ಯಕತೆ ಇದೆ ಎನ್ನುವುದು.

## ೮೭. ಉತ್ಸಾಹವತಾಂ ಶತ್ರವೋಽಪಿ ವಶೀಭವಂತಿ

ಉತ್ಸಾಹವಂತರಿಗೆ ಶತ್ರುಗಳು ಕೂಡ ವಶರಾಗುತ್ತಾರೆ ಎಂದು ಈ

ಸೂತ್ರವು ತಿಳಿಯಪಡಿಸುತ್ತದೆ. ಆಲಸಿಯಾಗಿರದೆ ಉದಾಸೀನನಾಗಿದ್ದರೂ ಅದು ರಾಜನಿಗೆ ಭೂಷಣವಲ್ಲ. ಅವನು ಸತತೋತ್ಸಾಹಿಯಾಗಿರಬೇಕು.

ಚಾಣಕ್ಯನು, ರಾಜನಲ್ಲಿ ಪ್ರಭುಶಕ್ತಿ, ಮಂತ್ರಶಕ್ತಿ, ಉತ್ಸಾಹಶಕ್ತಿ ಈ ಮೂರೂ ಅವಶ್ಯವಾದವುಗಳೆಂದು ಪ್ರತಿಪಾದಿಸುತ್ತಾನೆ, ಈ ಹಿಂದೆ ವಿವರಿಸಿದಂತೆ ರಾಜನಲ್ಲಿ ಅಭಿಗಾಮಿಕ, ಪ್ರಾಜ್ಞ ಹಾಗು ಉತ್ಸಾಹ ಗುಣಗಳಿರಬೇಕಾದದ್ದು ಅವಶ್ಯ. ಅಭಿಗಾಮಿಕ ಗುಣಗಳು ಪ್ರಭುಶಕ್ತಿಗೆ ಕಾರಣವಾದರೆ, ಪ್ರಾಜ್ಞ ಹಾಗು ಉತ್ಸಾಹ ಗುಣಗಳು ಅನುಕ್ರಮವಾಗಿ ಮಂತ್ರ ಹಾಗು ಉತ್ಸಾಹ ಶಕ್ತಿಗಳಿಗೆ ಕಾರಣವಾಗಿ ಅವನಿಗೆ ಪರಿಪೂರ್ಣ ವ್ಯಕ್ತಿತ್ವವನ್ನು ತಂದುಕೊಡುತ್ತವೆ.

ಚಾಣಕ್ಯನು ಅರ್ಥಶಾಸ್ತ್ರದಲ್ಲಿ ಉತ್ಸಾಹವಂತನಿಗೇ ಯಶಸ್ಸು ಲಭ್ಯ ಎಂಬುದನ್ನು—

> ತಸ್ಮಾನ್ನಿತ್ಯೋತ್ಥಿತೋ ರಾಜಾ ಕುರ್ಯಾತ್ ಅರ್ಥಾನುಶಾಸನಮ್।
> ಅರ್ಥಸ್ಯ ಮೂಲಮುತ್ಥಾನಂ ಅನರ್ಥಸ್ಯ ವಿಪರ್ಯಯಃ ॥

ರಾಜನು ಸದಾಕಾಲವೂ ಜಾಗರೂಕನಾಗಿದ್ದು, ಸತತೋದ್ಯೋಗಶೀಲನಾಗಿರಬೇಕೆಂಬುದೇ ಈ ಶ್ಲೋಕದ ತಾತ್ಪರ್ಯ. ಆಲಸಿಗೆ ಅನರ್ಥವು ತಪ್ಪಿದ್ದಲ್ಲ. ಇದನ್ನೇ ಇನ್ನೊಂದು ಬಗೆಯಿಂದ 'ರಾಜಾ ನ ಮುತ್ತಿಷ್ಠಮಾನಂ ಅನೂತ್ತಿಷ್ಠಂತೇ ಭೃತ್ಯಾಃ ಪ್ರಮಾದ್ಯಂತಂ ಅನುಪ್ರಮಾದ್ಯಂತಿ' ಎಂದರೆ ರಾಜನು ಜಾಗರೂಕನಾಗಿದ್ದರೆ ಅಧಿಕಾರಿವರ್ಗವು ಜಾಗರೂಕತೆಯಿಂದ ತಮ್ಮ ಕಾರ್ಯವನ್ನು ನಿರ್ವಹಿಸುತ್ತದೆ. ತದ್ವಿಪರೀತವಾಗಿ ರಾಜನು ತಪ್ಪುದಾರಿ ಹಿಡಿದರೆ ಅವರೂ ಹಾಗೆಯೇ ನಡೆದುಕೊಂಡು ರಾಜ್ಯವು ಹಾಳಾಗಲಿಕ್ಕೆ ಕಾರಣರಾಗುತ್ತಾರೆ ಎಂದು ವಿವರಿಸಲ್ಪಟ್ಟಿದೆ.

## ೮೮. ವಿಕ್ರಮಧನಾ ರಾಜಾನಾಃ

ರಾಜರಿಗೆ ಶೌರ್ಯವೇ ಧನವು. ಏಕೆಂದರೆ, ಶೌರ್ಯವಿದ್ದಲ್ಲಿ ಉತ್ಸಾಹ. ಅದರಿಂದ ಯಶಸ್ಸು ದೊರಕಿ ಸಂಪದಭಿವೃದ್ಧಿಗೆ ಕಾರಣವಾಗುತ್ತದೆ. ರಾಜ್ಯವು

ಬೇಕಾದಷ್ಟು ಸಮೃದ್ಧವಾಗಿದ್ದರೂ ಶೌರ್ಯವಿಲ್ಲದ ರಾಜನ ಆಡಳಿತದಲ್ಲಿ ಹಾಳಾಗುತ್ತದೆ. ಅದೇ ವಿಕ್ರಮಧನನಾದ ರಾಜನ ಕೈಯಲ್ಲಿ ಎಂತಹ ದೇಶ-ವಿದ್ದರೂ ಅದು ಸಮೃದ್ಧವಾಗುತ್ತದೆ. ಪಂಚರಾತ್ರವೆಂಬ ಭಾಸನ ನಾಟಕ-ದಲ್ಲಿ ಶಕುನಿಯು ಪಾಂಡವರಿಗೆ ಮರುಭೂಮಿಯಲ್ಲಿ ರಾಜ್ಯಮಾಡಲು ಅವ-ಕಾಶ ಕೊಟ್ಟರೂ ಅದನ್ನು ಅವರು ಸಮೃದ್ಧವಾಗಿ ಮಾರ್ಪಡಿಸಬಲ್ಲರು; ಆದ್ದರಿಂದ ಸರ್ವಥಾ ಅವರಿಗೆ ಪಾಲು ಕೊಡುವುದು ಬೇಡ ಎಂದು ಸಲಹೆ-ಯನ್ನು ನೀಡುತ್ತಾನೆ. ಸದ್ಯಕ್ಕೆ ಮರುಭೂಮಿಯಲ್ಲಿ ಸಮೃದ್ಧಿಯನ್ನೂ ಪಡೆದ ಇಸ್ರಾಯಿಲ್ ದೇಶವನ್ನು, 'ಸುಜಲಾಂ ಸುಫಲಾಂ' ಎಂದೆನಿಸಿಕೊಂಡ ಭಾರತದ ದಾರಿದ್ರ್ಯದೊಂದಿಗೆ ತೌಲನಿಕವಾಗಿ ಅಭ್ಯಸಿಸಿದರೆ ಚಾಣಕ್ಯನ ಮಾತಿನ ಮರ್ಮ ಹೊಳೆಯದಿರದು.

## ೮೯. ಅಲಬ್ಧಲಾಭಾದಿ ಚತುಷ್ಟಯಂ ರಾಜ್ಯತಂತ್ರಮ್

ಚಾಣಕ್ಯನ ದೃಷ್ಟಿಯಲ್ಲಿ ರಾಜ್ಯಾಡಳಿತವು, ಆಧಾರಸ್ತಂಭಗಳಂತಿರುವ ನಾಲ್ಕು ತರದ ಕಾರ್ಯಕ್ರಮಗಳನ್ನವಲಂಬಿಸಿರುತ್ತದೆ. ಅವನ್ನು ೧. ಅಲಬ್ಧ ಲಾಭಾರ್ಥಾ, ೨. ಲಬ್ಧ ಪರಿರಕ್ಷಿಣೀ, ೩. ರಕ್ಷಿತ ವಿವರ್ಧಿನೀ ಹಾಗು ೪. ವೃದ್ಧಸ್ಯ ತೀರ್ಥೇಷು ಪ್ರತಿಪಾದಿನೀ ಎಂದು ಅರ್ಥಶಾಸ್ತ್ರದಲ್ಲಿ ವಿವ-ರಿಸಲಾಗಿದೆ.

ಯಾವಾಗಲೂ ತೃಪ್ತಿಯಿಂದಿರಬೇಕಾದದ್ದು ಬ್ರಾಹ್ಮಣನ ಲಕ್ಷಣ. ಆದರೆ ಕ್ಷಾತ್ರತೇಜ ಸಂಪನ್ನನಾದ ರಾಜನು ಅಭ್ಯುದಯವನ್ನು ಬಯಸಿ ಅತೃಪ್ತಿಯಿಂದಿರಬೇಕಾದದ್ದು ಅವಶ್ಯ. ಇಲ್ಲವಾದಲ್ಲಿ ಅವನು ರಾಜ್ಯವನ್ನು ಕಳೆದುಕೊಳುವ ಸಂಭವವೇ ಹೆಚ್ಚು. ( ಅಸಂತುಷ್ಟಾಃ ದ್ವಿಜಾ ನಷ್ಟಾಃ ಸಂತುಷ್ಟಾಸ್ತು ಮಹೀಭುಜಃ ) ಆದ್ದರಿಂದ ದಂಡನೀತಿಶಾಸ್ತ್ರದ ಪ್ರಕಾರ ವಿಜಿಗೀಷುವು ಇಲ್ಲದ್ದನ್ನು ದೊರಕಿಸುವುದು ( ಅಲಬ್ಧಲಾಭ ) ಹಾಗು ಗಳಿಸಿದ್ದನ್ನು ಸಂರಕ್ಷಿಸುವುದು ( ಲಬ್ಧ ಪರಿರಕ್ಷಣ ) ಇವುಗಳನ್ನೇ ಮುಖ್ಯ-

ವಾದ ಕಾರ್ಯಕ್ರಮಗಳನ್ನಾಗಿ ಇಟ್ಟುಕೊಳ್ಳಬೇಕಾಗುತ್ತದೆ. ಈ ವಿಷಯ-ದಲ್ಲಿ ಚಾಣಕ್ಯನಿಗೂ, ಅವನ ಹಿಂದಿನ ರಾಜನೀತಿಜ್ಞರಿಗೂ ಭಿನ್ನಾಭಿಪ್ರಾಯ-ವಿಲ್ಲ. ಸಾಮ್ರಾಜ್ಯವನ್ನಾಗಲಿ ಅಥವಾ ಸ್ವಪ್ರಭಾವವನ್ನಾಗಲಿ ವಿಸ್ತರಿಸು-ವುದೇ ರಾಜನ ಗುರಿ ಎಂಬುದು ಪ್ರಾಚೀನ ಶಾಸ್ತ್ರಕಾರರ ಅಭಿಮತ. ಆದರೆ ಚಾಣಕ್ಯನು ಈ ಎರಡಕ್ಕೆ ' ರಕ್ಷಿತವಿವರ್ಧಿನೀ ' ಎಂದರೆ ದೇಶದ ಆದಾಯ-ವನ್ನು ಹೆಚ್ಚಿಸಲಿಕ್ಕೆ ಪ್ರಕೃತಿಯ ಸಂಪತ್ತನ್ನು ಉಪಯೋಗಿಸಿಯಾಗಲಿ ಅಥವಾ ಇನ್ನಿತರ ಮಾರ್ಗಗಳಿಂದ ಪ್ರಯತ್ನಿಸುವುದು ಹಾಗು ' ವೃದ್ಧಸ್ಯ ತೀರ್ಥೇಷು ಪ್ರತಿಪಾದಿನೀ ' ಎಂದರೆ ಈ ಬೆಳೆಸಿದ ಸಂಪತ್ತನ್ನು ರಾಜ್ಯದ ಕಲ್ಯಾಣಕ್ಕಾಗಿ ಉಪಯೋಗಿಸುವುದು ಎಂಬ ಇನ್ನೆರಡು ಕಾರ್ಯಕ್ರಮಗಳನ್ನು ಜೋಡಿ-ಸುತ್ತಾನೆ ಹಾಗು ಅವನ್ನು ನೆರವೇರಿಸುವ ಬಗೆಯನ್ನು ಅರ್ಥಶಾಸ್ತ್ರದಲ್ಲಿ ಕೂಲಂಕಷವಾಗಿ ವಿವರಿಸಿದ್ದಾನೆ. ಅವನ ಆದರ್ಶವು ಪೋಲೀಸ ರಾಜ್ಯವಾಗಿರದೆ ಕಲ್ಯಾಣರಾಜ್ಯವೆನ್ನುವುದಕ್ಕೆ ಇದೇ ಮೂಲ ಕಾರಣ. ಬೆಳೆಸಿದ ಸಂಪತ್ತನ್ನು ದೇಶದ ಕಲ್ಯಾಣಕ್ಕಾಗಿ ಉಪಯೋಗಿಸುವುದು ಎನ್ನುವಲ್ಲಿ ಸ್ವಹಿತಕ್ಕಿಂತಲೂ ದೇಶ ಎಂದರೆ ಪ್ರಜಾಹಿತವೇ ಮಿಗಿಲಾದದ್ದು ಎಂಬರ್ಥವು ಅಡಕವಾಗಿದೆ.

## ೯೦. ರಾಜ್ಯತಂತ್ರಾಯತ್ತಂ ನೀತಿಶಾಸ್ತ್ರಮ್

ನೀತಿಶಾಸ್ತ್ರವು ರಾಜ್ಯತಂತ್ರದ ಮೇಲೆಯೇ ಆಧರಿಸಿರುತ್ತದೆ. ಹಿಂದಿನ ಸೂತ್ರದಲ್ಲಿ ಅಲಬ್ಧಲಾಭಾದಿ ನಾಲ್ಕು ಕಾರ್ಯಕ್ರಮಗಳನ್ನು ಚರ್ಚಿಸಿದ ಮೇಲೆ ಪ್ರಕೃತ ಸೂತ್ರದಲ್ಲಿ ನೀತಿಶಾಸ್ತ್ರವು ಆ ನಾಲ್ಕು ಕಾರ್ಯಕ್ರಮ-ಗಳಿಗೆ ಅಧೀನವಾಗಿರುತ್ತದೆ ಎಂದು ಚಾಣಕ್ಯನು ಪ್ರತಿಪಾದಿಸುತ್ತಾನೆ. ಆಂತರಿಕ ರಾಜ್ಯಾಡಳಿತ, ವಿದೇಶ ವ್ಯವಹಾರ ಇವಕ್ಕೆ ಸಾಧನೀಭೂತವಾದ ಕಾನೂನುಗಳು, ಅಪರಾಧಗಳ ಶೋಧನೆ, ಗುಪ್ತಚಾರ ಚಟುವಟಿಕೆಗಳು, ರಾಜದೂತರ ಕಾರ್ಯಾಚರಣೆ, ಸಾಮಾಜಿಕ ಸುಸ್ಥಿತಿ—ಇವೆಲ್ಲವೂ ನೀತಿ-ಶಾಸ್ತ್ರದಲ್ಲಿ ಅಂತರ್ಭೂತವಾಗಿರುತ್ತವೆ. ಅವೆಲ್ಲವುಗಳ ಯೋಗ್ಯ ನಿರ್ವಹಣೆಯು

ಮೇಲಿನ ನಾಲ್ಕು ಕಾರ್ಯಕ್ರಮಗಳ ಮೇಲೆಯೇ ಅವಲಂಬಿಸಿರುತ್ತದೆಂದು ಬೇರೆ ಹೇಳಬೇಕಾಗಿಲ್ಲ. ಏಕೆಂದರೆ ವಿಜಿಗೀಷುವು ರಾಜ್ಯದ ಸಂಪದಭಿವೃದ್ಧಿಯ ಕಾರ್ಯಕ್ರಮಗಳನ್ನು ಕೈಕೊಳ್ಳುದಕ್ಕಿದ್ದಷ್ಟೇ ಮಹತ್ವವು ಸಂಪತ್ತನ್ನು ಸತ್ಕಾರ್ಯಕ್ಕಾಗಿ ವಿನಿಯೋಗಿಸುವುದಕ್ಕೂ ಇದೆ. ಕೇವಲ ತನ್ನ ಸುಖಕ್ಕಾಗಿ ರಾಜ್ಯವಿರುವುದಿಲ್ಲ ಎನ್ನುವ ಸತ್ಯವನ್ನರಿತು ಪ್ರಜೆಗಳ ಕಲ್ಯಾಣಕ್ಕಾಗಿ ಯಾವಾಗಲೂ ಹೆಣಗಾಡಬೇಕಾದುದು ಅವನ ಕರ್ತವ್ಯ—

ಪ್ರಜಾಸುಖೇ ಸುಖಂ ರಾಜ್ಞಃ ಪ್ರಜಾನಾಂ ತು ಹಿತೇ ಹಿತಂ ।
ನಾತ್ಮಪ್ರಿಯಂ ಹಿತಂ ರಾಜ್ಞಃ ಪ್ರಜಾನಾಂ ತು ಪ್ರಿಯಂ ಹಿತಮ್ ॥

ಪ್ರಜೆಗಳ ಸುಖದಲ್ಲಿಯೇ ರಾಜನ ಸುಖವಿದೆ. ಪ್ರಜಾಹಿತವೇ ರಾಜನ ಹಿತ, ತನಗೆ ಬೇಕೆನಿಸಿದ್ದು ರಾಜನಿಗೆ ಎಂದೂ ಹಿತವನ್ನು ಮಾಡಲಾರದು. ಆದರೆ ಪ್ರಜೆಗಳಿಗೆ ಪ್ರಿಯವಾದದ್ದು ಮಾತ್ರ ರಾಜನ ಹಿತದಲ್ಲಿ ಪರಿಣಮಿಸುತ್ತದೆ ಎಂದು ಘಂಟಾಘೋಷವಾಗಿ ಸಾರುತ್ತದೆ, ಅರ್ಥಶಾಸ್ತ್ರದ ಮಹಾವಾಕ್ಯದಂತಿರುವ ಈ ಮೇಲಿನ ಶ್ಲೋಕ.

ಪ್ರಜಾಹಿತವೇ ಚರಮಗುರಿ ಎಂದು ಇಟ್ಟುಕೊಂಡಾಗ ಅದಕ್ಕಾಗಿಯೇ ಅವ್ಯಾಹತವಾಗಿ ಪರಿಶ್ರಮಿಸುವಾಗ ಆ ಗುರಿಯನ್ನು ಸಾಧಿಸುವುದಕ್ಕಾಗಿ ಅನಿವಾರ್ಯವಾಗಿ ಹಲವು ಕಠೋರ ಉಪಾಯಗಳನ್ನು ಯೋಜಿಸಬೇಕಾಗಿ ಬಂದರೂ ಅದರಲ್ಲಿ ರಾಜನ ಸ್ವಾರ್ಥವಿರದೆ, ಪ್ರಜೆಗಳ ಕಲ್ಯಾಣವಿರುವುದರಿಂದ ಅದು ದೂಷ್ಯವೆನಿಸಿಕೊಳ್ಳದೆ ರಾಜ್ಯತಂತ್ರಾಧೀನವಾದ ನೀತಿಯೆಂದೆನಿಸಿಕೊಳ್ಳುತ್ತದೆ.

## ೯೧. ರಾಜ್ಯತಂತ್ರೇಷು ಆಯತ್ತೌ ತಂತ್ರಾವಾಪೌ

ರಾಜ್ಯನೀತಿಯ ಬೀಜಾರೋಪಣೆ ಹಾಗು ಅರ್ಥಶಾಸ್ತ್ರದ ನಿಯಮಗಳ ಯಥಾರ್ಥ ಕಾರ್ಯಾಚರಣೆ ಇವೆರಡೂ ಕೂಡ ರಾಜ್ಯಾಡಳಿತಕ್ಕೆಂದು ರೂಪಿ-

ಸಿದ ಮೇಲಿನ ನಾಲ್ಕು ಆಧಾರಸ್ತಂಭಗಳನ್ನೇ ಅವಲಂಬಿಸಿರುತ್ತದೆ. ಒಟ್ಟಿ-ನಲ್ಲಿ ನಾಲ್ಕು ಹಂತಗಳಲ್ಲಿ ವಿವರಿಸಲ್ಪಟ್ಟ ರಾಜ್ಯತಂತ್ರವೇ ಎಲ್ಲಕ್ಕೂ ಆಧಾರ ಎಂಬುದೇ ಈ ಸೂತ್ರದ ಆಶಯ.

## ೯೨. ತಂತ್ರಂ ಸ್ವವಿಷಯ ಕೃತ್ಯೇಷು ಆಯತ್ತಮ್

ತನ್ನ ರಾಷ್ಟ್ರಕ್ಕೆ ಸಂಬಂಧಿಸಿದ ಕರ್ತವ್ಯ ಹಾಗು ಅಕರ್ತವ್ಯಗಳನ್ನು ನಿರ್ಣಯಿಸುವುದರಲ್ಲಿಯೇ ರಾಜ್ಯತಂತ್ರದ ಸಾರ್ಥಕತೆಯಿದೆ. ಇದನ್ನೇ ಪರ್ಯಾಯವಾಗಿ ಹೇಳುವುದಾದರೆ ಪ್ರಜಾಹಿತವೇ ಚರಮಗುರಿಯಾದ್ದರಿಂದ ಶಾಸ್ತ್ರದ ಸಿದ್ಧಾಂತ ಹಾಗು ಅವರ ಪ್ರತ್ಯಕ್ಷ ಕಾರ್ಯಾಚರಣೆ ಇವೆರಡೂ ದೇಶದ ಅಭಿವೃದ್ಧಿಗಾಗಿಯೇ ಇವೆ ಎನ್ನುವುದೇ ಪ್ರಕೃತ ಸೂತ್ರದ ಅಭಿಪ್ರಾಯ.

## ೯೩. ಆವಾಪೋ ಮಂಡಲನಿಷ್ಟಃ

ರಾಜಮಂಡಲ ಸಿದ್ಧಾಂತಕ್ಕೆ ನಿಷ್ಠನಾಗಿ ರಾಜನು ತನ್ನ ನೀತಿಯನ್ನು ರೂಪಿಸಬೇಕು. ಈ ಸಿದ್ಧಾಂತದಲ್ಲಿ ಯಾರು ಮಿತ್ರರು, ಯಾರು ಶತ್ರುಗಳು, ಯಾರು ಉದಾಸೀನರು ಎಂಬುವನ್ನು ತಿಳಿದುಕೊಂಡು ಅದಕ್ಕೆ ತಕ್ಕಂತೆ ವಿಜಿಗೀಷುವ ತನ್ನ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಲು ಮಾರ್ಗದರ್ಶನವಿದೆ. ಇಲ್ಲಿ ತಾತ್ಕಾಲಿಕ ಮೈತ್ರಿ, ಶಾಶ್ವತ ಮೈತ್ರಿ ಇತ್ಯಾದಿ ವಿಷಯಗಳೆಲ್ಲ ಚರ್ಚಿಸಲ್ಪಟ್ಟಿವೆ. ತನ್ನ ದೇಶದ ಅಭ್ಯುದಯಕ್ಕಾಗಿ ಅನ್ಯ ದೇಶಗಳೊಂದಿಗೆ ಪ್ರಸಂಗಾನುಸಾರವಾಗಿ ಶಾಶ್ವತ ಇಲ್ಲವೆ ತಾತ್ಕಾಲಿಕ ವ್ಯವಸ್ಥೆಯನ್ನು ರಾಜನೀತಿಯಲ್ಲಿ ಉಪದೇಶಿಸಲಾಗಿದೆ. ಅದಕ್ಕೆ ತಕ್ಕಂತೆ ನಡೆದುಕೊಂಡು ವಿಜಿಗೀಷುವು ತನ್ನ ಉತ್ಕರ್ಷವನ್ನು ಸಾಧಿಸಿಕೊಳ್ಳಬೇಕೆಂಬುದೇ ಈ ಸೂತ್ರದ ತಿರುಳು.

## ೯೪. ಸಂಧಿವಿಗ್ರಹಯೋನಿಃ ಮಂಡಲಃ

ಸಂಧಿ ಎಂದರೆ ಬೇರೆ ರಾಜರೊಡನೆ ಒಪ್ಪಂದ ಮಾಡಿಕೊಳ್ಳುವುದು. ವಿಗ್ರಹವೆಂದರೆ ಅನ್ಯರಾಜ್ಯಗಳೊಂದಿಗೆ ಯುದ್ಧವನ್ನು ಸಾರುವುದು. ಯಾವ ಪರಿಸ್ಥಿತಿಯಲ್ಲಿ, ಯಾರೊಂದಿಗೆ, ಎಂಥ ಕರಾರುಗಳ ಮೇಲೆ ಒಪ್ಪಂದ ಮಾಡಿಕೊಳ್ಳಬಹುದು ಎಂಬುದಕ್ಕೂ ಕಾರಣೀಭೂತವಾದದ್ದು ರಾಜ-ಮಂಡಲ ಸಿದ್ಧಾಂತ. ಏಕೆಂದರೆ ಈ ಸಿದ್ಧಾಂತವು ಯಾರು ವೈರಿಗಳು ಹಾಗು ಯಾರು ಮಿತ್ರರು ಎಂಬುದನ್ನು ತಾತ್ವಿಕವಾಗಿ ತಿಳಿಯಪಡಿಸುತ್ತದೆ. ಹಾಗೆಯೇ ಇಂಥ ವಿಶಿಷ್ಟ ಸಂದರ್ಭಗಳಲ್ಲಿ ಸಂಧಿಯೇ ಯೋಗ್ಯ. ಬೇರೆ ಪ್ರಸಂಗದಲ್ಲಿ ಯುದ್ಧವು ಅನಿವಾರ್ಯ ಎಂಬುದನ್ನು ಸಮರ್ಪಕವಾಗಿ ಮಂಡಲ ಸಿದ್ಧಾಂತದ ಆಧಾರದ ಮೇಲೆ ನಿರ್ಣಯಿಸಲ್ಪಡುವುದರಿಂದ ಅದು ಸಂಧಿವಿಗ್ರಹಗಳಿಗೆ ತಳಪದಿ ಎಂದು ಈ ಸೂತ್ರವು ಹೇಳುತ್ತದೆ.

## ೯೫. ನೀತಿಶಾಸ್ತ್ರಾನುಗೋ ರಾಜಾ

ನೀತಿ ಅಂದರೆ ರಾಜನೀತಿ ಶಾಸ್ತ್ರದಲ್ಲಿ ಉಪದೇಶಿಸಲ್ಪಟ್ಟ ತತ್ವಗಳ ಆಧಾರದ ಮೇಲೆ ರಾಜ್ಯಾಡಳಿತವನ್ನು ನಡೆಸುವವನು ಮಾತ್ರ ರಾಜ-ನಾಗಲು ಯೋಗ್ಯ. ಕೇವಲ ತಾನು ರಾಜನ ಮಗನಾದ್ದರಿಂದ ವಾರಸು-ದಾರನೆಂಬ ಒಂದೇ ಕಾರಣದ ಮೇಲೆ ರಾಜ್ಯದ ಅಧಿಕಾರವನ್ನು ಪಡೆದರೆ ಯೋಗ್ಯತೆಯಿಲ್ಲದ ಕಾರಣದಿಂದಾಗಿ ನಾಶಹೊಂದುತ್ತಾನೆ. ರಾಜನಾದವನಿಗೆ ಅನ್ವೀಕ್ಷಿಕೀ, ತ್ರಯೀ, ವಾರ್ತಾ ಹಾಗು ದಂಡನೀತಿ ಇವೆಲ್ಲವುಗಳಲ್ಲಿ ತರಬೇತಿ ಇದ್ದರೆ ಮಾತ್ರ ರಾಜ್ಯವನ್ನು ನಡೆಸುವುದು ಸಾಧ್ಯವೆಂದು ಅರ್ಥಶಾಸ್ತ್ರವು ಹೇಳುತ್ತದೆ.

ಅನ್ವೀಕ್ಷಿಕೀ ಎಂದರೆ ತರ್ಕಶಾಸ್ತ್ರ. ಇದರ ಸಹಾಯದಿಂದ ಪ್ರತಿ-

ಯಾವುದು ವಿಷಯದ ಯಥಾರ್ಥ ಜ್ಞಾನವು ಸಾಧ್ಯ. ತ್ರಯೀ ಎಂದರೆ ವೇದಗಳು. ಇವುಗಳ ಅಭ್ಯಾಸದಿಂದಾಗಿ ಧರ್ಮಾಧರ್ಮಗಳ ತಿಳಿವಳಿಕೆ ಬರುತ್ತದೆ. ವಾರ್ತಾ ಎಂದರೆ ಒಕ್ಕಲುತನ, ಪಶುಸಂಗೋಪನೆ ಹಾಗು ವ್ಯಾಪಾರ—ಇವುಗಳಿಂದ ಲೌಕಿಕ ವ್ಯವಹಾರದ ಪರಿಚಯವಾಗುವುದು. ದಂಡನೀತಿಯು ರಾಜ್ಯಾಡಳಿತವನ್ನು ನಡೆಸುವುದಕ್ಕೆ ಅವಶ್ಯವಿದ್ದ ಎಲ್ಲ ಜ್ಞಾನವನ್ನು ತಂದುಕೊಡುತ್ತದೆ. ಹೀಗಾಗಿ ರಾಜನು ಸಂಕಟ ಕಾಲದಲ್ಲಿ ಹೆದರದೆ, ಧೈರ್ಯವನ್ನು ತಂದುಕೊಂಡು ತನ್ನ ಬುದ್ಧಿ ಹಾಗು ಕಾರ್ಯಶಕ್ತಿಯ ಬಲದಿಂದ ಸಮರ್ಥನೆನಿಸಿಕೊಳ್ಳುತ್ತಾನೆ.

## ೯೬. ಅನಂತರ ಪ್ರಕೃತಿಃ ಶತ್ರುಃ

ರಾಜಮಂಡಲ ಸಿದ್ಧಾಂತಕ್ಕನುಗುಣವಾಗಿ ( ಯಾವುದೇ ಬದಿಯ ) ನಮ್ಮ ನೆರೆಯ ರಾಷ್ಟ್ರವು ಶತ್ರುವಿನ ದೇಶವೆಂದು ಈ ಸೂತ್ರವು ಹೇಳುತ್ತದೆ. ಸೀಮೆ ಹಾಗು ಜಲವಿವಾದ ಇತ್ಯಾದಿ ಅನೇಕ ಕಾರಣಗಳಿಂದಾಗಿ ಬದಿಯ ರಾಷ್ಟ್ರಗಳಲ್ಲಿ ಯಾವಾಗಲೂ ವೈಮನಸ್ಯ, ವ್ಯಾಜ್ಯ ಇದ್ದೇ ಇರುತ್ತದೆ. ಭಾರತ, ಪಾಕಿಸ್ತಾನ, ಬಾಂಗ್ಲಾದೇಶ, ಚೀನಾ ಇವುಗಳ ಉದಾಹರಣೆಗಳನ್ನು ತೆಗೆದುಕೊಂಡರೆ, ಕಾಲಕಾಲಕ್ಕೆ ನಮ್ಮಲ್ಲಿ ಹೊಸ ಸಮಸ್ಯೆಗಳು ಉದ್ಭವಿಸುವುದು ಅನುಭವದ ಮಾತು. ಇದರಿಂದಾಗಿ ನಾವು ಅದೆಷ್ಟು ಮೈತ್ರೀಪೂರ್ಣ ಭಾವದಿಂದ ಇರಬೇಕೆಂದರೂ ಅಥವಾ ಆ ದಿಶೆಯಲ್ಲಿ ಒಪ್ಪಂದಗಳನ್ನು ಮಾಡಿಕೊಂಡರೂ ಕೆಲವೊಂದು ಸಲ ಸಂಘರ್ಷ ತಪ್ಪುವುದಿಲ್ಲ. ಆದ್ದರಿಂದ ನೆರೆಯ ರಾಷ್ಟ್ರವು ಶತ್ರುದೇಶವೆಂದು ಹೇಳಿದ್ದು, ತ್ರಿಕಾಲಾಬಾಧಿತವಾದ ಸತ್ಯ. ಕೌಟಿಲ್ಯನಂಥ ನಿಶಿತಮತಿಗೆ ಇದು ಹೊಳೆದದ್ದರಲ್ಲಿ

## ೯೭. ಏಕಾಂತರಿತಂ ಮಿತ್ರಮಿಷ್ಯತೇ

ಮೇಲಿನ ಸೂತ್ರದಲ್ಲಿ ವಿವರಿಸಿದ ತತ್ವಕ್ಕನುಗುಣವಾಗಿಯೇ ನಮ್ಮ ನೆರೆಯವನು ನಮಗೆ ಶತ್ರುವಾಗುವಂತೆ, ಶತ್ರುವಿನ ನೆರೆಯುವನು ಅವನ ಶತ್ರುವಾಗಿರುವುದು ಸಹಜ. ವಿಜಿಗೀಷು ಹಾಗು ಅವನ ಶತ್ರುವಿನ ಶತ್ರು ಇವರೀರ್ವರಿಗೂ ಒಬ್ಬನೇ ಶತ್ರುವಾಗುವುದರಿಂದ ಅವರಲ್ಲಿ ನೈಸರ್ಗಿಕವಾಗಿ ಮಿತ್ರತ್ವ ಮೂಡುವುದೂ ಸಹಜ. ರಾಮ ಮತ್ತು ಭೀಮ ಇಬ್ಬರಿಗೂ ಕಾಮನು ಸಮಾನ ಶತ್ರುವಾಗಿದ್ದಾಗ ಅಂತಹ ಶತ್ರುವನ್ನು ಸದೆಬಡಿಯುವ ಉದ್ದೇಶದಿಂದಾಗಿ ಅವರೀರ್ವರಲ್ಲಿಯೂ ಮಿತ್ರತ್ವವಾಗಲೇಬೇಕು. ನಮಗೂ ಹಾಗು ರಶಿಯಾ ದೇಶಕ್ಕೂ ಇರುವ ಮೈತ್ರಿಗೆ ಇದೇ ಆಧಾರ. ಅದ-ರಂತೆಯೇ ಭಾರತ, ಅಫಘಾನ ಹಾಗು ಭಾರತ, ಇರಾಣಗಳಲ್ಲಿ ಕಂಡುಬರುವ ಮೈತ್ರಿ ಭಾರತ–ಪಾಕಿಸ್ತಾನಗಳು ಒಂದೇ ದೇಶವಾಗಿದ್ದಾಗ ಇರಲಿಲ್ಲ. ಈಗ ಅಫಘಾನರು ಪಾಕಿಸ್ತಾನದ ಶತ್ರುಗಳು. ಇರಾಣ ಹಾಗು ಪಾಕಿಸ್ತಾನಗಳಲ್ಲಿ ಇಸ್ಲಾಂ ಧರ್ಮವೇ ಇದ್ದರೂ ಅವರು ನೆರೆಯವರೆನ್ನುವ ಕಾರಣದಿಂದ ಹಲವು ಸಂದರ್ಭಗಳಲ್ಲಿ ಭಾರತ, ಇರಾಣಗಳ ಮೈತ್ರೀ ಸಂಬಂಧವುಂಟಾಗುವು-ದನ್ನು ನಾವು ನೋಡಿದ್ದೇವೆ. ಈ ಶಾಶ್ವತ ಸತ್ವವನ್ನು ಪ್ರಸ್ತುತ ಸೂತ್ರವು ತಿಳಿಯಪಡಿಸುತ್ತದೆ.

## ೯೮. ಹೇತುತಃ ಶತ್ರುಮಿತ್ರೇ ಭವಿಷ್ಯತಃ

ವಿಶಿಷ್ಟ ಕಾರಣಗಳಿಂದಾಗಿ ಪರಸ್ಪರರಲ್ಲಿ ಶತ್ರುತ್ವ ಹಾಗು ಮಿತ್ರತ್ವ-ವುಂಟಾಗುತ್ತವೆಂಬುದು ಚಾಣಕ್ಯನ ಅಭಿಪ್ರಾಯ. ನೆರೆಯ ರಾಜರು ಸ್ವಾಭಾವಿಕ ಶತ್ರುಗಳಾದರೆ, ರಾಜ್ಯದಲ್ಲಿ ಪಾಲು ಕೇಳುವ ದಾಯಾದಿಗಳೂ ಸಹಜ ಶತ್ರುಗಳೆಂದೆನಿಸಿಕೊಳ್ಳುತ್ತಾರೆ. ಕೌರವ–ಪಾಂಡವರಲ್ಲಿಯ ಶತ್ರು-ತ್ವವು ಇದಕ್ಕೆ ಒಳ್ಳೆಯ ನಿದರ್ಶನ. ಮೇಲೆ ವಿವರಿಸಿದ ಕಾರಣಗಳನ್ನು ಬಿಟ್ಟು

ಉಳಿದ ಬೇರೊಂದು ಕಾರಣದಿಂದ ಉಂಟಾದ ಶತ್ರುಗಳು ಕೃತ್ರಿಮರೆಂದೆನಿಸಿಕೊಳ್ಳುತ್ತಾರೆ. ಶತ್ರುಗಳಂತೆಯೇ ಮಿತ್ರರಲ್ಲಿಯೂ ಮೂರು ಪ್ರಕಾರಗಳು. ನಮ್ಮ ನೆರೆಯವನಾದ ಶತ್ರುವಿನ ನೆರೆಯ ರಾಜನು ಸ್ವಾಭಾವಿಕ ಮಿತ್ರ. ದಾಯಾದಿಗಳಲ್ಲದ ಅಂದರೆ ಸೋದರತ್ತೆ. ಸೋದರಮಾವ. ಚಿಕ್ಕಮ್ಮ. ದೊಡ್ಡಮ್ಮ ಇತ್ಯಾದಿಯವರ ಮಕ್ಕಳು ಇವರೆಲ್ಲ ಸಹಜಮಿತ್ರರು. ಹೊಟ್ಟೆಯ ಪಾಡಿಗಾಗಿ ಆಶ್ರಯ ಪಡೆದುಕೊಂಡವನು ಕೃತ್ರಿಮ ಮಿತ್ರನೆನಿಸಿಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ರಾಜ್ಯದ ಹಿತವೇ ಚರಮಗುರಿಯಾಗಿರುವಾಗ ರಾಜಕಾರಣದಲ್ಲಿ ಶಾಶ್ವತ ಮೈತ್ರಿ ಅಥವಾ ಶತ್ರುತ್ವವಿಲ್ಲವೆಂಬ ಆಂಗ್ಲಭಾಷೆಯಲ್ಲಿಯ ಪ್ರಸಿದ್ಧ ಲೋಕೋಕ್ತಿಯನ್ನು ಸ್ಮರಿಸಬಹುದು. (In politics there is neither permanent friendship nor permanent enmity, but only permanent interest.)

## ೯೯. ಹೀಯಮಾನಃ ಸಂಧಿಂ ಕುರ್ವೀತ್

ಸಂಧಿ. ವಿಗ್ರಹ. ಯಾನ. ಆಸನ, ದ್ವೈಧೀಭಾವ ಹಾಗು ಆಶ್ರಯ ಈ ಆರಕ್ಕೆ ರಾಜ್ಯನೀತಿಶಾಸ್ತ್ರದಲ್ಲಿ ಷಾಡ್ಗುಣ್ಯವೆಂದು ಕರೆಯುತ್ತಾರೆ. ವಿದೇಶ ವ್ಯವಹಾರ ನೀತಿಯನ್ನು ರೂಪಿಸಲು ಪ್ರಸಂಗಾನುಸಾರವಾಗಿ ರಾಜನು ಈ ಆರರಲ್ಲಿ ಒಂದನ್ನು ಯೋಜಿಸುವುದು ರೂಢಿ. ಇಬ್ಬರು ರಾಜರ ನಡುವೆ ಭೂಮಿ. ಹಿರಣ್ಯ, ಸೈನ್ಯ ಇತ್ಯಾದಿಗಳನ್ನು ಬಿಟ್ಟುಬಿಡುವ ಇಲ್ಲವೆ ಕೊಡುವ ಕರಾರಿನ ಮೇಲೆ ಮಾಡಿಕೊಂಡ ಒಪ್ಪಂದವೇ ಸಂಧಿ. ಶತ್ರುವಿನೊಂದಿಗೆ ಹೂಡಿದ ಹೋರಾಟವೇ ವಿಗ್ರಹ ಅಥವಾ ಯುದ್ಧ. ವಿಜಿಗೀಷು ಹಾಗು ಶತ್ರುವು ಸಮಾನಬಲರಾಗಿದ್ದಾಗ ಒಬ್ಬರನ್ನೊಬ್ಬರು ಕೆಣಕದೆ ಉದಾಸೀನಭಾವದಿಂದಿರುವುದೇ ಆಸನ. ಎಲ್ಲ ರೀತಿಯಿಂದಲೂ ವಿಜಿಗೀಷುವು ಬಲಾಢ್ಯನಿದ್ದಾಗ ಶತ್ರುವಿನ ಮೇಲೆ ದಂಡೆತ್ತಿ ಹೋಗುವುದೇ ಯಾನ. ತಾನು ಹೀನಬಲನಾದಾಗ ಇನ್ನೊಬ್ಬರಿಗೆ ಶರಣುಹೋಗುವುದೇ ಸಶ್ರಯ ಅಥವಾ ಆಶ್ರಯ.

ಸಂಧಿ ಹಾಗು ವಿಗ್ರಹಗಳನ್ನು ಏಕಕಾಲಕ್ಕೆ ಪ್ರಯೋಗಿಸುವುದೇ ದ್ವೈಧೀ-ಭಾವವು. ಇದನ್ನು ಮೇಲುನೋಟಕ್ಕೆ ಸಂಧಿಯನ್ನು ಮಾಡಿಕೊಂಡು ಒಳ-ಗೊಳಗೆ ಯುದ್ಧದ ಸಿದ್ಧತೆಯನ್ನು ಮಾಡುವುದು ಅಥವಾ ಒಬ್ಬ ರಾಜ-ನೊಂದಿಗೆ ಸಂಧಿಯನ್ನು ಮಾಡಿಕೊಂಡು ಬೇರೊಬ್ಬನೊಂದಿಗೆ ಯುದ್ಧ-ಮಾಡುವುದು ಎಂದು ಅರ್ಥೈಸಬಹುದು.

ಪ್ರಸ್ತುತ ಸೂತ್ರದಲ್ಲಿ ಚಾಣಕ್ಯನು, ಶತ್ರುವಿಗಿಂತ ತಾನು ದುರ್ಬ-ಲನು ಎಂದು ವಿಜಿಗೀಷುವಿಗೆ ಅನಿಸಿದಾಗ ಒಪ್ಪಂದದ ವಿಚಾರ ಮಾಡ-ಬೇಕು ಎಂದು ಸಲಹೆಯನ್ನೀಯುತ್ತಾನೆ. ಇದರಲ್ಲಿ ತುಂಬಾ ಔಚಿತ್ಯವಿದೆ. ಅವಕಾಶ ದೊರೆತಾಗ ಶತ್ರುವನ್ನು ಹಣ್ಣುಮಾಡುವುದೇ ರಾಜನ ಧರ್ಮ. ರೋಗವನ್ನು ಹಾಗು ಶತ್ರುವನ್ನು ಬಲಿಯಗೊಡಬಾರದೆಂಬುದು ನಿಯಮ. ಆದ್ದರಿಂದ ಶತ್ರುವು ತನಗಿಂತ ದುರ್ಬಲನಾಗಿದ್ದಾಗ, ಅವನನ್ನು ಸೋಲಿ-ಸುವುದು ಎಷ್ಟೂ ಅಸಾಧ್ಯವಿಲ್ಲವೆಂದೆನಿಸಿದಾಗ ಸಂಧಿಗೆ ಒಪ್ಪುವ ಆವಶ್ಯಕತೆ-ಯಿಲ್ಲವೆನ್ನುವುದು ಶಾಸ್ತ್ರಕಾರನ ಅಭಿಪ್ರಾಯ. ಆದರೆ ಬಹಳಷ್ಟು ಪ್ರಸಂಗ-ಗಳಲ್ಲಿ ಎರಡೂ ಪಕ್ಷಗಳಲ್ಲಿ ಅಲ್ಪ-ಸ್ವಲ್ಪವಾದರೂ ಹಾನಿಯ ಸಂಭವ-ವಿರುವುದರಿಂದ ರಾಜರು ಸಾಮಾನ್ಯವಾಗಿ ಸಂಧಿಗೆ ಒಪ್ಪಿಕೊಳ್ಳುತ್ತಾರೆ. ಆದ್ದರಿಂದ ತನಗೆ ಹಾನಿಯ ಸಂಭವ ತೋರಿದಾಗ ಮಾತ್ರ ಸಂಧಿಗೆ ಒಪ್ಪ-ಬೇಕು ಎಂದು ಉಪದೇಶಿಸಲಾಗಿದೆ.

## ೧೦೦. ತೇಜೋ ಹಿ ಸಂಧಾನ ಹೇತುಃ ತದರ್ಥಾನಾಮ್

ವ್ಯಕ್ತಿಯ ಪ್ರಭಾವವೇ ಸಂಧಾನಕ್ಕೆ ಕಾರಣವು. ಪ್ರಭಾವವಿಲ್ಲದವನು ಗಲ್ಲುವುದು ಹೇಗೆ ಸಾಧ್ಯ ? ಆದ್ದರಿಂದ ಎದುರಾಳಿಯ ಪ್ರಭಾವವು ತನಗೆ ಹಾನಿಯನ್ನುಂಟುಮಾಡುವುದು ಎಂದೆನಿಸಿದಾಗ ಸಂಧಾನಕ್ಕೆ ಪ್ರಯತ್ನಗಳು ನಡೆಯುತ್ತವೆ. ಇದಕ್ಕೆ ದೃಷ್ಟಾಂತರೂಪವಾಗಿ—

## ೧೦೧. ನಾತಪ್ತಲೋಹೋ ಲೋಹೇನ ಸಂಧೀಯತೇ

ಕಾಯಿಸದೇ ಇದ್ದ ಕಬ್ಬಿಣದ ಸಲಾಕೆಯ ಒಂದು ತುಂಡು ಇನ್ನೊಂದು ತುಂಡಿನೊಂದಿಗೆ ಹೊಂದಿಕೊಳ್ಳುವುದಿಲ್ಲ ಎಂದು ಉದಾಹರಿಸಲಾಗಿದೆ. ಇಲ್ಲಿ ಕಾಯಿಸುವುದೇ ಪ್ರಭಾವ. ಒಬ್ಬರ ಪ್ರಭಾವದ ಅರಿವು ಇನ್ನೊಬ್ಬರಿಗೆ ಆದಾಗ ಅವರು ಪರಿಸ್ಥಿತಿಗೆ ತಲೆಬಾಗಿ ಹೊಂದಿಕೊಳ್ಳಬೇಕಾಗುತ್ತದೆ. ಎಂದರೆ ಸಂಧಿಗೆ ಒಪ್ಪಬೇಕಾಗುತ್ತದೆಂದು ಪ್ರಕೃತ ಸೂತ್ರವು ಹೇಳುತ್ತದೆ. ಅರ್ಥಾತ್ ಸಮಬಲನಾದ ರಾಜನನ್ನು ಸಂಧಿಗೆ ಒಪ್ಪಿಸಬೇಕಾದರೆ ಅವನು ನಮಗೆ ಮಾಡಿದಷ್ಟು ಅಪಕಾರವನ್ನು ಅವನಿಗೆ ತಿರುಗಿಸಿದಾಗ ಮಾತ್ರ ಸಾಧ್ಯ.

## ೧೦೨. ಬಲವಾನ್ ಹೀನೇನ ವಿಗೃಹ್ಣೀಯಾತ್

ಬಲಿಷ್ಠನಾದ ರಾಜನು ತನಗಿಂತ ಹೀನಬಲನಾದ ಶತ್ರುವು ದೊರೆತಾಗ ಅವನೊಡನೆ ಸಂಧಾನ ಮಾಡಿಕೊಳ್ಳುವ ಆವಶ್ಯಕತೆ ಬೀಳುವುದಿಲ್ಲ. ಆದ್ದರಿಂದ ಯುದ್ಧಮಾಡಿ ಅವನನ್ನು ಸೋಲಿಸುವುದೇ ಸಮಂಜಸವಾದ-ದ್ದೆಂದು ಚಾಣಕ್ಯನು ಇಲ್ಲಿ ಹೇಳಿದ್ದಾನೆ. ಆದರೆ ಮುಂದಿನ ಸೂತ್ರದಲ್ಲಿ—

## ೧೦೩. ನ ಜ್ಯಾಯಸಾ ಸಮೇನ ವಾ

ತನಗಿಂತ ಬಲಿಷ್ಠ ಅಥವಾ ಸಮಬಲರಾದ ರಾಜರೊಂದಿಗೆ ಯುದ್ಧ-ಹೂಡುವುದು ಜಾಣತನವಲ್ಲ ಎಂದು ಪ್ರತಿಪಾದಿಸಲಾಗಿದೆ. ಏಕೆಂದರೆ ಯಾವುದೇ ಕಾರ್ಯದಲ್ಲಿ ಲಾಭವಿದ್ದರೇನೇ ಪ್ರಯೋಜನ. ಆದರೆ ಮೇಲಿನ ಎರಡೂ ಪ್ರಸಂಗಗಳಲ್ಲಿ ವಿಜಿಗೀಷುವಿಗೆ ಏನೂ ಲಾಭವಿಲ್ಲವೆನ್ನುವುದನ್ನು ಮುಂದಿನ ಎರಡು ಸೂತ್ರಗಳಲ್ಲಿ ಚಾಣಕ್ಯನು ಸೋದಾಹರಣವಾಗಿ ವಿವರಿಸುತ್ತಾನೆ.

## ೧೦೪. ಗಜಪಾದ ಯುದ್ಧಮಿವ ಬಲವದ್ವಿಗ್ರಹಃ

ಆನೆಯ ಮೇಲಿನ ಮಾವುತನೊಂದಿಗೆ ಕಾಲಾಳುವು ಯುದ್ಧ ಮಾಡಿದರೆ ಕ್ಷಣಾರ್ಧದಲ್ಲಿ ಸೋತುಹೋಗುವಂತೆ ಬಲಿಷ್ಠ ರಾಜನೊಂದಿಗೆ ಹೂಡಿದ ಯುದ್ಧವು ಸರ್ವನಾಶಕ್ಕೆ ಕಾರಣವಾಗುತ್ತದೆ. ಹಾಗೆಯೇ—

## ೧೦೫. ಆಮಪಾತ್ರಮಾಮೇನ ಸಹ ವಿನಶ್ಯತಿ

ಒಂದು ಮಣ್ಣಿನ ಪಾತ್ರೆಯನ್ನು ಇನ್ನೊಂದಕ್ಕೆ ಅಪ್ಪಳಿಸಿದರೆ ಎರಡೂ ಒಡೆದುಹೋಗುವಂತೆ ಇಬ್ಬರು ಸಮಬಲ ರಾಜರು ಪರಸ್ಪರ ವೈಮನಸ್ಯದಿಂದ ಹೋರಾಡಿ ಹಾಳಾಗಿಹೋಗುತ್ತಾರೆಂಬುವನ್ನು ಈ ಸೂತ್ರವು ಬಹು ಮಾರ್ಮಿಕವಾಗಿ ತಿಳಿಯಪಡಿಸುತ್ತದೆ.

## ೧೦೬. ಅರಿಪ್ರಯತ್ನಮಭಿಸಮೀಕ್ಷೇತ

ಶತ್ರುವಿನ ಕಪಟ ಕಾರಸ್ಥಾನಗಳ ಮೇಲೆ ಯಾವಾಗಲೂ ಲಕ್ಷ್ಯವಿಟ್ಟಿರಬೇಕು ಎಂದು ಈ ಸೂತ್ರವು ಎಚ್ಚರಿಸುತ್ತದೆ. 'ರಾಜಾನಃ ಚಾರಚಕ್ಷುಷಃ', 'ಚಾರೈಃ ಪಶ್ಯಂತಿ ರಾಜಾನಃ' ಎಂಬೀ ವಾಕ್ಯಗಳು ರಾಜನೀತಿಯಲ್ಲಿ ಅಲ್ಪ-ಸ್ವಲ್ಪ ಗತಿಯಿದ್ದರಿಗೂ ಕೂಡ ನಾಲಗೆಯ ತುದಿಯ ಮೇಲೆಯೇ ಇರುತ್ತವೆ. ಗುಪ್ತಚರರು ರಾಜನಿಗೆ ಕಣ್ಣುಗಳಿದ್ದಂತೆ. ರಾಜ್ಯದ ಮೂಲೆ-ಮೂಲೆಗಳಲ್ಲಿಯೂ ನಡೆಯುತ್ತಿರುವ ಯಾವತ್ತೂ ರಾಜಕೀಯ ಹಾಗು ಇನ್ನಿತರ ಚಟುವಟಿಕೆಗಳನ್ನು ಸಾದ್ಯಂತವಾಗಿ ತಿಳಿದುಕೊಂಡು ರಾಜನಿಗೆ ವರದಿ ಒಪ್ಪಿಸುವುದು ಅವರ ಕರ್ತವ್ಯ. ಹಾಗೆಯೇ ಪರರಾಷ್ಟ್ರಗಳಲ್ಲಿಯೂ ರಾಜದೂತರು ಹಾಗು ಗುಪ್ತಚಾರರ ಮುಖಾಂತರ ಈ ಕಾರ್ಯವು ಅವ್ಯಾಹತವಾಗಿ ನಡೆಯತಕ್ಕದ್ದೆಂದು ಅರ್ಥಶಾಸ್ತ್ರವು ಹೇಳುತ್ತದೆ.

ಕೌಟಿಲ್ಯನ ಪದ್ಧತಿಯಲ್ಲಿ ಕಾಪಟಿಕ, ಉದಾಸ್ಥಿತ, ಗ್ರಹಪತಿವ್ಯಂಜನ, ವೈದೇಹಕ ವ್ಯಂಜನ, ತಾಪಸ ವ್ಯಂಜನ ಎಂಬ ಐದು ಗುಪ್ತಚಾರರ ಸಂಸ್ಥೆಗಳು ಹಾಗು ಸತ್ರಿ, ತೀಕ್ಷ್ಣ, ರಸದ ಹಾಗು ಪರಿವ್ರಾಜಿಕಾ ಎಂಬ ನಾಲ್ಕು ಸಂಚಾರಿ ಗುಂಪುಗಳು ವಿವರಿಸಲ್ಪಟ್ಟಿವೆ. ಇವರು ಸ್ವದೇಶ ಹಾಗು ಪರದೇಶಗಳಲ್ಲಿ ಕೃತ್ಯಾಕೃತ್ಯ ಪರೀಕ್ಷಣೆಯ ಕಾರ್ಯದಲ್ಲಿ ನಿರತರಾಗಿರಬೇಕು ಎಂದು ಕೌಟಿಲ್ಯನು ಪಾರಿಭಾಷಿಕವಾಗಿ ಹೇಳುತ್ತಾನೆ. ಶತ್ರುವಿನ ಪ್ರೇರಣೆಯಿಂದ ತಮ್ಮ ರಾಜನಿಗೆ ಕೇಡುಬಗೆಯಬಹುದಾದ ಅಸಂತುಷ್ಟ ಪ್ರಜೆಗಳು ಕೃತ್ಯವರ್ಗದಲ್ಲಿ ಬರುತ್ತಾರೆ. ಇದಕ್ಕೆ ವಿರುದ್ಧವಾಗಿ ಯಾರು ಶತ್ರುಗಳ ಪ್ರೇರಣೆಗೆ ಒಳಗಾಗದೆ ಕೊನೆಯ ವರೆಗೂ ಸ್ವಾಮಿನಿಷ್ಠರಾಗಿಯೇ ಉಳಿಯುತ್ತಾರೋ ಅವರು ಅಕೃತ್ಯ ವರ್ಗದವರು. ( ಈ ವಿಷಯದಲ್ಲಿ ಸಂಪೂರ್ಣ ವಿವರಣೆಯನ್ನು ತಿಳಿದುಕೊಳ್ಳಬೇಕೆನ್ನುವವರು ಇದೇ ಲೇಖಕರ ಕೌಟಿಲ್ಯನ ರಾಜ್ಯಪದ್ಧತಿಯ ಸಮೀಕ್ಷೆ ಎಂಬ ಪುಸ್ತಕದ ನಾಲ್ಕನೆಯ ಪ್ರಕರಣವನ್ನು ಓದಬಹುದು. )

ಮೇಲೆ ವಿವರಿಸಿದ ನಾನಾಪ್ರಕಾರದ ಗುಪ್ತಚಾರರು ಹಾಗು ದೂತರ ಮುಖಾಂತರ ರಾಜನು ಶತ್ರುಗಳ ಚಟುವಟಿಕೆಗಳ ಮೇಲೆ ಕಣ್ಣಿಟ್ಟಿರಬೇಕು. ಪ್ರತಿನಿತ್ಯವೂ ಗುಪ್ತಚಾರರಿಂದ ಬಂದ ವಿವರಗಳನ್ನು ತಿಳಿದುಕೊಳ್ಳಬೇಕು ಹಾಗು ಅವರಿಗೆ ಹೊಸ–ಹೊಸ ಕೆಲಸಗಳನ್ನು ಒಪ್ಪಿಸಬೇಕು ಎಂದು ಅರ್ಥಶಾಸ್ತ್ರದಲ್ಲಿ ರಾಜನ ನಿತ್ಯ ಕಾರ್ಯಕ್ರಮಗಳ ವೇಳಾಪತ್ರಿಕೆಯನ್ನು ವಿವರಿಸುವಾಗ ಸೂಚಿಸಲಾಗಿದೆ. ರಾಜಕೀಯವಾಗಿ ಪ್ರಬಲವಾಗಿರುವ ಅಮೇರಿಕಾ ಹಾಗು ರಾಜಕಾರಣದಲ್ಲಿ ನಿಶಿತಮಗಳೆಂದೆನಿಸಿಕೊಳ್ಳುವ ಇಸ್ರಾಯಿಲ್, ಹಾಗೆಯೇ ಚೀನಾ, ರಶಿಯಾ, ಪಾಕಿಸ್ತಾನ ಇತ್ಯಾದಿ ದೇಶಗಳ ಗುಪ್ತಚಾರರು ಪರದೇಶಗಳಲ್ಲಿ ನಡೆಸುತ್ತಿರುವ ಚಟುವಟಿಕೆ ಹಾಗು ಎಬ್ಬಿಸುವ ಕೋಲಾಹಲಗಳನ್ನು ಇಲ್ಲಿ ಸ್ಮರಿಸಬಹುದು.

## ೧೦೭. ದ್ವಯೋರಪಿ ಈರ್ಷ್ಯತೊ ದ್ವೈಧೀಭಾವಂ ಕುರ್ವೀತ್

ಹಿಂದಿನ ಸೂತ್ರದಲ್ಲಿ ಶತ್ರುರಾಜರ ಗುಪ್ತ ಕಾರಸ್ಥಾನಗಳ ಮೇಲೆ ಕಣ್ಣಿಡಬೇಕು ಎಂದು ಹೇಳಿ ಪ್ರಸ್ತೂತ ಸೂತ್ರದಲ್ಲಿ ಒಂದು ವೇಳೆ ವಿಜಿಗೀಷುವಿಗೆ ಇಬ್ಬರು ಶತ್ರುಗಳಿದ್ದಾಗ, ಒಬ್ಬನೊಂದಿಗೆ ಸಂಧಾನ ಮಾಡಿಕೊಂಡು ಇನ್ನೊಬ್ಬನ ಚಟುವಟಿಕೆಗಳನ್ನು ಹತ್ತಿಕ್ಕಬೇಕು ಎಂದು ಚಾಣಕ್ಯನು ಉಪದೇಶಿಸುತ್ತಾನೆ. ಪಾಕಿಸ್ತಾನವನ್ನು ಹಣ್ಣುಮಾಡುವುದಕ್ಕಾಗಿ ಚೀನದೊಡನೆ ಸಂಧಾನ ಮಾಡಿಕೊಳ್ಳಲು ಪ್ರಯತ್ನಿಸುತ್ತಿರುವುದು ಈ ಸೂತ್ರದಲ್ಲಿಯ ನೀತಿಗೆ ಅನುಗುಣವಾಗಿದೆಯೆನ್ನಬಹುದು. ಇದು ದ್ವೈಧೀಭಾವದಲ್ಲಿಯ ಒಂದು ಪ್ರಕಾರ. ಇನ್ನೊಂದು ಪ್ರಕಾರವನ್ನು ಮುಂದಿನ ಸೂತ್ರದಲ್ಲಿ—

## ೧೦೮. ಸಂಧಾಯ ಏಕತೋ ವಾ

ಮೇಲುನೋಟಕ್ಕೆ ಸಂಧಾನ ಮಾಡಿಕೊಂಡಂತೆ ತೋರಿಸಿ ಒಳಗೊಳಗೆ ಯುದ್ಧದ ಸಿದ್ಧತೆಗಳನ್ನು ಮಾಡಿಕೊಂಡು ಅವಕಾಶ ದೊರೆತ ಕೂಡಲೇ ಶತ್ರುವನ್ನು ಹಣ್ಣುಮಾಡಬೇಕು ಎಂದು ವಿವರಿಸಲಾಗಿದೆ.

## ೧೦೯. ಅಮಿತ್ರವಿರೋಧಾತ್ ಆತ್ಮರಕ್ಷಾಮಾವಸೇತ್

ಶತ್ರುವು ತನ್ನ ವಿರುದ್ಧವಾಗಿ ನಡೆಸಿರುವ ಎಲ್ಲ ಚಟುವಟಿಕೆಗಳನ್ನು ತಿಳಿದುಕೊಂಡು ಅವುಗಳಿಂದ ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಎಲ್ಲ ಪ್ರಯತ್ನಗಳನ್ನು ಮಾಡಬೇಕು. ಯಾವಾಗಲೂ ವಿಜಿಗೀಷುವು ಎಚ್ಚರದಿಂದ ರಾಜ್ಯಕಾರ್ಯವನ್ನು ನಡೆಸಿಕೊಂಡು ಹೋಗಬೇಕೆನ್ನುವುದೇ ತಾತ್ಪರ್ಯ.

## ೧೧೦. ಶಕ್ತಿಹೀನೋ ಬಲವಂತಮಾಶ್ರಯೇತ್

ಯುದ್ಧದಿಂದ ನಷ್ಟವೇ ನಿಶ್ಚಿತವೆಂದೆನಿಸಿದಾಗ ಹಾಗೆ ಮಾಡದೆ ಸಂಧಿಯನ್ನು ಮಾಡಿಕೊಳ್ಳುವುದೇ ಶ್ರೇಯಸ್ಸು ಎಂದು ಈ ಹಿಂದೆ ಸೂಚಿಸಲಾಗಿದೆ. ಈಗ ಶತ್ರುವು ಅತೀ ಬಲಿಷ್ಠನಾಗಿದ್ದು ಸಂಧಿಗೆ ಒಪ್ಪುವ ಪರಿಸ್ಥಿತಿಯಲ್ಲಿ ಇರದಿದ್ದರೆ, ಅವನಿಗಿಂತಲೂ ಬಲಿಷ್ಠನಾದ ಬೇರೊಬ್ಬ ರಾಜನನ್ನು ಆಶ್ರಯಿಸಬೇಕು ಎಂದು ಪ್ರಸ್ತುತ ಸೂತ್ರವು ಸಲಹೆ ನೀಡುತ್ತದೆ. ಇದೇ ಷಾಡ್ಗುಣ್ಯದಲ್ಲಿ ಒಂದಾದ ಸಂಶ್ರಯ ಅಥವಾ ಆಶ್ರಯವೆಂಬ ಉಪಾಯ. ಹೀಗೆ ಆಶ್ರಯಕೊಟ್ಟ ರಾಜನಿಗೆ ವಿಜಿಗೀಷುವು ಸರ್ವವಿಧದಿಂದಲೂ ವಿಧೇಯನಾಗಿರಬೇಕು. ಕನಸಿನಲ್ಲಿಯೂ ಕೂಡ ಅವನ ವಿಶ್ವಾಸಘಾತಮಾಡುವುದನ್ನು ಚಿಂತಿಸಬಾರದು.

## ೧೧೧. ದುರ್ಬಲಾಶ್ರಯೋ ದುಃಖಮಾವಹತಿ

ಬಲಿಷ್ಠನಾದ ರಾಜನನ್ನೇ ಆಶ್ರಯಿಸಬೇಕು ಎಂದು ಹೇಳುವ ಮುಖ್ಯ ಕಾರಣವೆಂದರೆ ದುರ್ಬಲ ರಾಜರನ್ನು ಆಶ್ರಯಿಸುವುದರಿಂದ ಜಯವೂ ದೊರೆಯಲಾರದಷ್ಟೇ ಅಲ್ಲ, ಕಷ್ಟಗಳು ಹೆಚ್ಚಾಗುತ್ತ ಹೋಗುತ್ತವೆ. ಇಬ್ಬರ ದೌರ್ಬಲ್ಯದ ಲಾಭವನ್ನು ತೆಗೆದುಕೊಂಡು ಬಲಿಷ್ಠನಾದ ಶತ್ರುವು ಹೆಚ್ಚಿನ ರೋಷದಿಂದ ಇವರ ಸರ್ವನಾಶಕ್ಕಾಗಿ ಪ್ರಯತ್ನಿಸುತ್ತಾನೆನ್ನುವುದೇ ತಾತ್ಪರ್ಯ.

## ೧೧೨. ಅಗ್ನಿವದ್ ರಾಜಾನಮಾಶ್ರಯೇತ್

ಆಶ್ರಯ ಪಡೆದ ರಾಜನೊಂದಿಗೆ ಅತಿಯಾದ ಸಲಿಗೆಯಿಂದ ವ್ಯವಹಾರ ಮಾಡುವುದು ಸರಿಯಲ್ಲ. ಅವನು ಬೆಂಕಿಯಿದ್ದಂತೆ. ದೂರದಿಂದಲೇ

ಬೆಂಕಿಯಿಂದ ಕಾಯಿಸಿಕೊಂಡರೆ ಹಿತವೆನಿಸುತ್ತದೆ. ಆದರೆ ಸಮೀಪಕ್ಕೆ ಹೋದಂತೆಲ್ಲ ಸುಡುತ್ತದೆ. ಹಾಗೆಯೇ ಆಶ್ರಯದಾತನೊಂದಿಗೆ ಹೆಚ್ಚು ಹತ್ತಿರದಿಂದ ವ್ಯವಹಾರ ಮಾಡುವುದು ನಾಶಕ್ಕೆ ಕಾರಣವಾಗುತ್ತದೆ. ಇದೇ ರೀತಿಯ ವ್ಯವಹಾರವು ನೌಕರಿಯಲ್ಲಿರುವವರಿಗೂ ವರಿಷ್ಠರೊಂದಿಗೆ ನಡೆದು-ಕೊಳ್ಳುವ ವಿಷಯದಲ್ಲಿ ಅನ್ವಯಿಸುತ್ತದೆ.

## ೧೧೩. ರಾಜ್ಞಃ ಪ್ರತಿಕೂಲಂ ನಾ ಚರೇತ್

ಆ ರಾಜನಿಗೆ ಪ್ರತಿಕೂಲ ಅಂದರೆ ವಿರೋಧವೆನಿಸುವ ಯಾವ ಕಾರ್ಯ-ಗಳನ್ನು ಮಾಡಬಾರದು. ಉದಾಹರಣೆಗೆಂದು ಆ ರಾಜನ ಶತ್ರುಗಳೊಂದಿಗೆ ಅನ್ನ, ಕನ್ಯಾಸಂಬಂಧಗಳನ್ನಿಟ್ಟುಕೊಳ್ಳತಕ್ಕದ್ದಲ್ಲ. ಮಹತ್ವದ ರಾಜಕಾರ್ಯ-ವನ್ನು ನಿರ್ಣಯಿಸುವಾಗ ಅವನ ಸಲಹೆಯನ್ನು ತೆಗೆದುಕೊಳ್ಳುವುದು ಅವಶ್ಯ. ಯಜ್ಞಾದಿ ಧಾರ್ಮಿಕ ಕಾರ್ಯಗಳನ್ನು ಕೂಡ ಅವನ ಕಿವಿಯ ಮೇಲೆ ಇಟ್ಟೇ ಆರಂಭಿಸಬೇಕೆಂದ ಅರ್ಥಶಾಸ್ತ್ರವು ಸಲಹೆಯನ್ನೀಯುತ್ತದೆ. ಮೊದಲೇ ಶತ್ರುಗಳ ಪೀಡೆಗೆ ಒಳಗಾದಾಗ ಆಶ್ರಯಕೊಟ್ಟವನ ಸದ್ಭಾವನೆಯನ್ನು ಕಳೆದುಕೊಂಡರೆ ಸರ್ವನಾಶಕ್ಕೆ ಆಮಂತ್ರಣ ಕೊಟ್ಟಂತೆಯೇ ಸರಿ.

## ೧೧೪. ಉದ್ಧತ ವೇಷಧರೋ ನ ಭವೇತ್

ಔದ್ಧತ್ಯವನ್ನು ಪ್ರಕಟಿಸುವ ವೇಷವನ್ನು ಬಲಿಷ್ಠರ ಆಶ್ರಯವನ್ನು ಪಡೆದವನು ಧರಿಸಬಾರದು. ಅಂದರೆ ಆಶ್ರಯ ಕೊಟ್ಟವನಿಗೆ ನಾನು ನಿನ್ನ ಸರಿಸಮಾನನೆಂದು ಸೂಚಿಸುವ ವೇಷವನ್ನೇ ಆಗಲಿ ಅಥವಾ ಅವನಿಗಿಂತ ವೈಭವವನ್ನು ಬೀರುವ ವೇಷವನ್ನೇ ಆಗಲಿ ಧರಿಸಿದರೆ, ಇವನು ನನ

ಆಶ್ರಿತನಿದ್ದರೂ ನನ್ನನ್ನು ಮೀರಿದವನಂತೆ ವರ್ತಿಸುತ್ತಾನೆಂದು ಬಗೆದು ಆಶ್ರಯದಾತನ ಅವಕೃಪೆಗೆ ಪಾತ್ರನಾಗುತ್ತಾನೆ. ಈ ಸಲಹೆಯನ್ನು ಸರಕಾರೀ ಅಥವಾ ಇತರ ಸೇವೆಯಲ್ಲಿರುವ ಸಿಬ್ಬಂದಿವರ್ಗದವರು ತಮ್ಮ ಮೇಲಿನವರೊಂದಿಗೆ ವ್ಯವಹರಿಸುವಾಗ ನೆನಪಿಡುವುದು ಅವಶ್ಯ.

## ೧೧೫. ನ ದೇವಚರಿತಂ ಚರೇತ್

ಈ ಸೂತ್ರಕ್ಕೆ ಎರಡು ಬಗೆಯ ಅರ್ಥ. ದೇವ ಶಬ್ದಕ್ಕೆ ಆಶ್ರಯಕೊಟ್ಟ ರಾಜನೆಂದು ಅರ್ಥಮಾಡಿದರೆ ಆಶ್ರಯ ಪಡೆದವನು ಸಮಾನ ಯೋಗ್ಯತೆಯನ್ನು ಪ್ರಕಟಿಸುತ್ತ ವ್ಯವಹರಿಸಬಾರದು ಎನ್ನುವುದು ಒಂದು. ಹಾಗೆಯೇ ದೇವತೆಗಳ ಚರಿತ್ರೆಯನ್ನು ಅನುಕರಣೀಯವಲ್ಲವೆನ್ನುವುದು ಇನ್ನೊಂದು. ಉದಾಹರಣೆಗಾಗಿ ಕೃಷ್ಣಪರಮಾತ್ಮನು ಹದಿನಾರು ಸಾವಿರ ಸ್ತ್ರೀಯರೊಂದಿಗೆ ಲಗ್ನಮಾಡಿಕೊಂಡನೆಂದು ಅಥವಾ ಗೋಪಿಕಾಸ್ತ್ರೀಯರ ಮನೆಯಲ್ಲಿ ಬೆಣ್ಣೆಯನ್ನು ಕದಿಯುತ್ತಿದ್ದನೆಂದು ನಾವು ಹಾಗೆ ಮಾಡಬಾರದು ಎಂಬುದೇ ತಾತ್ಪರ್ಯ.

## ೧೧೬. ನ ವ್ಯಸನಪರಸ್ಯ ಕಾರ್ಯಾವಾಪ್ತಿಃ

ರಾಜನು ವ್ಯಸನಾಧೀನನಾಗಿದ್ದರೆ ಅವನ ಕಾರ್ಯಗಳು ಸಿದ್ಧಿಸಲಾರವು ಎಂದು ಈ ಸೂತ್ರವು ಹೇಳುತ್ತದೆ. ಈಗಾಗಲೇ ವಿವರಿಸಿದಂತೆ ಅನ್ವೀಕ್ಷಿಕ್ಯಾದಿ ವಿದ್ಯೆಗಳನ್ನು ಸರಿಯಾಗಿ ಅಭ್ಯಸಿಸಿ ಸುಸಂಸ್ಕೃತನಾಗಿರಬೇಕಾದುದು ರಾಜನ ಆದ್ಯಕರ್ತವ್ಯ. ಹೀಗಾಗದೆ ಹೋದಲ್ಲಿ ಅವನು ವ್ಯಸನಾಧೀನನಾಗುವನೆಂಬುದು ಚಾಣಕ್ಯನ ಅಭಿಪ್ರಾಯ. ( ಅವಿದ್ಯಾ, ಅವಿನಯಃ ಪುರುಷವ್ಯಸನಹೇತುಃ ).

ವ್ಯಸನಗಳಲ್ಲಿ ಕಾಮಜನ್ಯ ಹಾಗು ಕ್ರೋಧಜನ್ಯವೆಂಬ ಎರಡು ಮೂಲ ಭೇದಗಳು. ಅದರಲ್ಲಿ ಕಾಮಜನ್ಯ ವ್ಯಸನಗಳು ನಾಲ್ಕು— ೧. ಬೇಟೆಯಾಡುವುದು. ೨. ಜೂಜು. ೩. ಸ್ತ್ರೀಲಂಪಟನಾಗಿರುವುದು. ೪. ಮದ್ಯಪಾನ ಮಾಡುವುದು. ಕ್ರೋಧದಿಂದ ಸಂಭವಿಸಬಹುದಾದ ವ್ಯಸನಗಳಲ್ಲಿ— ೧. ವಾಕ್ಪಾರುಷ್ಯ ( ಬೈಗುಳಗಳ ಮುಖಾಂತರ ಇನ್ನೊಬ್ಬರನು ಅಪಮಾನಿಸುವುದು ). ೨. ದಂಡಪಾರುಷ್ಯ ( ಹೊಡೆಯುವುದು ಇತ್ಯಾದಿ ಶಾರೀರಿಕ ಪೀಡೆಯನ್ನು ಕೊಡುವುದು. ). ೩. ಅರ್ಥದೂಷಣ ( ಪ್ರಜೆಗಳ ಆಸ್ತಿಯನ್ನು ಎತ್ತಿಹಾಕಿ ಅವರನ್ನು ಹೊಟ್ಟೆಗಿಲ್ಲದಂತೆ ಮಾಡುವುದು ). ಇವು ಸಮಾವೇಶಗೊಳ್ಳುತ್ತವೆ. ಕ್ರೋಧಜ ವ್ಯಸನಗಳಿಂದಂತೂ ರಾಜನು ದೂರವಿರಬೇಕಾದದ್ದು ಸರಿಯೆ. ಆದರೆ ಕಾಮಜ ವ್ಯಸನಗಳು ರಾಜನ ಚಾರಿತ್ರ್ಯನಾಶಕ್ಕೆ ಕಾರಣವಾಗಬಾರದು. ಹಾಗೆಯೇ ಏನೋ ಒಂದು ಮೋಜು ಎನ್ನುವಂತಿದ್ದರೆ ಕದಾಚಿತ್ ನಗಣ್ಯವೆನಿಸಬಹುದು. ಉದಾಹರಣೆಗಾಗಿ, ರಾಜನು ಬೇಟೆಯಾಡುವುದನ್ನು ಸಂಪೂರ್ಣವಾಗಿ ಬಿಟ್ಟುಬಿಡಬೇಕೆಂದು ಅಪೇಕ್ಷಿಸುವುದು ಸರಿಯೆಂದು ತೋರುವುದಿಲ್ಲ. ಆದರೆ ಪೂರ್ಣ ವ್ಯಸನಾಧೀನನಾದ ರಾಜನು ಜೀವನವನ್ನು ಸಾರ್ಥಕಗೊಳಿಸಲಾರ.

## ೧೧೭. ಇಂದ್ರಿಯ ವಶವರ್ತೀ ಚತುರಂಗವಾನಪಿ ವಿನಶ್ಯತಿ

ಇಂದ್ರಿಯಗಳಿಗೆ ವಶನಾಗಿರುವವನು ಅರ್ಥಾತ್ ಅವುಗಳನ್ನು ನಿಗ್ರಹಿಸುವ ಶಕ್ತಿಯಿಲ್ಲದ ರಾಜನು ಆನೆ, ಕುದುರೆ, ರಥ ಹಾಗು ಪದಾತಿ ( Foot-soldier ) ಹೀಗೆ ಚತುರಂಗ ಬಲದಿಂದ ಪರಿಪೂರ್ಣನಾಗಿದ್ದರೂ ಕೂಡ ಹಾಳಾಗಿಹೋಗುತ್ತಾನೆ. ಇಂದ್ರಿಯಗಳು ಸ್ವಾಧೀನದಲ್ಲಿರಲಿಲ್ಲವೆಂದರೆ ಮನುಷ್ಯನು ವ್ಯಸನಾಧೀನನಾಗಿಯೇ ಆಗುತ್ತಾನೆ. ಕಾಮ–ಕ್ರೋಧಗಳು ಯಾವಾಗಲೂ ಮನುಷ್ಯನನ್ನು ಅಧೀನದಲ್ಲಿಟ್ಟುಕೊಂಡು ತಮ್ಮ ತಾಳಕ್ಕೆ ತಕ್ಕಂತೆ

ಕುಣಿಸುತ್ತವೆ. ಹೀಗಾಗಿ ಮನೋನಿಗ್ರಹ, ದೃಢನಿಶ್ಚಯ ಇತ್ಯಾದಿ ಅವಶ್ಯ ಸದ್ಗುಣಗಳಿಂದ ವಂಚಿತನಾಗಿ, ಸೈನ್ಯಬಲವನ್ನು ಉಪಯೋಗಿಸಿಕೊಳ್ಳುವ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಾನೆ. ಮಂತ್ರಿಗಳೂ ಕೂಡ ಇವನ ವ್ಯಸನಾಸಕ್ತಿಯಿಂದಾಗಿ ಬೇಸತ್ತುಹೋಗುತ್ತಾರೆ. ಕೊನೆಗೆ ಇದೇ ವಿನಾಶಕ್ಕೆ ಕಾರಣವಾಗುತ್ತದೆ. ಪ್ರಾತಃಸ್ಮರಣೀಯರಾದ ಶಿವಾಜಿಮಹಾರಾಜರ ಪುತ್ರನಾದ ಸಂಭಾಜಿಯ ವಿನಾಶಕ್ಕೆ ಅವನು ವ್ಯಸನಿಯಾದದ್ದೇ ಕಾರಣ-ವಾಗಲಿಲ್ಲವೇ ?

## ೧೧೮. ನಾಸ್ತಿಕಾರ್ಯಂ ದ್ಯೂತಪ್ರವರ್ತಸ್ಯ

ಜೂಜಾಡುವ ವ್ಯಸನವಿದ್ದವನ ಯಾವ ಕಾರ್ಯವೂ ಫಲಿಸುವುದಿಲ್ಲ. ಇದಕ್ಕೆ ಮುಖ್ಯ ಕಾರಣ, ಇಂಥ ವ್ಯಸನಿಯು ಆಹಾರ, ನಿದ್ರೆ ಎಲ್ಲವನ್ನೂ ತೊರೆದು ಜೂಜಿಗೇ ಶರಣುಹೋಗುತ್ತಾನೆ. ಉಳಿದ ವ್ಯಸನಗಳಲ್ಲಿ ತಾತ್ಕಾ-ಲಿಕವಾಗಿಯಾದರೂ ಶರೀರಕ್ಕೆ ಅಲ್ಪ-ಸ್ವಲ್ಪ ಸುಖವೆನಿಸೀತು. ಆದರೆ ಜೂಜಿನಲ್ಲಿ ಕೇವಲ ಸುಖದ ಭ್ರಮೆ ಮಾತ್ರ ಇರುತ್ತದೆ. ಆರೋಗ್ಯವು ಕೆಟ್ಟು ಬೇನೆಗೆ ತುತ್ತಾಗಿ, ಸ್ವಕಾರ್ಯಭ್ರಷ್ಟನಾಗಿ ಸರ್ವನಾಶಕ್ಕೆ ಈಡಾಗು-ತ್ತಾನೆ. ನಲರಾಜ, ಧರ್ಮರಾಜರಂಥವರು ಎಷ್ಟೇ ಧರ್ಮನಿಷ್ಠರಾಗಿದ್ದರೂ ಜೂಜಿನಿಂದ ಹಾಳಾದದ್ದು ಎಲ್ಲರಿಗೂ ಗೊತ್ತಿದ್ದ ವಿಷಯ. ಪ್ರಾಚೀನ ಯುಗದಲ್ಲಿ ಜೂಜಿಗೆ ಆಮಂತ್ರಿಸಿದಾಗ, ಇಲ್ಲವೆನ್ನುವುದು ಕ್ಷತ್ರಿಯರಿಗೆ ಭೂಷಣವಲ್ಲವೆಂದು ನಂಬಿಗೆಯಿತ್ತು. ಆದರೆ ಋಗ್ವೇದದಲ್ಲಿ ಜೂಜಿನ ದುಷ್ಪರಿ-ಣಾಮಗಳನ್ನು ಒಂದು ಸೂತ್ರದಲ್ಲಿ ಸುಂದರವಾಗಿ ಚಿತ್ರಿಸಲಾಗಿದೆ.

## ೧೧೯. ಮೃಗಯಾ ಪರಸ್ಯ ಧರ್ಮಾರ್ಥೌ ವಿನಶ್ಯತಃ

ಬೇಟೆಯಲ್ಲಿ ಅತಿಯಾದ ಆಸಕ್ತಿಯಿಂದ ಕರ್ತವ್ಯಪರಾಙ್ಮುಖನಾದ ರಾಜನು ಧರ್ಮ, ಅರ್ಥ ಎರಡಕ್ಕೂ ಎರವಾಗುತ್ತಾನೆ. ಧರ್ಮಾಚರಣೆಗ

ಅವಶ್ಯವಾದ ಮನಸ್ಥಿತಿ ಹಾಗು ಅವಕಾಶ ಅವನಿಗೆ ದೊರೆಯುವುದಿಲ್ಲ. ಹಾಗೆಯೇ ಅರ್ಥಾರ್ಜನೆ ಮತ್ತು ರಾಜ್ಯಕಾರ್ಯ ಇವುಗಳಿಗೆ ನೀಡಬೇಕಾದ ಪ್ರಾಧಾನ್ಯವನ್ನು ಬೇಟೆಯ ಆಸಕ್ತಿಯಿಂದಾಗಿ ನೀಡಲಾರದೆ ಅಪಕೀರ್ತಿಗೆ ಪಾತ್ರನಾಗುತ್ತಾನೆ.

## ೧೨೦. ನ ಕಾಮಾಸಕ್ತಸ್ಯ ಕಾರ್ಯಾನುಷ್ಠಾನಮ್

ಕಾಮಕ್ಕೆ ವಶನಾಗಿ ಸ್ತ್ರೀಲಂಪಟನಾದವನು ರಾಜಕಾರ್ಯಕ್ಕೆ ವಿಮುಖನಾಗಿ ಸ್ತ್ರೀಸಹವಾಸದಲ್ಲಿಯೇ ಲೋಲನಾಗಿಬಿಡುತ್ತಾನೆ. ಈ ವ್ಯಾಮೋಹದಿಂದ ಅವನು ಎಲ್ಲ ಕ್ಷೇತ್ರಗಳಲ್ಲಿಯೂ ಅಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲ ಪರ್ವತರಾಜನು ಸ್ತ್ರೀಲಂಪಟನಾಗಿದ್ದುದು ವಿಷಕನ್ಯಾಸಂಬಂಧದಿಂದ ಅವನ ವಿನಾಶಕ್ಕೆ ಕಾರಣವಾಗಲಿಲ್ಲವೇ ?

## ೧೨೧. ಅರ್ಥೇಷಣಾ ನ ವ್ಯಸನೇಷು ಗಣ್ಯತೆ

ಸ್ವಸಂಪತ್ತನ್ನು ಬೆಳೆಸಬೇಕೆಂದು ರಾಜನಿಗಿದ್ದ ಅಭಿಲಾಷೆಯು ವ್ಯಸನವೆನಿಸಿಕೊಳ್ಳುವುದಿಲ್ಲ. ಈ ಹಿಂದೆ ಕ್ರೋಧಜನ್ಯ ವ್ಯಸನಗಳನ್ನು ವಿವರಿಸುವಾಗ ಅರ್ಥದೂಷಣವೂ ( ಪ್ರಜೆಗಳ ಆಸ್ತಿಯನ್ನು ಎತ್ತಿಹಾಕಿ ಅವರನ್ನು ನಿರ್ಗತಿಕರಾಗಿ ಮಾಡುವುದು ). ಇಂಥ ಒಂದು ದೋಷವೆಂದು ವಿವರಿಸಲಾಗಿತ್ತು. ಆದರೆ ಅರ್ಥೇಷಣವೆಂದರೆ ತನ್ನ ಅಥವಾ ರಾಜ್ಯದ ಸಂಪತ್ತನ್ನು ಅಭಿವೃದ್ಧಿಗೊಳಿಸುವುದು ಅರ್ಥಾತ್ ಇನ್ನೊಬ್ಬರಿಗೆ ಅನ್ಯಾಯವಾಗದಂತೆ ಪ್ರಯತ್ನಿಸುವುದು. ಇದು ಅರ್ಥದೂಷಣವಲ್ಲವೆಂಬುದನ್ನು ಈ ಸೂತ್ರವು ತಿಳಿಯಪಡಿಸುತ್ತದೆ.

'ರಾಜನು ಸಂತೃಪ್ತನಾಗಿರದೆ ಮಹತ್ವಾಕಾಂಕ್ಷೆಯುಳ್ಳವನಾಗಿರಬೇಕೆಂದು ಹಿಂದೆ ಹೇಳಲಾಗಿದೆ. ಆದರೆ ಪ್ರಜೆಗಳ ಆಸ್ತಿಯನ್ನು ಎತ್ತಿಹಾಕುವುದು ಮಾತ್ರ ಅರ್ಥದೂಷಣ. ರಾಜನು ಎಷ್ಟೇ ಮಹತ್ವಾಕಾಂಕ್ಷಿಯಾಗಿದ್ದರೂ ಇಂಥ ಕಾರ್ಯಕ್ಕೆ ಪ್ರವೃತ್ತನಾಗಕೂಡದು. ಇಟಲಿ ದೇಶದ ಪ್ರಸಿದ್ಧ ರಾಜಕಾರಣಪಟುವಾದ ಮ್ಯಾಕಿವೆಲ್ಲಿಯು ಕೂಡ ಇದನ್ನೇ ಹೇಳಿದ್ದಾನೆ. ಪ್ರಜೆಗಳು ತಮ್ಮ ತಂದೆ–ತಾಯಿಗಳ ಮರಣದಿಂದುಂಟಾದ ದುಃಖವನ್ನು ಮರೆಯಬಹುದು. ಆದರೆ ಆಸ್ತಿಯನ್ನು ಕಳೆದುಕೊಂಡದ್ದನ್ನು ಎಂದೂ ಮರೆಯಲಾರರು ಎಂಬುದು ಅವನ ಅಭಿಪ್ರಾಯ. ಆದ್ದರಿಂದ ಪ್ರಜೆಗಳ ಆಸ್ತಿಗೆ ರಾಜನು ಎಂದೂ ಕೈಹಚ್ಚಬಾರದು ಎಂಬುದು ಅವನ ಅಭಿಮತ.

## ೧೨೨. ಅಗ್ನಿದಾಹಾದಪಿ ವಿಶಿಷ್ಟಂ ವಾಕ್ಪಾರುಷ್ಯಮ್

ಕ್ರೋಧಜನ್ಯ ವ್ಯಸನಗಳಲ್ಲಿ ಒಂದಾದ ವಾಕ್ಪಾರುಷ್ಯ ಎಂದರೆ ಅಪಶಬ್ದಗಳ ಪ್ರಯೋಗದಿಂದ ಇನ್ನೊಬ್ಬರ ಮನಸ್ಸನ್ನು ನೋಯಿಸುವುದು ಅಥವಾ ಅಪಮಾನ ಮಾಡುವುದು. ಇದರ ಪರಿಣಾಮವು ಬಹಳೇ ಭೀಕರವಾಗಿರುತ್ತದೆಂಬುದು ಸೂತ್ರಕಾರನ ಅಭಿಪ್ರಾಯ. ಏಕೆಂದರೆ ಶರೀರಕ್ಕೆ ತಗಲಿದ ಪೆಟ್ಟು ಕಾಲಾಂತರದಲ್ಲಿ ಗುಣವಾದೀತು. ಆದರೆ ಮನಸ್ಸಿಗೆ ಆದ ಗಾಯವು ಎಂದೂ ಮಾಯುವುದಿಲ್ಲ. ಆದ್ದರಿಂದ ವಾಕ್ಪಾರುಷ್ಯದಂಥ ಗಂಭೀರವಾದ ವ್ಯಸನದಿಂದ ರಾಜನು ದೂರವಾಗಿರಬೇಕು. ಇಲ್ಲವಾದಲ್ಲಿ ಪ್ರಕೃತಿ ಹಾಗು ಪ್ರಜಾಕ್ಷೋಭಕ್ಕೆ ತುತ್ತಾಗಿ ತನ್ನ ಸರ್ವನಾಶಕ್ಕೆ ತಾನೇ ಕಾರಣೀಭೂತನಾಗುತ್ತಾನೆ. ಅದಕ್ಕೆ ವಾಕ್ಪಾರುಷ್ಯವು ಬೆಂಕಿಗಿಂತ ಹೆಚ್ಚು ಭೀಕರವಾದದ್ದೆಂದು ಹೇಳಲ್ಪಟ್ಟಿದೆ.

## ೧೨೩. ದಂಡಪಾರುಷ್ಯಾತ್ ಸರ್ವಜನದ್ವೇಷ್ಯೋ ಭವತಿ

ಏನೂ ಕಾರಣವಿಲ್ಲದೆ ಅಥವಾ ಯೋಗ್ಯ ಕಾರಣವಿಲ್ಲದೆ ಶಾರೀರಿಕವಾಗಿ

ತಾಡನಾದಿಗಳ ಮುಖಾಂತರ ಪೀಡಿಸುವುದು ದಂಡಪಾರುಷ್ಯ. ಇದರಿಂದಾಗಿ ರಾಜನು ಎಲ್ಲರ ದ್ವೇಷಕ್ಕೆ ಪಾತ್ರನಾಗುತ್ತಾನೆ. ಇದು ಎಲ್ಲರೂ ಒಪ್ಪ-ಬಹುದಾದ ವಿಷಯ. ಆದರೆ ಅಪರಾಧಿಗಳಿಗೆ ಮಾತ್ರ ಅವರವರ ಅಪ ರಾಧಗಳಿಗನುಗುಣವಾಗಿ ಶಾರೀರಿಕ ದಂಡವನ್ನು ವಿಧಿಸುವುದು ದಂಡ-ಪಾರುಷ್ಯವೆನಿಸುವುದಿಲ್ಲ. ಅದು ರಾಜನ ಕರ್ತವ್ಯ. ರಾಜ್ಯದಲ್ಲಿ ಸುವ್ಯವಸ್ಥೆ ಉಳಿಯಲು ಅದು ಅತ್ಯವಶ್ಯ.

## ೧೨೪. ಅರ್ಥತೋಷಿಣಂ ಶ್ರೀಃ ಪರಿತ್ಯಜತಿ

ಸಂಪತ್ತಿನ ವಿಷಯದಲ್ಲಿ ಅನುತ್ಸಾಹಿಯಾಗಿದ್ದ ಹಾಗು ತೃಪ್ತಿ-ಯಿಂದಿರುವ ರಾಜನನ್ನು ಲಕ್ಷ್ಮಿಯು ಬಿಟ್ಟುಹೋಗುತ್ತಾಳೆ ಎಂದು ಪ್ರಸ್ತುತ ಸೂತ್ರವು ತಿಳಿಸುಕೊಡುತ್ತದೆ. ಈ ಹಿಂದೆ ವಿವರಿಸಿದಂತೆ ಬ್ರಾಹ್ಮಣನು ಯಾವಾಗಲೂ ಹಣದಾಸೆ ಮಾಡದೆ ತೃಪ್ತಿಯಿಂದಿರಬೇಕಾದದ್ದು ಅವನ ಧರ್ಮ. ಧನಲೋಭದಿಂದ ಅವನ ಬ್ರಾಹ್ಮಣತ್ವವು ನಷ್ಟವಾಗುತ್ತದೆ. ಆದರೆ ತೃಪ್ತಿಯು ಕ್ಷತ್ರಿಯನಿಗೆ ಭೂಷಣವಲ್ಲ. ತತ್ವಜ್ಞಾನಿಯಂತೆ ಅವನು ತೃಪ್ತನಾಗಿದ್ದರೆ ಅಥವಾ 'ಸರ್ವಂ ಕ್ಷಣಿಕಂ ಕ್ಷಣಿಕಮ್' ಎಂದು ಲೌಕಿಕ ವಿಷಯಗಳ ಬಗ್ಗೆ ಪರಾಙ್ಮುಖವಾಗಿ ಉಳಿದರೆ ಶತ್ರುಗಳು ಅವನ ರಾಜ್ಯ-ವನ್ನು ಕಸಿದುಕೊಳ್ಳುತ್ತಾರೆ. ಅಂತೆಯೇ 'ಸಂತುಷ್ಟಾಮಹೀಭುಜಾ ನಷ್ಟಾಃ' ಎಂದು ಸುಭಾಷಿತವು ಹೇಳುತ್ತದೆ. ಆದ್ದರಿಂದ ವಿಜಿಗೀಷುವು ಯಾವಾ-ಗಲೂ ತನ್ನ ರಾಜ್ಯದ ಮೇರೆಗಳನ್ನು ವಿಸ್ತರಿಸುತ್ತ ದೇಶದ ಸಂಪತ್ತನ್ನು ಬೆಳೆಸುತ್ತಿರಬೇಕು. ಹಾಗು ರಾಜಮಂಡಲದಲ್ಲಿ ತನ್ನ ಪ್ರಭಾವವನ್ನು ಬೀರು-ತ್ತಿರಬೇಕು ಎಂದು ಚಾಣಕ್ಯನು ಉಪದೇಶಿಸುತ್ತಾನೆ.

## ೧೨೫. ಸರ್ವಾಶ್ಚ ಸಂಪದಃ ಸರ್ವೋಪಾಯೇನ ಪರಿಗ್ರಹೇತ್

ರಾಜನು ಎಲ್ಲ ಬಗೆಯ ಸಂಪತ್ತನ್ನು ಅನೇಕಾನೇಕ ಉಪಾಯಗಳಿಂದ ಕಲೆಹಾಕಬೇಕು ಎಂದು ಹೇಳುವ ಈ ಸೂತ್ರವು ಹಿಂದಿನ ಸೂತ್ರದ ವಿಚಾರಗಳನ್ನೇ ದೃಢಪಡಿಸುತ್ತದೆ. ರಾಜನಿಗೆ ತೃಪ್ತಿಯು ಭೂಷಣವಲ್ಲವೆಂಬ ಮಾತಂತೂ ಸರಿಯೇ. ಆದರೆ ಯಾವಾಗಲೂ ಎಚ್ಚರದಿಂದ ರಾಜ್ಯಾಡಳಿತವನ್ನು ನಿರ್ವಹಿಸಿ, ಭೂ, ಜಲ, ಸೈನ್ಯ, ಮಿತ್ರ ಇತ್ಯಾದಿ ಅನೇಕ ರೀತಿಯ ಸಂಪತ್ತನ್ನು ಬೆಳೆಸುತ್ತಲೇ ಇರಬೇಕು. ಹಿಂದೆ ೮೯ ನೆಯ ಸೂತ್ರದಲ್ಲಿ ಹೇಳಿದ 'ಅಲಬ್ಧ ಲಾಭಾರ್ಥಾ' ಎಂದರೆ ಇಲ್ಲದ್ದನ್ನು ದೊರಕಿಸುವುದೇ ರಾಜ್ಯಾಡಳಿತದ ಮೊದಲನೆಯ ಮೆಟ್ಟಲು ಎಂಬುದನ್ನು ರಾಜನು ಎಂದೂ ಮರೆಯಲಾಗದು.

## ೧೨೬. ಅಮಿತ್ರೋ ದಂಡನೀತ್ಯಾಂ ಆಯತ್ತಃ

ದಂಡವೆಂದರೆ ನ್ಯಾಯನಿಷ್ಠುರವಾದ ರಾಜ್ಯಾಡಳಿತ. ಇದರ ನೀತಿಯೇ ದಂಡನೀತಿ. ಶತ್ರುವನ್ನು ಸದೆಬಡಿದು ಅಧೀನದಲ್ಲಿಟ್ಟುಕೊಳ್ಳುವುದಕ್ಕೆ ಒಳ್ಳೆಯ ರಾಜ್ಯಾಡಳಿತವೇ ಸಾಧನವೆಂಬುದು ಈ ಸೂತ್ರದ ಅಭಿಪ್ರಾಯ. ಒಳ್ಳೆಯ ಆಡಳಿತದಿಂದ ಪ್ರಜೆಗಳು ಸುಖದಿಂದ ಬಾಳಿ ರಾಜನಿಗೆ ದ್ರೋಹಬಗೆಯುವುದಿಲ್ಲ. ಹಾಗೆಯೇ ಅಂತರಿಕ ಹಾಗು ಬಹಿಶ್ಶತ್ರುಗಳು ಕೂಡ ರಾಜನ ವಿರುದ್ಧ ಚಟುವಟಿಕೆಗಳನ್ನು ಹೂಡಲು ಅಸಮರ್ಥರಾಗುತ್ತಾರೆ. ಶತ್ರುರಾಜರ ಆಟವು ನಡೆಯದೆ ಅವರು ಸಮರ್ಥನಾದ ವಿಜಿಗೀಷುವಿನ ವಿರುದ್ಧ ಹೋಗಲಾರರು. ನಮ್ಮ ಭಾರತದೇಶದಲ್ಲಿ ಯಾವಾಗ ಅಸಮರ್ಥ ಆಡಳಿತವಿದ್ದಿತೋ ಆಗೆಲ್ಲ ಶತ್ರುಗಳ ಉಪಟಳ ಉಂಟಾದದ್ದನ್ನು ನಾವು

ಇತಿಹಾಸದ ಅಭ್ಯಾಸದಿಂದ ತಿಳಿಯಬಹುದು. ದೇಶದ ಕಲ್ಯಾಣವನ್ನು ಧ್ಯೇಯವಾಗಿಟ್ಟುಕೊಳ್ಳದೇ ಸ್ವಾರ್ಥಕ್ಕಾಗಿ ಅಧಿಕಾರದ ದುರುಪಯೋಗ ಮಾಡಿಕೊಳ್ಳುವ ಕ್ಷುದ್ರ ಜನರು ರಾಜ್ಯವಾಳುವ ವರೆಗೆ ದೇಶಕ್ಕೆ ಅಧೋ-ಗತಿ ತಪ್ಪಿದ್ದಲ್ಲ. ಏಕೆಂದರೆ ಇಂಥ ಆಡಳಿತದಲ್ಲಿ ಶತ್ರುಗಳ ಚೆಲ್ಲಾಟವು ಅಬಾಧಿತವಾಗಿ ನಡೆಯುತ್ತದೆ.

## ೧೨೭. ದಂಡನೀತಿಮಧಿತಿಷ್ಠನ್ ಪ್ರಜಾಃ ಸಂರಕ್ಷತಿ

ದಂಡನೀತಿ ಅಥವಾ ನ್ಯಾಯನಿಷ್ಠುರವಾದ ಒಳ್ಳೆಯ ರಾಜ್ಯಾಡಳಿ-ತವು ಅಲಬ್ಧಲಾಭಾದಿ ನಾಲ್ಕು ಹಂತಗಳಲ್ಲಿಯ ಕಾರ್ಯಕ್ರಮವನ್ನು ಅವ-ಲಂಬಿಸಿರುತ್ತವೆ ಎಂದು ೮೯ ನೆಯ ಸೂತ್ರದಲ್ಲಿ ವಿವೇಚಿಸಲ್ಪಟ್ಟಿದೆ. ಇಂಥ ಆಡಳಿತದ ಸಹಾಯದಿಂದ ಮಾತ್ರ ಪ್ರಜೆಗಳನ್ನು ಎಲ್ಲ ರೀತಿಯಿಂದಲೂ ಸಂರಕ್ಷಿಸುವುದು ಸಾಧ್ಯವೆಂಬುದನ್ನು ಇಲ್ಲಿ ಹೇಳಲಾಗಿದೆ.

## ೧೨೮. ದಂಡಃ ಸಂಪದಾ ಯೋಜಯತಿ

ರಾಜನು ದೇಶದ ಅಭ್ಯುದಯವನ್ನು ಸಾಧಿಸಬೇಕಾದರೆ ಅರ್ಥಾತ್ ರಾಷ್ಟ್ರವನ್ನು ಸಂಪದ್ಭರಿತವಾಗಿ ಮಾರ್ಪಡಿಸಬೇಕಾದರೆ ದಂಡ ಎಂದರೆ ಒಳ್ಳೆಯ ರಾಜ್ಯಶಾಸನ ಪದ್ಧತಿಯೇ ಸಾಧನ. ಅರ್ಥಾತ್ ರಾಜನು ಗೀತೆ-ಯಲ್ಲಿ ಹೇಳಿದ ದುಷ್ಟ ಶಾಸನ ಹಾಗು ಶಿಷ್ಟ ಪರಿಪಾಲನ ತತ್ವವನ್ನು ಚಾಚೂ ತಪ್ಪದೇ ಪಾಲಿಸಬೇಕು. ಅಂದರೆ ಪ್ರಜೆಗಳು ನಿರ್ಭೀತಿಯಿಂದಲೂ, ಸಂತೋಷ-ದಿಂದಲೂ ಬಾಳಿ ದೇಶದ ಏಳ್ಗೆಗೆ ಕಾರಣರಾಗುತ್ತಾರೆ.

## ೧೨೯. ತೀಕ್ಷ್ಣದಂಡಃ ಸರ್ವೈಃ ಉದ್ವೇಜನೀಯೋ ಭವತಿ

ಆಡಳಿತವನ್ನು ನಡೆಸಿಕೊಂಡು ಹೋಗುವಾಗ ವಿಶೇಷವಾಗಿ ಅಪ-ರಾಧಿಗಳನ್ನು ಶಿಕ್ಷಿಸಬೇಕಾದಾಗ ರಾಜನು ತೀಕ್ಷ್ಣದಂಡನಾಗಿರಬೇಕು. ಅರ್ಥಾತ್ ಕಠಿಣ ಶಿಕ್ಷೆಯನ್ನು ವಿಧಿಸಬೇಕು ಎಂಬುದು ಪೂರ್ವಾಚಾರ್ಯರ ಅಭಿಪ್ರಾಯ. ಜನರನ್ನು ಅಧೀನದಲ್ಲಿ ಇಟ್ಟುಕೊಳ್ಳಬೇಕಾದರೆ ಕಠೋರ ಶಿಕ್ಷೆಯನ್ನು ವಿಧಿಸದೆ ಗತ್ಯಂತರವಿಲ್ಲವೆಂದು ಅವರು ಒತ್ತಿಹೇಳುತ್ತಾರೆ. ಇದನ್ನು ಕೌಟಿಲ್ಯನು ಒಪ್ಪುವುದಿಲ್ಲ. ಅವನ ಅಭಿಪ್ರಾಯದಂತೆ ತೀಕ್ಷ್ಣ-ದಂಡವು ಪ್ರಜಾಕ್ಷೋಭಕ್ಕೆ ಕಾರಣವಾಗುತ್ತದೆ. ತದ್ವಿರುದ್ಧವಾಗಿ ರಾಜನು ಮೃದುವಾಗಿದ್ದರೆ ಪ್ರಜೆಗಳು ಅವನನ್ನು ಲೆಕ್ಕಿಸುವುದಿಲ್ಲ.

## ೧೩೦, ಯಥಾರ್ಹ ದಂಡಕಾರಿಸ್ಯಾತ್

## ೧೩೧, ಅಪರಾಧಾನುರೂಪೋ ದಂಡಃ

ಮೇಲಿನ ಎರಡೂ ಸೂತ್ರಗಳಲ್ಲಿ ಅಪರಾಧಕ್ಕೆ ತಕ್ಕಂತೆ ಯೋಗ್ಯ-ವಾದ ಶಿಕ್ಷೆಯನ್ನು ವಿಧಿಸಬೇಕು ಎಂದು ಉಪದೇಶಿಸಲಾಗಿದೆ. ಇದರಿಂದಾಗಿ ಪ್ರಜೆಗಳು ಧರ್ಮನಿರತರಾಗಿ ಸಮಾಜದಲ್ಲಿ ಶಾಂತಿಯು ನೆಲಸುತ್ತದೆ. ಅತಿ ಕಠೋರವಾದ ಶಿಕ್ಷೆಯಿಂದ ಸಂನ್ಯಾಸಿಗಳು ಕೂಡ ಸಿಡಿದೇಳುವಾಗ ಸಾಮಾ-ನ್ಯರ ಗತಿಯೇನು ? ಆದರೆ ಅಪರಾಧಿಗಳನ್ನು ದಂಡಿಸದೇ ಬಿಟ್ಟರೆ ದೊಡ್ಡ ಮೀನವು ಸಣ್ಣ ಮೀನವನ್ನು ನುಂಗುವಂತೆ ( ಮಾತ್ಸ್ಯನ್ಯಾಯ ) ಸಮಾಜ-ದಲ್ಲಿ ದುರ್ಬಲರ ಶೋಷಣೆಯಾಗುತ್ತದೆ.

ಇದೇ ವಿಚಾರಸರಣಿಯನ್ನು ಕಾಮಂಧಕನು ತನ್ನ ನೀತಿಸಾರ ಗ್ರಂಥ-ದಲ್ಲಿ ಸಮರ್ಥಿಸುತ್ತಾನೆ :

ಉದ್ವೇಜಯತಿ ತೀಕ್ಷ್ಣೇನ ಮೃದುನಾ ಪರಿಭೂಯತೇ ।<br>
ದಂಡೇನ ನೃಪತಿಸ್ತಸ್ಮಾತ್ ಯುಕ್ತದಂಡಃ ಪ್ರಶಸ್ಯತೇ ॥

ಈಗ ಜೇಲಿನಲ್ಲಿದ್ದ ಅಪರಾಧಿಗಳಿಗೂ ಕೂಡ ಎಷ್ಟೋ ಸೌಲಭ್ಯ-ಗಳನ್ನು ಒದಗಿಸುವುದು ಸರಕಾರದ ಧೋರಣೆಯಾಗಿದೆ. ಇದರಿಂದ ಅಪ-ರಾಧಗಳು ಕಡಿಮೆಯಾಗುವುದರ ಬದಲು ಹೆಚ್ಚಾಗುತ್ತವೆ. ಮನುಷ್ಯನು ಸ್ವಾಭಾವಿಕವಾಗಿ ಸದ್ವರ್ತನೆಯನ್ನಿಟ್ಟುಕೊಳ್ಳುವುದು ಸುಲಭವಲ್ಲ. ದಂಡದ ಭಯದಿಂದ ಇಲ್ಲವೆ ಸಮಾಜಕ್ಕೆ ಅಂಜಿ ಅವನು ಎಷ್ಟೋ ಸಲ ಅಕಾರ್ಯ-ಗಳನ್ನು ಮಾಡುವುದಿಲ್ಲ. ಆದ್ದರಿಂದ ಸಮಾಜದಲ್ಲಿ ಸುವ್ಯವಸ್ಥೆ ನೆಲಸ-ಬೇಕಾದರೆ ಶಿಕ್ಷೆಯ ಭಯವು ಇರಲೇಬೇಕು. ಈ ಮಾತನ್ನು ಮನುವು ತುಂಬಾ ಮಾರ್ಮಿಕವಾಗಿ ಹೇಳಿದ್ದಾನೆ :

> ಅದ್ಯಾತ್ಕಾಕಃ ಪುರೋಡಾಶಂಶ್ವಾ ಚಲಿಹ್ಯಾತ್ ಹವಿಸ್ತಥಾ ।
> ಸ್ವಾಮ್ಯಂಚ ನಸ್ಯಾತ್ ಸರ್ವತ್ರ ಪ್ರವರ್ತೇತಾಧರೋತ್ತರಮ್ ॥
>
> ಸರ್ವೋ ದಂಡಜಿತೋ ಲೋಕೋ ದುರ್ಲಭೋ ಹಿ ಶುಚಿರ್ನರಃ ।
> ದಂಡಸ್ಯ ಹಿ ಭಯಾತ್ ಸರ್ವಂ ಜಗದ್ಭೋಗಾಯ ಕಲ್ಪತೇ॥

ಶಿಕ್ಷೆಯ ಭಯವಿಲ್ಲದಿದ್ದರೆ ಹದ್ದು, ಕಾಗೆ, ನಾಯಿಗಳು ಕೂಡ ಯಜ್ಞ-ದಲ್ಲಿಯ ಹವಿಸ್ಸನ್ನು ಹರಣಮಾಡುತ್ತವೆ. ಲೋಕದಲ್ಲಿ ಅರಾಜಕತೆಯುಂಟಾ-ಗುತ್ತದೆ. ದಂಡ ಅಥವಾ ಶಿಕ್ಷೆಯ ಭಯದಿಂದ ಮಾತ್ರ ಜನರು ಸುಖದಿಂದ ಬಾಳುವುದು ಸಾಧ್ಯ.

## ೧೩೨. ದಂಡಾಭಾವೇ ಮಂತ್ರಿವರ್ಗಾ ಭಾವಃ

ರಾಜ್ಯಾಡಳಿತದಲ್ಲಿ ಅವಶ್ಯವಿದ್ದಾಗ ರಾಜನು ಕಠಿಣ ಶಿಕ್ಷೆಯನ್ನು ವಿಧಿ-ಸದೆ ವಿಲಾಸಮಯ ಜೀವನದಲ್ಲಿ ಮುಳುಗಿರುವುದರಿಂದಾಗಲಿ, ಅಥವಾ ನಿಷ್ಪಕ್ಷಪಾತ ದೃಷ್ಟಿಯ ಅಭಾವದಿಂದಾಗಲಿ ಅನ್ಯಾಯಕ್ಕೆ ಎಡೆಮಾಡಿಕೊಟ್ಟರೆ ಒಳ್ಳೆಯ ಮಂತ್ರಿಗಳ ಅವನಲ್ಲಿ ನಂಬಿಗೆಯನ್ನು ಕಳೆದುಕೊಂಡು ಸತ್ಯನಿಷ್ಠ-ನಾದ ಬೇರೆ ರಾಜನನ್ನು ಆಶ್ರಯಿಸುವರು ಎಂಬುದೇ ಈ ಸೂತ್ರದ

ತಾತ್ಪರ್ಯ. ಆದ್ದರಿಂದ ರಾಜನು ಎಂಥ ಪ್ರಸಂಗದಲ್ಲಿಯೂ ನ್ಯಾಯ-ವನ್ನು ಬಿಡಕೂಡದು.

## ೧೩೩. ನ ದಂಡಾದಕಾರ್ಯಾಣಿ ಕುರ್ವಂತಿ

ಮೇಲಿನ ೧೩೧ ನೆಯ ಸೂತ್ರದಲ್ಲಿ ಹೇಳಿದ ಮಾತನ್ನೇ ಬೇರೊಂದು ರೀತಿಯಲ್ಲಿ ಈ ಸೂತ್ರದಲ್ಲಿ ಹೇಳಲಾಗಿದೆ. ಜನರು ರಾಜದಂಡದ ಭಯ-ದಿಂದ ಮಾತ್ರ ತಪ್ಪುಮಾಡುವುದಿಲ್ಲ. ಸ್ವಭಾವತಃ ಸಜ್ಜನರಾಗಿರುವುದು ಅತಿ ವಿರಳ. ಶಿಕ್ಷೆಗೆ ಅಂಜಿ ನಡೆದುಕೊಳ್ಳುವುದರಿಂದ ಎಲ್ಲರಿಗೂ ತಮ್ಮ ತಮ್ಮ ಆದಾಯದಲ್ಲಿ ಜೀವನವನ್ನು ನಡೆಸಿಕೊಂಡು ಹೋಗಲು ಅನುಕೂಲ-ವಾಗುತ್ತದೆ. ಇಲ್ಲವಾದಲ್ಲಿ ಬಲಾಢ್ಯರಾದವರು ಉಳಿದವರನ್ನು ಶೋಷಣೆಗೆ ಈಡುಮಾಡದೇ ಇರಲಾರರು.

## ೧೩೪. ದಂಡನೀತ್ಯಾಮಾಯತ್ತಮಾತ್ಮ ರಕ್ಷಣಮ್

ರಾಜನಿಗೆ ಯಾವಾಗಲೂ ಶತ್ರುಗಳು ಬಹಳ. ಆದ್ದರಿಂದ ಅವನು ತುಂಬಾ ಜಾಗರೂಕನಾಗಿರಬೇಕೆಂದು ಅರ್ಥಶಾಸ್ತ್ರವು ವಿಧಿಸುತ್ತದೆ. ರಾಣಿ-ಯರು ಹಾಗು ರಾಜಕುಮಾರರು ಕೂಡ ರಾಜನ ಶತ್ರುಗಳೇ ಎಂದು ಅರ್ಥ-ಶಾಸ್ತ್ರದಲ್ಲಿ ಹೇಳಿದ್ದು ಆಶ್ಚರ್ಯವನ್ನುಂಟುಮಾಡಿದರೂ ಅಸತ್ಯವೇನಲ್ಲ. ರಾಜ್ಯಲೋಭವೇ ಹಾಗೆ ಇರುತ್ತದೆ. ಆತ್ಮರಕ್ಷಣೆಗಾಗಿ ರಾಜನು ತನ್ನ ವಾಸ ಹಾಗು ಶಯ್ಯಾಸ್ಥಾನಗಳನ್ನು ಹೇಗೆ ನಿರ್ಮಿಸಬೇಕು. ಅದರಲ್ಲಿ ಸ್ವಕೀಯರೇ ಆಗಲಿ, ಪರಕೀಯರೇ ಆಗಲಿ ಅವನನ್ನು ಮೋಸದಿಂದ ಕೊಲ್ಲಬಾರದೆಂಬಂತೆ ಯಾವ ಯಾವ ಕ್ರಮಗಳನ್ನು ತೆಗೆದುಕೊಳ್ಳಬೇಕು, ಎಷ್ಟು ತರದ ರಕ್ಷಕರು, ಯಾವ-ಯಾವ ವಿಧಾನಗಳ ಮೂಲಕ ಅವನ ರಕ್ಷಣೆಯ ಕಾರ್ಯವನ್ನು

ನಿರ್ವಹಿಸಬೇಕು ಎಂಬುದನ್ನು ಅರ್ಥಶಾಸ್ತ್ರವು ಅತಿಸೂಕ್ಷ್ಮವಾಗಿ ಚರ್ಚಿ-ಸುತ್ತದೆ. (ಈ ವಿಷಯದಲ್ಲಿ ಹೆಚ್ಚಿನ ವಿವರಗಳಿಗಾಗಿ ' ಕೌಟಿಲ್ಯನ ರಾಜ್ಯ-ಪದ್ಧತಿಯ ಸಮೀಕ್ಷೆ ' ಯನ್ನು ಓದಬಹುದು.) ಅದಕ್ಕೆಂದೇ ರಾಜನ ರಕ್ಷಣೆಯು ದಂಡನೀತಿಯ ಅಧೀನವೆಂದು ಪ್ರಸ್ತುತ ಸೂತ್ರವು ಹೇಳು-ತ್ತದೆ.

## ೧೩೫. ಆತ್ಮನಿ ರಕ್ಷಿತೇ ಸರ್ವಂ ರಕ್ಷಿತಂ ಭವತಿ

ಆತ್ಮರಕ್ಷಣೆಯೇ ರಾಜನಿಗೆ ಪ್ರಧಾನವಾದದ್ದು. ಎಷ್ಟೇ ಒಳ್ಳೆಯ ಯೋಜನೆಗಳನ್ನು ರಾಜ್ಯದ ಕಲ್ಯಾಣಕ್ಕಾಗಿ ರೂಪಿಸಿದರೂ ಅವನನ್ನೇ ಮೋಸದಿಂದ ಕೊಂದರೆ, ಯೋಜನೆಗಳ ಕಾರ್ಯಾಚರಣೆಯನ್ನು ಯಾರು ಮಾಡಿಯಾರು ? ಆದ್ದರಿಂದ ರಾಜನಿಗೆ ಎಲ್ಲಕ್ಕೂ ಮುಖ್ಯವಾದದ್ದು ತನ್ನ ಸಂರಕ್ಷಣೆ. ಅದರಿಂದ ಇನ್ನೆಲ್ಲವೂ ರಕ್ಷಿಸಲ್ಪಡುತ್ತವೆ.

## ೧೩೬. ಆತ್ಮಾಯತ್ತೌ ವೃದ್ಧಿವಿನಾಶೌ

ಹಿಂದಿನ ಸೂತ್ರದಲ್ಲಿಯ ವಿಚಾರವನ್ನೇ ಇನ್ನೊಂದು ಬಗೆಯಾಗಿ ಈ ಸೂತ್ರದಲ್ಲಿ ರಾಜ್ಯದ ವಿನಾಶ ಹಾಗು ವೃದ್ಧಿಗಳೆರಡೂ ಅವನ ಅಧೀನ-ದಲ್ಲಿಯೇ ಇರುವುವು ಎಂದು ಹೇಳಲಾಗಿದೆ. ಅವನು ತನ್ನ ಬುದ್ಧಿ ಅಥವಾ ಶೌರ್ಯಗಳ ಸಾಮರ್ಥ್ಯದಿಂದ ವೃದ್ಧಿಯನ್ನು ಪಡೆಯಬಹುದು. ಇಲ್ಲವೆ ಅವಿವೇಕಿಯಾಗಿ ವಿನಾಶಕ್ಕೀಡಾಗಬಹುದು. ಆದ್ದರಿಂದ ರಾಜನು ಪ್ರಭಾವ, ಉತ್ಸಾಹ, ಮಂತ್ರಶಕ್ತಿಗಳ ಬಲದಿಂದ ಸಿದ್ಧಿಯನ್ನು ಪಡೆಯಬೇಕೆಂಬುದೇ ತಾತ್ಪರ್ಯ.

## ೧೩೭. ದಂಡೋಹಿ ವಿಜ್ಞಾನೇ ಪ್ರಣೀಯತೇ

ಪೂರ್ವಾಪರ ವಿಚಾರಮಾಡಿ ದಂಡವನ್ನು ಪ್ರಯೋಗಿಸತಕ್ಕದ್ದು. ಮನಸ್ಸಿನ ಉದ್ವೇಗದಲ್ಲಿ ಏನಾದರೂ ಅಕಾರ್ಯವಾದರೆ ಅದು ರಾಜನ ಹಿತಕ್ಕೆ ಧಕ್ಕೆಯನ್ನು ತರುತ್ತದೆ. ಈ ಹಿಂದೆ ತನಗೆ ಆದ ಅನುಭವಗಳು ಹಾಗು ಇತರರು ತಮ್ಮ ಸಾಮರ್ಥ್ಯದ ಮೇಲೆ ಸಂಪಾದಿಸಿದ ಸಮೃದ್ಧಿ ಅಥವಾ ಅವಿವೇಕದಿಂದಾಗಿ ವಿನಾಶಕ್ಕೀಡಾದವರ ದೃಷ್ಟಾಂತಗಳನ್ನು ನೆನ-ಪಿಗೆ ತಂದುಕೊಂಡು ದಂಡದ ಪ್ರಯೋಗ ಮಾಡುವ ಆವಶ್ಯಕತೆಯನ್ನು 'ವಿಜ್ಞಾನೇ ಪ್ರಣೀಯತೇ' ಎಂಬ ಪದಗಳ ಪ್ರಯೋಗದಿಂದ ಚಾಣಕ್ಯನು ಇಲ್ಲಿ ತಿಳಿಯಪಡಿಸಿದ್ದಾನೆ.

## ೧೩೮. ದುರ್ಬಲೋಪಿ ನಾವ ಮಂತವ್ಯಃ

ಶತ್ರುವು ದುರ್ಬಲನಾಗಿದ್ದರೂ ಕೂಡ ಅವನ ವಿಷಯಕ್ಕೆ ಉದಾಸೀನ ಭಾವನೆಯನ್ನು ತಳೆಯಬಾರದು, ಅಪಮಾನವನ್ನೂ ಮಾಡಬಾರದು. ಔದಾ-ಸೀನ್ಯವನ್ನು ತಳೆದರೆ ಕಾಲಾಂತರದಲ್ಲಿ ಅವನು ಬಲಾಢ್ಯನಾಗಿ ವಿಜಿಗೀಷು-ವನ್ನು ಹತ್ತಿಕ್ಕಬಹುದು. ಅವಮಾನಿಸಿದರೆ ಬೇರೊಬ್ಬ ರಾಜನ ಸಹಾಯ-ದಿಂದ ಸೇಡುತೀರಿಸಿಕೊಳ್ಳಬಹುದು. ಆದ್ದರಿಂದ ನಿಷ್ಕಾರಣವಾಗಿ ಶತ್ರುವಿನ ಅವಮಾನ ಮಾಡಬಾರದು.

## ೧೩೯. ನಾಸ್ತ್ಯಗ್ನೇರ್ದೌರ್ಬಲ್ಯಮ್

ಹಿಂದಿನ ಸೂತ್ರದ ವಿಚಾರವನ್ನು ಸೋದಾಹರಣವಾಗಿ ಈ ಸೂತ್ರವು ಎತ್ತಿಹಿಡಿಯುತ್ತದೆ, ಶತ್ರುವು ಅಗ್ನಿ ಇದ್ದಂತೆ. ಹೇಗೆ ಅಗ್ನಿಯು ಒಂದೇ ಕಿಡಿಯಾಗಿದ್ದರೂ ರಾಶಿ-ರಾಶಿ ಹುಲ್ಲನ್ನು ಸುಡಬಹುದೋ, ಹಾಗೆಯೇ

ಶತ್ರುವನ್ನು ಕಡೆಗಣಿಸಿದರೆ ಅವನಲ್ಲಿರುವ ಕ್ಷಾತ್ರತೇಜದಿಂದಾಗಿ ಒಂದಿಲ್ಲೊಂದು ದಿನ ಅವನು ಘಾತುಕನಾಗುತ್ತಾನೆ. ಆದ್ದರಿಂದ ದುರ್ಲಕ್ಷ್ಯ ಮಾಡದೆ ಶತ್ರುವನ್ನು ಬೆಳೆಯಲು ಅವಕಾಶಕೊಡಬಾರದೆಂಬುದೇ ತಾತ್ಪರ್ಯ. ಪಾಕಿಸ್ತಾನದಂತಹ ಚಿಕ್ಕ ರಾಷ್ಟ್ರವು ಭಾರತದಲ್ಲಿ ತನ್ನ ಘಾತುಕ ಚಟುವಟಿಕೆಗಳನ್ನು ನಿರ್ಭಯವಾಗಿ ನಡೆಸುತ್ತಿರುವುದಕ್ಕೆ ಇಲ್ಲಿಯ ವರೆಗೆ ಭಾರತವು ಗಂಭೀರವಾಗಿ ಆ ಸಮಸ್ಯೆಯ ಬಗ್ಗೆ ವಿಚಾರಮಾಡಿಲ್ಲದಿರುವುದೇ ಕಾರಣವೆಂದರೆ ತಪ್ಪಾಗದು.

## ೧೪೦. ದಂಡೇ ಪ್ರತೀಯತೇ ವೃತ್ತಿಃ

ಎಲ್ಲ ವ್ಯವಹಾರವು ದಂಡನೀತಿಯನ್ನೇ ಆಧರಿಸಿರುವುದರಿಂದ ರಾಜನು ಶಾಸ್ತ್ರಾಭ್ಯಾಸ, ಮಂತ್ರಿಗಳ ಸಲಹೆ ಇತ್ಯಾದಿಗಳ ಮೂಲಕ ತನ್ನ ಮೂರೂ ಶಕ್ತಿಗಳ ಸಹಾಯದಿಂದ ನ್ಯಾಯನಿಷ್ಠುರವಾದ ಆದಳಿತವನ್ನು ನಡೆಸಿಕೊಂಡು ಹೋಗಬೇಕೆಂದು ಸಿದ್ಧಾಂತರೂಪವಾಗಿ ಈ ಸೂತ್ರವು ಉಪದೇಶಿಸುತ್ತವೆ

## ೧೪೧, ಉಪಾಯಪೂರ್ವಂ ನ ದುಷ್ಕರಂ ಸ್ಯಾತ್

ರಾಜನೀತಿಯು ಫಲಪ್ರದವಾಗಬೇಕಾದರೆ ಸಾಮ, ದಾನ, ಭೇದ ಹಾಗು ದಂಡಗಳೆಂಬ ಉಪಾಯ ಚತುಷ್ಟಯಗಳನ್ನು ಪರಿಸ್ಥಿತಿಗೆ ತಕ್ಕಂತೆ ಯೋಜಿಸಬೇಕಾಗುತ್ತದೆ ಎಂದು ಅರ್ಥಶಾಸ್ತ್ರವು ಪ್ರತಿಪಾದಿಸುತ್ತದೆ.

ಸಾಮ ಎಂದರೆ ಒಳ್ಳೆಯ ಮಾತುಗಳಿಂದ ಇಲ್ಲವೆ ಸೌಮ್ಯ ಉಪಾಯಗಳಿಂದ ಕಾರ್ಯವನ್ನು ಸಾಧಿಸುವುದು. ಈ ಉಪಾಯವು ಫಲಿಸದಿದ್ದಾಗ

ವಿಜಿಗೀಷುವು ತನ್ನ ಶತ್ರುಗಳಲ್ಲಿ ಭೇದವನ್ನು ಹುಟ್ಟಿಸಿ, ಅವರು ಪರಸ್ಪರ ಹೋರಾಡುವಂತೆ ಮಾಡಿ, ತಾನು ಉಳಿದುಕೊಳ್ಳುವ ದಾರಿಯನ್ನು ಕಂಡು-ಹಿಡಿಯಬೇಕು. ಇದನ್ನೇ ಬ್ರಿಟಿಷರು ' Divide and rule policy ' ಎಂದು ಹಿಂದೂ–ಮುಸಲ್ಮಾನರಲ್ಲಿ ಭೇದವನ್ನು ಬೆಳೆಸುವುದಕ್ಕಾಗಿ ಉಪ-ಯೋಗಿಸಿದರು. ಪ್ರಸಂಗವಶಾತ್ ಮಿತ್ರನಿಗೇ ಆಗಲಿ, ಅಥವಾ ಶತ್ರುವಿಗೇ ಆಗಲಿ ಭೂಮಿ, ಹಿರಣ್ಯಾದಿಗಳ ಆಮಿಷ ತೋರಿಸಿ ಕಾರ್ಯವನ್ನು ಸಾಧಿಸಿ-ಕೊಳ್ಳುವುದು ದಾನೋಪಾಯ. ಇದಾವುದಕ್ಕೂ ಸಮಸ್ಯೆ ಬಗೆಹರಿಯ-ದಿದ್ದರೆ ದಂಡ ಎಂದರೆ ಯುದ್ಧದಿಂದಲೇ ಅವನ್ನು ಬಗೆಹರಿಸಬೇಕೆಂಬುದು ಶಾಸ್ತ್ರಕಾರನ ಅಭಿಪ್ರಾಯ. ಷಡ್ಗುಣಗಳು ಹಾಗು ಉಪಾಯ ಚತುಷ್ಟಯ-ಗಳು ಪರಸ್ಪರ ಪೂರಕವಾಗಿರುತ್ತವೆ. ಸರಿಯಾದ ಉಪಾಯವನ್ನು ಯೋಜಿಸಿ-ದಲ್ಲಿ ಕಾರ್ಯಸಿದ್ಧಿಯು ಕಠಿಣವಾಗಲಾರದೆಂಬುದನ್ನು ಪ್ರಕೃತ ಸೂತ್ರವು ತಿಳಿಯಪಡಿಸುತ್ತದೆ. ತದ್ವಿರುದ್ಧವಾಗಿ—

## ೧೪೨. ಅನುಪಾಯಪೂರ್ವಂ ಕಾರ್ಯಂ ಕೃತಮಪಿ ವಿನಶ್ಯತಿ

ಸರಿಯಾದ ಉಪಾಯವನ್ನು ಯೋಜಿಸದೆ ಮಾಡಿದ ಕಾರ್ಯವು ನಾಶ-ವಾಗುತ್ತದೆ, ಎಂದರೆ ಅಪೇಕ್ಷಿತ ಫಲವನ್ನು ತರಲಾರದು. ಇದೇ ರಾಜ-ನೀತಿಯ ವೈಫಲ್ಯ.

## ೧೪೩. ಕಾರ್ಯಾರ್ಥಿನಾಂ ಉಪಾಯ ಏವ ಸಹಾಯಃ

ಮೇಲಿನ ಎರಡೂ ಸೂತ್ರಗಳಲ್ಲಿ ವಿವರಿಸಿದ ವಿಚಾರಗಳ ಆಧಾರದ ಮೇಲಿಂದ ಕಾರ್ಯಾರ್ಥಿ ಎಂದರೆ ತಮ್ಮ ಕಾರ್ಯವು ಸಿದ್ಧಿಸಬೇಕೆಂದು

ಬಯಸುವವರಿಗೆ ಉಪಾಯಗಳೇ ಒಳ್ಳೆಯ ಸಾಧನಗಳು. ಅವುಗಳ ಸಹಾಯ-ದಿಂದಲೇ ಸಿದ್ಧಿ ಎಂಬ ಸಿದ್ಧಾಂತವನ್ನು ಈ ಸೂತ್ರವು ನಿರೂಪಿಸುತ್ತದೆ. ಇದು ರಾಜಕಾರಣದಲ್ಲಿ ಎಷ್ಟು ಅವಶ್ಯವೋ ಲೌಕಿಕದಲ್ಲಿಯೂ ಅಷ್ಟೇ ಉಪ-ಯುಕ್ತವೆಂಬುದನ್ನು ಮರೆಯಲಾಗದು.

## ೧೪೪. ಕಾರ್ಯಂ ಪುರುಷಕಾರ್ಯೇಣ ಲಕ್ಷ್ಯಂ ಸಂಪದ್ಯತೇ

ಸೃಷ್ಟಿಯ ಆದಿಯಿಂದಲೂ ದೈವ ಹಾಗು ಪುರುಷ ಪ್ರಯತ್ನ ಇವು-ಗಳಲ್ಲಿ ಯಾವುದು ಬಲಿಷ್ಠವಾದದ್ದು ಎಂಬ ವಾದವು ನಡೆದೇ ಇದೆ. ಎರಡೂ ಬದಿಯಿಂದಲೂ ಯುಕ್ತಿ, ಪ್ರಯುಕ್ತಿಗಳ ಮುಖಾಂತರವಾಗಿ ತಮ್ಮ ತಮ್ಮ ಶ್ರೇಷ್ಠತೆಯನ್ನು ಪ್ರಸ್ಥಾಪಿಸಲು ಪ್ರಯತ್ನಗಳು ನಡೆಯುತ್ತವೆ. ಆದರೆ ಕೇವಲ ದೈವವೆಂದು ಕುಳಿತು ಪ್ರಯತ್ನ ಬಿಟ್ಟರೂ ನಡೆಯುವುದಿಲ್ಲ. ಹಾಗೆಯೇ ಎಷ್ಟೇ ಪ್ರಯತ್ನ ಮಾಡಿದರೂ ದೈವದ ಬಲವಿಲ್ಲದಿದ್ದರೆ ಯಶವು ದೊರೆಯ-ಲಾರದು ಎಂಬ ಅಭಿಪ್ರಾಯವನ್ನು ಬಹುಜನರು ಎತ್ತಿಹಿಡಿಯುತ್ತಾರೆ. ಪ್ರಕೃತ ಸೂತ್ರವು ಪುರುಷ ಪ್ರಯತ್ನದ ಮಹತ್ವವನ್ನು ಎತ್ತಿಹಿಡಿಯುತ್ತದೆ. ಇಲ್ಲಿ ಪುರುಷ ಶಬ್ದಕ್ಕೆ ಮನುಷ್ಯರೆಂದು ಅರ್ಥಮಾಡಬೇಕೇ ಹೊರತು ಕೇವಲ 'ಗಂಡಸರು' ಎಂದು ಮಾತ್ರ ತಿಳಿಯಬಾರದು. ಮನುಷ್ಯ ಪ್ರಯತ್ನ-ದಿಂದ ಮಾತ್ರ ಕೈಕೊಂಡ ಕಾರ್ಯದಲ್ಲಿ, ಗುರಿಯನ್ನು ಮುಟ್ಟುವುದು ಸಾಧ್ಯ ಎಂಬ ಅಭಿಪ್ರಾಯವನ್ನು ಪ್ರಕೃತ ಸೂತ್ರವು ತಿಳಿಯಪಡಿಸುತ್ತದೆ. ಮುಂದಿನ ಸೂತ್ರದಲ್ಲಿ—

## ೧೪೫. ಪುರುಷಕಾರ್ಯಮನುವರ್ತತೇ ದೈವಮ್

ಮನುಷ್ಯ ಪ್ರಯತ್ನಗಳು ಯೋಗ್ಯ ಮಾರ್ಗದಲ್ಲಿ ನಡೆದದ್ದಾದರ

ದೈವವು ಅವುಗಳನ್ನು ಅನುಸರಿಸುತ್ತದೆ–ಎಂದರೆ ಅಂಥ ಪ್ರಯತ್ನಗಳಿಗೆ ಯಶವು ಕಟ್ಟಿಟ್ಟದ್ದೇ ಎಂದು ಪ್ರತಿಪಾದಿಸಲ್ಪಟ್ಟಿದೆ. ಇದು ದೈವಕ್ಕಿಂತ ಪುರುಷ ಪ್ರಯತ್ನದ ಮೇಲ್ಮೆಯನ್ನು ಎತ್ತಿಹಿಡಿಯುತ್ತದೆ. 'ಬಲವಾನ್ ಪುರುಷಕಾರೋಹಿ ದೈವಮಪ್ಯತಿವರ್ತತೇ' ಎಂಬ ಉಕ್ತಿಯು ಇದೇ ಸಿದ್ಧಾಂತ-ವನ್ನು ಅನುಮೋದಿಸುತ್ತದೆ. ಸ್ವಾಮಿ ವಿವೇಕಾನಂದರು ಸಾರಿರುವ 'Man can be the master of his own destiny' ಎಂಬ ಉಕ್ತಿಯು ಇದೇ ತರಗತಿಗೆ ಸೇರಿದ್ದು. ಆದರೆ ಮುಂದಿನ ಸೂತ್ರದಲ್ಲಿ ಚಾಣಕ್ಯನು ದೈವದ ಶ್ರೇಷ್ಠತೆಯನ್ನು—

## ೧೪೬. ದೈವಂ ವಿನಾ ಅತಿಪ್ರಯತ್ನಂ ಕರೋತಿ ಯತ್ತದ್ವಿಫಲಮ್

ಮನುಷ್ಯನು ಎಷ್ಟೇ ಪ್ರಯತ್ನಪಟ್ಟರೂ ದೈವದ ಅನುಕೂಲತೆ ಇಲ್ಲದಿದ್ದರೆ ಆ ಪ್ರಯತ್ನಗಳೆಲ್ಲವೂ ನಿಷ್ಫಲವಾಗುತ್ತವೆ ಎಂದು ಇಲ್ಲಿ ಪ್ರತಿ-ಪಾದಿಸಲಾಗಿದೆ. ಹೀಗೆ ಪರಸ್ಪರ ವಿರುದ್ಧವೆಂದನಿಸಬಹುದಾದ ನಿರ್ಣಯ-ಗಳನ್ನು ಕೊಟ್ಟರೂ ಕೂಡ ಈ ಸೂತ್ರಗಳಲ್ಲಿ ಸಮನ್ವಯವಿರುವುದನ್ನು ಕಂಡುಹಿಡಿಯುವುದು ದುಸ್ಸಾಧ್ಯವೇನಲ್ಲ. ನಿಜವಾಗಿ ವಿಚಾರಮಾಡಿದರೆ ದೈವ ವೆನ್ನುವುದೂ ಕೂಡ ಹಿಂದಿನ ಜನ್ಮಗಳಲ್ಲಿ ಮಾಡಿದ ಕಾರ್ಯ ಅಥವಾ ಪುರುಷ ಪ್ರಯತ್ನಗಳ ಫಲವೇ ಎಂದು ಶಾಸ್ತ್ರವು ಹೇಳುತ್ತದೆ. (ಪೂರ್ವ-ಜನ್ಮಕೃತಂ ಕರ್ಮ ದೈವಮಿತ್ಯಭಿಧೀಯತೆ) ಆದ್ದರಿಂದ ಈ ಜನ್ಮದಲ್ಲಿ ಮಾಡಿದ ಪ್ರಯತ್ನಕ್ಕಿಂತ ಹಿಂದಿನ ಜನ್ಮದ ಕರ್ಮದ ಫಲವು ಹೆಚ್ಚು ಪ್ರಬಲ-ವಾದರೆ ಅದನ್ನು ದೈವದ ಪ್ರಾಧಾನ್ಯವೆಂದು ನಾವು ಬಗೆಯುತ್ತೇವೆ. ಆದರೆ ಕಾರಣವಿಲ್ಲದೆ ಹೇಗ ಕಾರ್ಯವಿಲ್ಲವೋ ಹಾಗೆಯೇ ಪ್ರಯತ್ನವಿಲ್ಲದೆ ಫಲವಿಲ್ಲ. ಅದು ಹಿಂದಿನ ಜನ್ಮಕ್ಕೆ ಸಂಬಂಧಪಟ್ಟದ್ದಿರಬಹುದು, ಇಲ್ಲವೆ ಇದೇ ಜನ್ಮ-ದ್ದಿರಬಹುದು. ಇಷ್ಟೇ ಅಂತರ. ಆದರೆ ವ್ಯವಹಾರದಲ್ಲಿ ಸರಕಾರೀ ಮುನ್ಸೆ.

ಯಿದ್ದ ದಸ್ತಾವೇಜವು ಹೇಗೆ ಅಧಿಕೃತವಾದದ್ದೆಂದು ತಿಳಿಯಲ್ಪಡುತ್ತದೆಯೋ ಹಾಗೆಯೇ ಹಿಂದಿನ ಜನ್ಮದ ಕರ್ಮಫಲವು ಪ್ರಬಲವಾಗಿದ್ದಾಗ ಅದನ್ನು ದೈವದ ಪ್ರಾಧಾನ್ಯವೆಂದು ತಿಳಿಯುವ ವಾಡಿಕೆಯಿದೆ. ಶ್ರೀಮದ್ಭಗವದ್ಗೀತೆಯಲ್ಲಿಯೂ ಕೂಡ ದೈವದ ಪ್ರಾಧಾನ್ಯವು—

> ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।
> ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥

ಎಂಬ ಶ್ಲೋಕದಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಅಧಿಷ್ಠಾನವೆಂದರೆ ಒಂದು ಪ್ರಸಂಗ. ಅದನ್ನು ನಾವು ಒಂದು ಪರೀಕ್ಷೆಗೆ ಕಟ್ಟುವುದು ಎಂದು ತಿಳಿಯೋಣ. ಅದಕ್ಕೆ ಒಬ್ಬ ಕರ್ತೃವು ಬೇಕು. ಸಾಧನಗಳಾದ ಶಾಲೆ, ಕಾಲೇಜು, ಗ್ರಂಥಾಲಯ ಇತ್ಯಾದಿಗಳು ಬೇಕು. ವಿವಿಧ ಚೇಷ್ಟೆಗಳೆಂದರೆ ತಿಳಿಯದ್ದನ್ನು ಎಲ್ಲರಿಂದ ತಿಳಿದುಕೊಳ್ಳಲು ಯತ್ನಿಸುವುದು. ಹಾಗು ಸರಿಯಾದ ವೇಳೆಗೆ ಪರೀಕ್ಷೆಯ ಕೋಣೆಗೆ ಹೋಗಿ ಪೇಪರ್ ಬರೆಯುವುದು. ನಂತರ ದೈವವೆಂದರೆ ಇಷ್ಟೆಲ್ಲ ಸಿದ್ಧತೆಗಳಿದ್ದಾಗ ಕರ್ತೃವಿಗೆ ವಿಸ್ಮೃತಿ, ಮೂರ್ಛೆ, ಆಕಸ್ಮಿಕ ಗಂಡಾಂತರಗಳು ಪರೀಕ್ಷೆಯ ಕಾಲದಲ್ಲಿ ಬಾರದಿರುವುದೇ ದೈವ. ಇದಕ್ಕೆ ಎರಡು ಮುಖಗಳು. ಒಂದು ಪೂರ್ವಜನ್ಮದ ಸುಕೃತ, ಇನ್ನೊಂದು ಭಗವದನುಗ್ರಹ. ಪಾಸಾಗಲಿಕ್ಕೆ ಗ್ರೇಸ್‌ಮಾರ್ಕ್ಸ್ (ಕೃಪಾಂಕ) ಹಾಕುವಂತೆ ಸನ್ಮಾರ್ಗದಲ್ಲಿರುವವನಿಗೆ ಹಿಂದಿನ ಜನ್ಮದ ಕರ್ಮಗಳಿಂದ ತೊಂದರೆಗಳು ಉದ್ಭವಿಸಿದರೂ ಭಗವದನುಗ್ರಹದಿಂದ ಗಂಡಾಂತರಗಳಿಂದ ಪಾರಾಗುತ್ತಾನೆ. ಈ ದೈವವು ದೃಷ್ಟವಲ್ಲ, ಅದೃಷ್ಟ. ಅದಕ್ಕೆಂದೇ ಅದು ದಸ್ತಾವೇಜುವಿನ ಮೇಲಿನ ಮುದ್ರೆಯಿದ್ದಂತೆ ಲೋಕದಲ್ಲಿ ಹೆಚ್ಚು ಮಹತ್ವವನ್ನು ಗಳಿಸಿದೆ.

## ೧೪೭. ದೈವಹೀನಂ ಕಾರ್ಯಂ ಸುಸಾಧ್ಯಮಪಿ ದುಸ್ಸಾಧ್ಯಂ ಭವತಿ

ದೈವದ ಬಲವಿಲ್ಲದಾಗ ಸುಸಾಧ್ಯವೆಂದೆನಿಸಬಹುದಾದ ಕಾರ್ಯಗಳು

ಕೂಡ, ಕಠಿಣವಾಗುವವೆಂದು ಹೇಳುವ ಈ ಸೂತ್ರವು ಹಿಂದಿನ ಸೂತ್ರ-ದಲ್ಲಿಯ ಸಿದ್ಧಾಂತವನ್ನೇ ಬೇರೆ ಶಬ್ದದಲ್ಲಿ ಹೇಳುತ್ತದೆ. ಈ ವಿಷಯದಲ್ಲಿ ಒಂದು ಭೋಜನ ಶ್ಲೋಕವನ್ನು ಸ್ಮರಿಸಬಹುದು :

> ದೈವಂ ಫಲತಿ ಸರ್ವತ್ರ ನ ವಿದ್ಯಾ ನ ಚ ಪೌರುಷಮ್ ।
> ಸಮುದ್ರಮಥನಾತ್ ಲೇಭೇ ಹರಿರ್ಲಕ್ಷ್ಮೀಂ ಹರೋ ವಿಷಮ್ ॥

ವಿದ್ಯೆ ಅಥವಾ ಪೌರುಷಗಳು ದೈವದ ಮುಂದೆ ಬಲಹೀನವಾಗುವವು ಎಂದು ಹೇಳಿ, ಸಮುದ್ರಮಥನದಂತಹ ಅತಿ ಅಸಾಧ್ಯವೆನಿಸಬಹುದಾದ ಕಾರ್ಯವನ್ನು ನೆರವೇರಿಸಿದರೂ ಕೂಡ ವಿಷ್ಣುವಿಗೆ ಲಕ್ಷ್ಮಿಯು ದೊರೆತರೆ ಶಿವನ ಪಾಲಿಗೆ ವಿಷವು ಬಂದಿತು. ಇದನ್ನು ಅಲಂಕಾರಿಕವಾಗಿಯೇ ತೆಗೆದು-ಕೊಳ್ಳಬೇಕೇ ಹೊರತು ಗಂಭೀರವಾಗಿ ಪರಿಗಣಿಸುವ ಅವಶ್ಯಕತೆಯಿಲ್ಲ.

## ೧೪೮. ಅಸಮಾಹಿತಸ್ಯ ವೃತ್ತಿರ್ನವಿದ್ಯತೇ

ಪುರುಷಕರ್ತವ್ಯದ ಮಹತ್ವವನ್ನು ತಿಳಿಹೇಳಿದ ಚಾಣಕ್ಯನು ಕಾರ್ಯ-ಪ್ರವೃತ್ತನಾಗುವ ಮನುಷ್ಯನು ಅಶಾಂತಚಿತ್ತನಾಗಿರಬಾರದು ಎಂದು ಈ ಸೂತ್ರದಲ್ಲಿ ತಿಳಿಯಪಡಿಸುತ್ತಾನೆ. ಕಾರ್ಯದ ಯುಕ್ತಾಯುಕ್ತತೆಗಳನ್ನು ಸದಸದ್ವಿವೇಕಬುದ್ಧಿಯಿಂದ ವಿಚಾರಮಾಡಿ ಕಾರ್ಯಪ್ರವೃತ್ತರಾಗುವುದು ಧರ್ಮ. ಹಾಗೆ ಮಾಡದೆ ಮನಸ್ಸಿನ ಉದ್ವೇಗದಲ್ಲಿ ಯಾವುದೇ ಕಾರ್ಯ-ದಲ್ಲಿ ದುಡುಕಿದರೆ ಮುಂದೆ ಪಶ್ಚಾತ್ತಾಪಪಡಬೇಕಾಗುತ್ತದೆ. ಇದನ್ನೇ 'ಸಹಸಾ ವಿದಧೀತ ನ ಕ್ರಿಯಾಂ' ಎಂಬ ಶ್ಲೋಕದ ಮುಖಾಂತರವಾಗಿ ಮಹಾಕವಿ ಭಾರವಿಯು ಹೇಳಿದ್ದನ್ನು ಈ ಹಿಂದೆ ಚರ್ಚಿಸಲಾಗಿದೆ.

## ೧೪೯. ಪೂರ್ವಂ ನಿಶ್ಚಿತ್ಯ ಪಶ್ಚಾತ್ ಕಾರ್ಯಂ ಆರಭೇತ್

ಯಾವುದೇ ಕಾರ್ಯವನ್ನು ಯೋಜನಾಬದ್ಧವಾಗಿ ಆರಂಭಿಸಿದರೆ

ನಿರ್ವಿಘ್ನವಾಗಿ ಅದನ್ನು ಕೊನೆಗಾಣಿಸಬಹುದೆಂಬುದೇ ಈ ಸೂತ್ರದ ಆಶಯ. ಈ ವಿಷಯವು ಮಂತ್ರವು ಪಂಚಾಂಗವಾಗಿರಬೇಕು ಎಂಬುದನ್ನು ವಿವರಿಸು-ವಾಗ ಚರ್ಚಿಸಲ್ಪಟ್ಟಿದ್ದರಿಂದ ಪುನಃ ಅದರ ವಿವರಣೆಯ ಆವಶ್ಯಕತೆ-ಯಿಲ್ಲ.

## ೧೫೦. ಕಾರ್ಯಾಂತರೇ ದೀರ್ಘಸೂತ್ರತಾ ನ ಕರ್ತವ್ಯಾ

ಕಾರ್ಯವನ್ನು ಆರಂಭಿಸಿದ ಮೇಲೆ ಹೆಜ್ಜೆ-ಹೆಜ್ಜೆಗೆ ಮೀನ-ಮೇಷ ಮಾಡುತ್ತ ತರ್ಕವಿತರ್ಕಗಳಲ್ಲಿಯೇ ಕಾಲ ಕಳೆದು ಪ್ರತ್ಯಕ್ಷ ಕೃತಿಗೆ ಇಳಿಯ-ದಿದ್ದರೆ ಅದಕ್ಕೆ ದೀರ್ಘಸೂತ್ರತೆ ಎನ್ನುತ್ತಾರೆ. ಇದು ಕೈಕೊಂಡ ಕಾರ್ಯ-ಗಳನ್ನು ನೆರವೇರಿಸುವಲ್ಲಿ ಪ್ರತಿಬಂಧವನ್ನುಂಟುಮಾಡುವ ಅತ್ಯಂತ ಗಂಡಾಂತರಕಾರಿಯಾದ ವಿಘ್ನ. ಷೇಕ್ಸ್‌ಪಿಯರ್ ಕವಿಯ ಹ್ಯಾಮ್ಲೆಟ್-ನಂತೆ ಕೈಗೆ ಬಂದ ತುತ್ತನ್ನು ಬಾಯಿಗೆ ಹಾಕುವುದರ ಬದಲು ವಿಚಾರಗಳ ತೊಡಕಿನಲ್ಲಿ ಸಿಕ್ಕು ಇಂಥ ಜನರು ಜೀವನವನ್ನು ಅಸಾರ್ಥಕ ಮಾಡಿ-ಕೊಳ್ಳುತ್ತಾರೆ. ಆದ್ದರಿಂದ ದೃಢನಿಶ್ಚಯ ಹಾಗು ಅವಿಚ್ಛಿನ್ನವಾದ ಶೀಘ್ರ ಕಾರ್ಯಗತತ್ವ ಇವು ಯಶಸ್ಸನ್ನು ತಂದುಕೊಡುತ್ತವೆ.

## ೧೫೧. ನ ಚಲಚಿತ್ತಸ್ಯ ಕಾರ್ಯಾವಾಪ್ತಿಃ

ಚಂಚಲ ಮನಸ್ಸಿನವನಿಂದ ಏನೂ ಸಾಧಿಸಲು ಸಾಧ್ಯವಿಲ್ಲ ಎಂದು ಹೇಳುವ ಈ ಸೂತ್ರವು ಆಂಗ್ಲ ಭಾಷೆಯಲ್ಲಿಯ 'Rolling stone gathers no mass' ಎನ್ನುವ ನಾಣ್ಣುಡಿಯನ್ನು ಹೋಲುತ್ತವೆ. ಆದ್ದ-ರಿಂದ ಪೂರ್ವಯೋಜಿತ ವಿಚಾರದಿಂದ ಪ್ರೇರಿತವಾದ ದೃಢನಿಶ್ಚಯವೇ ಯಶಸ್ಸಿನ ತಳಹದಿ.

## ೧೫೨. ಹಸ್ತಗತಾವಮಾನನಾತ್ ಕಾರ್ಯವ್ಯತಿಕ್ರಮೋ ಭವತಿ

ಕೈಗೆ ಬಂದದ್ದನ್ನು ತಿರಸ್ಕರಿಸುವುದರಿಂದಾಗಿ. ಆರಂಭಿಸಿದ ಕಾರ್ಯವು ಅಪೇಕ್ಷಿಸಿದಂತೆ ಕೊನೆಗೊಳ್ಳುವುದರಲ್ಲಿ ತೊಂದರೆಯುಂಟಾಗುತ್ತದೆ ಎಂದು ಪ್ರಸ್ತುತ ಸೂತ್ರವು ಹೇಳುತ್ತದೆ. ಇದಕ್ಕೆ ಸ್ವಲ್ಪ ವಿವರಣೆ ಅವಶ್ಯ. ಕಾರ್ಯಾರಂಭದ ನಂತರ ತಮ್ಮ ಸಹಾಯಕ್ಕೆಂದು ಇರುವವರಲ್ಲಿ ಯಾರನ್ನಾದರೂ ಅಪಮಾನಿಸಿದರೆ ಅವರ ವಿರೋಧವುಂಟಾಗುವುದು ಸಹಜ ಹೀಗಾಗಿ ಕಾರ್ಯ ಕೊನೆಗೊಳ್ಳುವುದು ಕಠಿಣವಾಗುತ್ತದೆ. ಅಥವಾ ಕಾರ್ಯವನ್ನು ಆರಂಭಿಸಿದ ನಂತರ ತಾನಾಗಿಯೇ ಯಾವುದಾದರೂ ಸಹಾಯ ಅಥವಾ ಅನುಕೂಲತೆಗಳು ಒದಗಿಬಂದಾಗ ಅವನ್ನು ತಿರಸ್ಕರಿಸಿ ಅನ್ಯಮಾರ್ಗಗಳಿಂದ ಸಿದ್ಧಿಯನ್ನು ಪಡೆಯಬೇಕೆಂದರೆ ಅಂಥ ತಿರಸ್ಕರಿಸಲ್ಪಟ್ಟವರಿಂದ ವಿಘ್ನಗಳು ಉಂಟಾಗುತ್ತವೆ. ಒಟ್ಟಿನ ಮೇಲೆ ಕೈಕೊಂಡ ಕಾರ್ಯವು ನಿರ್ವಿಘ್ನವಾಗಿ ನೆರವೇರಬೇಕಾದಲ್ಲಿ ಪ್ರತ್ಯಕ್ಷ ಹಾಗು ಪರೋಕ್ಷವಾಗಿ ಯಾರ ದ್ವೇಷವನ್ನೂ ಕಟ್ಟಿಕೊಳ್ಳಬಾರದೆನ್ನುವುದೇ ತಾತ್ಪರ್ಯ.

## ೧೫೩. ದೋಷವರ್ಜಿತಾನಿ ಕಾರ್ಯಾಣಿ ದುರ್ಲಭಾನಿ

ಸಂಪೂರ್ಣವಾಗಿ ನಿರ್ದೋಷವೆನ್ನಬಹುದಾದ ಕಾರ್ಯಗಳು ಇರುವುದೇ ಕಠಿಣ. ಎಲ್ಲದರಲ್ಲಿಯೂ ಒಂದಿಲ್ಲೊಂದು ರೀತಿಯ ದೋಷಗಳು ಇರತಕ್ಕವೇ. ಉಪಾಯದಿಂದ ಅವನ್ನು ದೂರಮಾಡಿ ಕಾರ್ಯಸಿದ್ಧಿಯನ್ನು ಹೊಂದಬೇಕು. ಪೇಟೆಯಿಂದ ತಂದ ಕಾಳು–ಕಡಿಗಳಲ್ಲಿ ಹೇಗೆ ಹರಳು ಹಾಗು ಕಸ ಎಷ್ಟೂ ಇಲ್ಲದಿರುವುದು ಹೇಗೆ ದುರ್ಲಭವೋ ಹಾಗೆಯೇ ಯಾವುದೇ ಕಾರ್ಯದ ಲಕ್ಷಣ. ಮನುಷ್ಯನ ಬುದ್ಧಿಶಕ್ತಿಯ ಉಪಯೋಗವಾಗುವುದು ಇಂಥ ದೋಷಗಳನ್ನು ನಿವಾರಿಸುವುದರಲ್ಲಿಯೇ. ಅದಕ್ಕೆಂದೇ

ಯಾವುದೇ ಕಾರ್ಯವನ್ನು ಕೈಕೊಂಡು ಎಂತಹ ಎಡರು–ತೊಡರುಗಳು ಬಂದರೂ ಅವುಗಳನ್ನು ದೂರಮಾಡಿ ಸಿದ್ಧಿಯನ್ನು ಪಡೆಯುವವನು ಸಮಾಜದಲ್ಲಿ ಸಮರ್ಥನೆನಿಸಿಕೊಳ್ಳುತ್ತಾನೆ.

## ೧೫೪. ದುರಾನುಬಂಧಂ ಕಾರ್ಯಂ ನಾರಭೇತ್

ಯಾವ ಕಾರ್ಯವಲ್ಲಿ ಲಾಭಕ್ಕಿಂತ ಹಾನಿಯೇ ಹೆಚ್ಚೋ, ಪ್ರಯತ್ನಕ್ಕೆ ತಕ್ಕಂತೆ ಫಲವು ಕಂಡುಬರುವುದಿಲ್ಲವೋ ಅಂಥವುಗಳನ್ನು ಕೈಕೊಳ್ಳುವುದೇ ಮೂರ್ಖತನ. ಆದ್ದರಿಂದ ಜಾಣನು ಆ ಗೋಜಿಗೆ ಹೋಗಬಾರದು. ಈರ್ಷೆಯಿಂದ ಕ್ಷುಲ್ಲಕ ಕಾರಣಗಳಿಂದಾಗಿ ಕೋರ್ಟಿನಲ್ಲಿ ವ್ಯಾಜ್ಯಗಳನ್ನು ಹೂಡಿ ಅದೆಷ್ಟೋ ಹಣವನ್ನು ವೆಚ್ಚಮಾಡುವ ಜನರನ್ನು ಸಮಾಜದಲ್ಲಿ ನಾವು ನೋಡುತ್ತೇವೆ. ಅವಕ್ಕೆಲ್ಲ ವೃಥಾಭಿಮಾನವೋ ಅಥವಾ ಅಸಮಂಜಸವಾದ ಮತ್ಸರವೋ ಕಾರಣವಾಗಿರುತ್ತದೆ. ತಾಳ್ಮೆ, ಕ್ಷಮಾಗುಣ, ಸದಸದ್ವಿವೇಕ ಇತ್ಯಾದಿಗಳ ಅಭಾವದಿಂದಾಗಿ ಇಂಥ ಅಕಾರ್ಯಗಳು ಘಟಿಸುತ್ತವೆ. ಸೂತ್ರಕಾರನು ಇಂಥವುಗಳಿಂದ ದೂರವಿರಬೇಕೆಂದು ಎಚ್ಚರಿಸುತ್ತಾನೆ.

## ೧೫೫. ಕಾಲವಿತ್ ಕಾರ್ಯಂ ಸಾಧಯೇತ್

ಸಮಯವನ್ನರಿತು ಕಾರ್ಯವನ್ನು ಮಾಡಬೇಕು. ಕಾಲ ಮಿಂಚಿಹೋದರೆ ಪುನಃ ಅಂತಹ ಕಾಲ ಬರುವ ವರೆಗೆ ಕಾಯಬೇಕಾಗುತ್ತದೆ. ' ಘಡಿ ಚುಕೇ ತೊ ಬಾರಾ ಬರಸ ' ಎಂಬ ಹಿಂದೀ ಭಾಷೆಯಲ್ಲಿಯ ನಾಣ್ಣುಡಿಯು ಮರ್ಮ[illegible] ಇದೆ. ಇಂದಿನ ಕೆಲಸ ನಾಳೆಗೆ ಹಾಕುವವನು ಜಾಣನಲ್ಲ. ಭಾರತೀಯರು ವೇಳೆಗೆ ಮಹತ್ವ ಕೊಡುವುದಿಲ್ಲವೆಂದೇ ಯಾವುದೇ ಕಾರ್ಯವು ತಡವಾಗಿ ಆರಂಭವಾದಾಗ ' ಇಂಡಿಯನ್ ಟಾಯಿಮ್ ' ಎಂದು

ಅಣಕಿಸುವುದು ರೂಢಿಯಾಗಿದೆ. ಬ್ರಿಟಿಶರು 'Time. time, time is money' ಎಂದು ವೇಳೆಯ ಮಹತ್ವದ ವಿಷಯದಲ್ಲಿ ಹೇಳುತ್ತಾರೆ. ಇದನ್ನರಿತು ಅರ್ಥಾತ್ ಕಾಲದ ಮಹತ್ವವನ್ನು ತಿಳಿದು ಯಾವುದೇ ಕಾರ್ಯವನ್ನು ಮಾಡಬೇಕು.

ನಾವು ಯಾವುದೇ ಕಾರ್ಯವನ್ನು ನೆರವೇರಿಸುವಾಗ ಕಾಲವು ನಮಗೆ ಅನುಕೂಲ ಇಥವಾ ಪ್ರತಿಕೂಲವಿದ್ದದ್ದು ಅನುಭವಕ್ಕೆ ಬರುತ್ತದೆ. ಅದನ್ನು ನೋಡಿಕೊಂಡು ಒದಗಿಬಂದ ಅವಕಾಶವನ್ನು ಕಳೆದುಕೊಳ್ಳಬಾರದು.

## ೧೫೬. ಕಾಲಾತಿಕ್ರಮಾತ್ ಕಾಲ ಏವ ಫಲಂ ಪಿಬತಿ

ಒದಗಿಬಂದ ಅವಕಾಶವನ್ನು ಕಳೆದುಕೊಂಡರೆ ಅಥವಾ ಸುಮ್ಮನೆ ವಿಳಂಬಮಾಡುತ್ತ ಹೋದರೆ ಆ ವಿಳಂಬವೇ ನಮಗೆ ದೊರೆಯಬೇಕಾದ ಫಲವು ಕೈಗೆ ನಿಲುಕದಂತೆ ಮಾಡುತ್ತದೆ. ಈಗ ಸರಕಾರದ ಲೋಕೋಪಯೋಗಿ ಖಾತೆಯಲ್ಲಿ ಎಷ್ಟೋ ಕೆಲಸಗಳನ್ನು ಆರಂಭಿಸಿ ನಿರ್ದಿಷ್ಟಪಡಿಸಿದ ಅವಧಿಯಲ್ಲಿ ಮುಗಿಸದೆ ಕಾರಣಾಂತರದಿಂದ ತಡಮಾಡುತ್ತ ಹೋದಾಗ, ಅಂದಾಜಿಗಿಂತ ವೆಚ್ಚವು ಬೆಳೆಯುತ್ತ ಹೋದ ಉದಾಹರಣೆಗಳೇ ಇದಕ್ಕೆ ಸಾಕ್ಷಿ. ಇತರ ವಿಷಯಗಳಲ್ಲಿಯೂ ಆಡಳಿತದ ವಿಲಂಬನೀತಿಯಿಂದಾಗಿ ನಷ್ಟವನ್ನು ಅನುಭವಿಸಿದ ಅದೆಷ್ಟೋ ಉದಾಹರಣೆಗಳನ್ನು ನಾವು ದಿನಾಲೂ ನೋಡುತ್ತೇವೆ. ಇದಕ್ಕೆಲ್ಲ ಅಯೋಗ್ಯರ ಕೈಯಲ್ಲಿ ಅಧಿಕಾರವಿರುವುದೇ ಮುಖ್ಯ ಕಾರಣ.

## ೧೫೭. ಕ್ಷಣಂ ಪ್ರತಿಕಾಲ ವಿಕ್ಷೇಪಂ ನ ಕುರ್ಯಾತ್ ಸರ್ವ ಕೃತ್ಯೇಷು

ಮೇಲಿನ ಸೂತ್ರದಲ್ಲಿಯ ವಿಚಾರಗಳಿಗೆ ನಿರ್ಣಯಾತ್ಮಕವಾಗಿ ಪ್ರಸ್ತುತ ಸೂತ್ರದಲ್ಲಿ, ಯಾವುದೇ ಕಾರ್ಯದಲ್ಲಿ ಒಂದು ಕ್ಷಣದ ವಿಲಂಬ ಕೂಡ ಆಗ-ಬಾರದು ಎಂದು ಸೂತ್ರಕಾರನು ಬೋಧಿಸುತ್ತಾನೆ.

## ೧೫೮. ದೇಶ ಕಾಲ ವಿಭಾಗೌ ಜ್ಞಾತ್ವಾ ಕಾರ್ಯಮಾರಭೇತ

ರಾಜಕೀಯ ವಿಷಯದ ಗುಪ್ತಸಮಾಲೋಚನೆ ಅಥವಾ ಮಂತ್ರ ಎಂಬ ವಿಷಯವನ್ನು ಚರ್ಚಿಸುವಾಗ ದೇಶ, ಕಾಲ ವಿಭಾಗದ ವಿಷಯ ಬಂದಿದ್ದು ಅದನ್ನು ನೋಡಬೇಕು. ತಾತ್ಪರ್ಯವೆಂದರೆ, ದೇಶ ಹಾಗು ಕಾಲ ಇವೆ-ರಡೂ ಯಾವುದೇ ಕಾರ್ಯನಿರ್ವಹಣೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಲೌಕಿಕ ವ್ಯವಹಾರದಲ್ಲಿಯೂ ಕೂಡ ಇವುಗಳಿಗೆ ತುಂಬಾ ಮಹತ್ವವಿದೆ. ಬಿಸಿಲು ಹೆಚ್ಚಾಗಿರುವ ಬೆಳವಲ ಪ್ರದೇಶದಲ್ಲಿ ಮಳೆಗಾಲದಲ್ಲಿ ಕೂಡ ವ್ಯಾಪಾರಸ್ಥರು ಬೆಲ್ಲದಂಥ ರಸಪದಾರ್ಥವನ್ನು ಸಂಗ್ರಹಿಸಿ ಇಟ್ಟರೆ ಅದು ಕೆಡುವುದಿಲ್ಲ. ಮುಂದೆ ಹೆಚ್ಚು ದರ ಸಿಗುವಾಗ ಮಾರಿದರೆ ಲಾಭ-ವಾಗುತ್ತದೆ. ಆದರೆ ಮಲೆನಾಡಿನಲ್ಲಿ ಹೀಗೆ ಮಾಡಲು ಸಾಧ್ಯವಿಲ್ಲ. ಹಾಗೆಯೇ ಮಳೆ ಹೆಚ್ಚಾಗುವ ಪ್ರದೇಶದಲ್ಲಿ ಜೋಳವನ್ನು ಬೆಳೆಯಬೇಕೆಂದರೆ ಆ ಬೆಳೆಗೆ ನೀರು ಹೆಚ್ಚಾಗಿ ಕೊಳೆತುಹೋಗುತ್ತದೆ. ಆದ್ದರಿಂದ ಪ್ರತಿಯೊಂದು ವಿಷಯ-ದಲ್ಲಿ ದೇಶ ಹಾಗು ಕಾಲವನ್ನರಿತು ಕಾರ್ಯ ಮಾಡಬೇಕೆಂದು ಉಪದೇಶಿ-ಸಿದ್ದು ಅತ್ಯಂತ ಸಮರ್ಪಕವಾಗಿದೆ. ಇದನ್ನೇ ಸಿದ್ಧಾಂತರೂಪವಾಗಿ—

## ೧೫೯. ನೀತಿಜ್ಞೋ ದೇಶಕಾಲೌ ಪರೀಕ್ಷೇತ್

ರಾಜನೀತಿಯನ್ನು ತಿಳಿದವನು ದೇಶ,ಕಾಲಗಳ ಪರೀಕ್ಷೆಯನ್ನು ಯಾವಾಗಲೂ ಮಾಡಬೇಕು ಎಂಬುವನ್ನು ಈ ಸೂತ್ರದಲ್ಲಿ ಹೇಳಲಾಗಿದೆ.

## ೧೬೦. ಪರೀಕ್ಷ್ಯಕಾರಿಣಿ ಶ್ರೀಃ ಚಿರಂ ತಿಷ್ಠತಿ

ದೇಶ, ಕಾಲಗಳ ಪರೀಕ್ಷೆ ಮಾಡಿ ಕಾರ್ಯಾರಂಭ ಮಾಡಿದವನಿಗೆ ಯಶ ದೊರೆಯುವುದಷ್ಟೇ ಅಲ್ಲ. ದೊರಕಿದ ಸಂಪತ್ತು ಚಿರವಾಗಿ ಅವನಲ್ಲಿ ಉಳಿಯುತ್ತದೆ. ಅರ್ಥಾತ್ ನೀತಿಜ್ಞನಾದುದರಿಂದ ಅವನು ಯಾವಾಗಲೂ ಎಚ್ಚರದಿಂದಿದ್ದು, ಹಾನಿಯನ್ನುಂಟುಮಾಡುವ ಪ್ರಸಂಗಗಳಲ್ಲಿ ಸಿಕ್ಕುಬೀಳುವುದಿಲ್ಲ. ರಾಜನೀತಿಯಲ್ಲಿ ಐಶ್ವರ್ಯವನ್ನು ಶಾಶ್ವತವಾಗಿ ಉಳಿಸಿಕೊಳ್ಳುವುದೇ ಪ್ರಾಮುಖ್ಯವಾದುದರಿಂದ ಆ ದಿಶೆಯಲ್ಲಿ ಅವ್ಯಾಹತವಾಗಿ ಪ್ರಯತ್ನಗಳು ನಡೆಯಬೇಕೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

## ೧೬೧. ಭಾಗ್ಯವಂತಂ ಅಪರೀಕ್ಷ್ಯ ಕಾರಣಂ ಶ್ರೀಃ ಪರಿತ್ಯಜತಿ

ಎಷ್ಟೇ ಭಾಗ್ಯವಂತನಾಗಿದ್ದರೂ, ವಿಚಾರಮಾಡದೆ, ವಿವೇಕಬುದ್ಧಿಯನ್ನು ಉಪಯೋಗಿಸದೆ ಕಾರ್ಯಗಳನ್ನು ಕೈಕೊಂಡರೆ ಲಕ್ಷ್ಮಿಯು ಅಂತಹ ರಾಜನನ್ನು ಬಿಟ್ಟುಹೋಗುತ್ತಾಳೆ ಎಂದು ಹೇಳುವ ಈ ಸೂತ್ರವು ಸೂಕ್ಷ್ಮ ವಿಚಾರಕ್ಕಿರುವ ಮಹತ್ತ್ವವನ್ನು ಎತ್ತಿಹೇಳುತ್ತದೆ.

## ೧೬೨. ಜ್ಞಾನಾನುಮಾನೈಶ್ಚ ಪರೀಕ್ಷಾ ಕರ್ತವ್ಯಾ

ಪ್ರತ್ಯಕ್ಷ ಜ್ಞಾನ ಹಾಗು ಅನುಮಾನಗಳ ಸಹಾಯದಿಂದ ಪ್ರತಿಯೊಂದು ವಸ್ತು, ಕಾರ್ಯ ಹಾಗು ಸನ್ನಿವೇಶಗಳ ಪರೀಕ್ಷೆಯನ್ನು ಮಾಡಬೇಕಾದದ್ದು ಅವಶ್ಯ. ರಾಜನಿಗೆ ಗುಪ್ತಚಾರರ ಮುಖಾಂತ ದೊರೆಯುವ ಜ್ಞಾನವು ಒಂದು ರೀತಿಯಿಂದ ಪ್ರತ್ಯಕ್ಷವೆಂದೇ ತಿಳಿಯಲ್ಪಡುತ್ತದೆ. ಆದ್ದರಿಂದ ಆಡಳಿತದ ವಿವಿಧ ಮಾರ್ಗಗಳಿಂದ ದೊರೆತದ್ದು ಪ್ರತ್ಯಕ್ಷಜ್ಞಾನ. ಹಾಗೆಯೇ ಯಾವುದೇ ವಿಷಯದಲ್ಲಿ ಲಕ್ಷಣಗಳ ಆಧಾರದ ಮೇಲಿಂದ ಪರಿಸ್ಥಿತಿಯ ಅಂದಾಜು ಮಾಡುವುದು ಅನುಮಾನಜ್ಞಾನ. ಪಾಕಿಸ್ತಾನವು ಭಾರತವನ್ನು ಅಂತಾರಾಷ್ಟ್ರೀಯ ಕ್ರಿಕೆಟ್ ಅಥವಾ ಹಾಕಿಯಲ್ಲಿ ಸೋಲಿಸಿದಾಗ ಭಾರತ-ದಲ್ಲಿಯ ಮುಸಲ್ಮಾನರು ಪಟಾಕಿ ಹಾರಿಸಿದರೆ ಅವರು ದೇಶದ್ರೋಹಿಗಳೆಂದು ಅನುಮಾನ ಮಾಡುವುದನ್ನು ಇಲ್ಲಿ ಸ್ಮರಿಸಬಹುದು. ಹೀಗೆಯೇ ವಿವಿಧ ವಿಷಯಗಳ ಬಗ್ಗೆ ಅನುಮಾನದ ಮುಖಾಂತರ ರಾಜನ ಶತ್ರು, ಮಿತ್ರ, ಉದಾಸೀನ ಪ್ರಜೆಗಳನ್ನು ಗುರುತಿಸಿ ವ್ಯವಹರಿಸಬೇಕಾದದ್ದು ರಾಜನ ಕರ್ತವ್ಯ ಎಂದು ಈ ಸೂತ್ರವು ತಿಳಿಸುತ್ತದೆ.

## ೧೬೩. ಯೋ ಯಸ್ಮಿನ್ ಕರ್ಮಣಿ ಕುಶಲಃ ತಂ ತಸ್ಮಿನ್ನೇವ ಯೋಜಯೇತ್

ಯಾರು ಯಾವ ಕಾರ್ಯದಲ್ಲಿ ಚತುರರಾಗಿರುತ್ತಾರೋ ಅಂಥವರನ್ನು ಆಯಾ ಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ ನಿಯಮಿಸಬೇಕು. ಇದು ಒಳ್ಳೆಯ ಮಹತ್ವದ ಸೂತ್ರ. ಸಮಾಜದಲ್ಲಿ ಆಯಾ ಕಾರ್ಯಗಳಲ್ಲಿ ಪರಿಣತ-ರಲ್ಲದವರನ್ನು ಅಂಥ ಕೆಲಸಗಳಿಗೆ ನೇಮಿಸಿ, ಕಾರ್ಯಗಳು ವ್ಯರ್ಥವಾಗುವು-ದನ್ನು ನಾವು ಅನೇಕ ಕಡೆಗಳಲ್ಲಿ ನೋಡುತ್ತೇವೆ. ಎಲ್ಲರೂ ಎಲ್ಲ ವಿದ್ಯೆ-ಗಳಲ್ಲಿಯೂ ನಿಪುಣರಾಗಿರಲಾರರು. ದೇವರು ಒಬ್ಬೊಬ್ಬರಿಗೆ ಸಾಮಾನ್ಯ-

ವಾಗಿ ಒಂದೊಂದು ಕಲೆಯನ್ನು ದಯಪಾಲಿಸಿರುತ್ತಾನೆ. ಒಬ್ಬನು ಹುಟ್ಟಿನಿಂದ ಚಿತ್ರಕಲೆಯಲ್ಲಿ ನಿಪುಣನಾಗಿದ್ದರೆ, ಇನ್ನೊಬ್ಬನು ಸಂಗೀತದಲ್ಲಿ ತಜ್ಞನಿರುತ್ತಾನೆ. ಆದ್ದರಿಂದ ರಾಜನು ಆಡಳಿತದಲ್ಲಿ ಆಯಾ ಕಾರ್ಯಗಳಲ್ಲಿ ನಿಪುಣರಾದವರನ್ನೇ ಅಂಥ ಕೆಲಸಗಳಿಗೆ ನೇಮಿಸಿದರೆ ಕಾರ್ಯವ್ಯವಸ್ಥೆಯು ಸುಗಮವಾಗಿ ಎಲ್ಲವೂ ಸಾರ್ಥಕವೆನಿಸುತ್ತದೆ.

ಇತ್ತೀಚೆಗೆ ತಮ್ಮಲ್ಲಿ ಅಂಥ ಯೋಗ್ಯತೆಯಿಲ್ಲದಿದ್ದರೂ ಶೀಘ್ರ ಸಿರಿವಂತಿಕೆಯನ್ನು ದೊರಕಿಸಬೇಕೆಂಬ ಒಂದೇ ಆಸೆಯಿಂದ ಬಹಳಷ್ಟು ಜನರು ವೈದ್ಯಕೀಯ ಹಾಗು ತಾಂತ್ರಿಕ ಶಿಕ್ಷಣ ಪಡೆಯುವುದಕ್ಕಾಗಿ ನೀರಿನಂತೆ ಹಣವನ್ನು ವೆಚ್ಚಮಾಡುವುದನ್ನು ನಾವು ನೋಡುತ್ತೇವೆ. ಇದರ ಪರಿಣಾಮವೇನಾಗುತ್ತದೆಂಬುದನ್ನು ಬೇರೆ ಹೇಳಬೇಕಾಗಿಲ್ಲ ಈ ವಿಷಯದಲ್ಲಿ ಸಂಸ್ಕೃತ ಭಾಷೆಯಲ್ಲಿ ಒಂದು ಸುಂದರವಾದ ಸುಭಾಷಿತವಿದೆ—

ಅಮಂತ್ರಮಕ್ಷರಂ ನಾಸ್ತಿ ನಾಸ್ತಿ ಮೂಲಮನೌಷಧಮ್ ।
ಅಯೋಗ್ಯಃ ಪುರುಷೋ ನಾಸ್ತಿ ಯೋಜಕಃ ತತ್ರ ದುರ್ಲಭಃ ॥

ಎಲ್ಲ ಅಕ್ಷರಗಳೂ ಮಂತ್ರಗಳೆ. ಎಲ್ಲ ಬೇರುಗಳೂ ಔಷಧಗಳೇ, ಎಲ್ಲ ಜನರೂ ಯೋಗ್ಯರೇ, ಆದರೆ ಅವರು ಯಾವ ಕಾರ್ಯಕ್ಕೆ ಯೋಗ್ಯರು ಎಂಬುದು ಗೊತ್ತಾದರೆ ಮಾತ್ರ ಉಪಯೋಗವಾಗುತ್ತದೆ. ಇಲ್ಲವಾದಲ್ಲಿ ಎಲ್ಲವೂ ವ್ಯರ್ಥವಾಗುತ್ತದೆ. ರಾಜನು ಇದನ್ನರಿತು ಯೋಗ್ಯರಾದವರನ್ನು ಆಯಾ ಕಾರ್ಯಕ್ಷೇತ್ರಗಳಲ್ಲಿ ನೇಮಿಸಬೇಕೆಂದು ಈ ಸೂತ್ರವು ಹೇಳತ್ತದೆ.

## ೧೬೪. ದುಸ್ಸಾಧ್ಯಮಪಿ ಸುಸಾಧ್ಯಂ ಕರೋತ್ಯುಪಾಯಜ್ಞಃ

ಉಪಾಯಜ್ಞ ಎಂದರೆ ಈ ಹಿಂದೆ ವಿವರಿಸಿದ ಸಾಮಾದಿ ಉಪಾಯಚತುಷ್ಟಯಗಳನ್ನು ಪರಿಸ್ಥಿತಿಗನುಸಾರವಾಗಿ ಯೋಜಿಸಬಲ್ಲ ನೀತಿಜ್ಞನು

ಎಂತಹ ಅಸಾಧ್ಯವಾದ ಕಾರ್ಯವನ್ನೂ ಇವನು ನೆರವೇರಿಸಬಲ್ಲನೆಂದು ಈ ಸೂತ್ರವು ಹೇಳುತ್ತದೆ. ಉಪಾಯಗಳ ಯೋಜನೆಗೆ ವಿವೇಕಜ್ಞಾನವಿರಬೇಕು. ವಿವೇಕಿಯಾದವನು ಅಕಾರ್ಯ ಮಾಡಲು ಪ್ರವೃತ್ತನಾಗಲಾರನು. ಹೀಗಾಗಿ ಅವನಿಗೆ ಯಾವುದೂ ಕಠಿಣವೆನಿಸಲಾರದು.

## ೧೬೫. ಅಜ್ಞಾನಿನಾ ಕೃತಮಪಿ ನ ಬಹುಮಂತವ್ಯಮ್

ಅಜ್ಞಾನಿಯಾದವನು ಯಾವುದೇ ಕಾರ್ಯವನ್ನು ನೆರವೇರಿಸಿದರೆ ಅದಕ್ಕೆ ಹೆಚ್ಚು ಮಹತ್ವ ಕೊಡುವ ಆವಶ್ಯಕತೆಯಿಲ್ಲವೆಂಬುದು ಚಾಣಕ್ಯನ ಅಭಿಪ್ರಾಯ. ಕಾರ್ಯಸಿದ್ಧಿ ಯಾದರೂ ಕೂಡ ಆಕಸ್ಮಾತ್ತಾಗಿ ದೊರಕಿದ ಸಿದ್ಧಿಗೂ, ಉಪಾಯಗಳನ್ನು ಸರಿಯಾಗಿ ಯೋಜಿಸಿ ಸಂಪಾದಿಸಿದ ಸಿದ್ಧಿಗೂ ಮಹದಂತರವಿರುತ್ತದೆ. ಮೊದಲನೆಯದು ಆಕಸ್ಮಿಕವಾಗಿ ಬಂದದ್ದು, ಮನುಷ್ಯನ ಬುದ್ಧಿಶಕ್ತಿಯ ಸಹಕಾರವು ಅದರಲ್ಲಿಲ್ಲ, ಆದ್ದರಿಂದ ಇನ್ನೊಮ್ಮೆ ಅಂತಹ ಸಿದ್ಧಿ ದೊರಕೀತೆಂಬುದು ನಿಶ್ಚಿತವಲ್ಲ. ಆದರೆ ವಿವೇಕದಿಂದ ಸಾಧಿಸಿದ ಕಾರ್ಯವು ತ್ರಿಕಾಲದಲ್ಲಿಯೂ ತನ್ನ ವಿವೇಕಬಲದಿಂದ ಅಂತಹ ಸಿದ್ಧಿಯನ್ನು ಮನುಷ್ಯನು ಪಡೆಯಬಲ್ಲನೆಂಬ ವಿಶ್ವಾಸವನ್ನು ಹುಟ್ಟಿಸುತ್ತದೆ, ಕ್ರಿಕೆಟ್ ಆಟದಲ್ಲಿ ಆಕಸ್ಮಾತ್ತಾಗಿ ಒಬ್ಬ ಒಳ್ಳೆಯ ಆಟಗಾರನನ್ನು ಔಟ್ ಮಾಡಿದ ಅನನುಭವಿಕ ಬಾಲರ್‌ನು ಯಾವಾಗಲೂ ಹಾಗೆಯೇ ಮಾಡುತ್ತಾನೆಂಬ ಭರವಸೆಯನ್ನು ಇಡಲಾಗದೆಂಬುದೇ ಇದಕ್ಕೆ ದೃಷ್ಟಾಂತ.

## ೧೬೬. ಯಾದೃಚ್ಛಿಕತ್ವಾತ್ ಕ್ರಿಮಿರಪಿ ರೂಪಾಂತರಾಣಿ ಕರೋತಿ

ಒಮ್ಮೊಮ್ಮೆ ಆಕಸ್ಮಾತ್ತಾಗಿ ಒಂದು ಹುಳವು ಕೂಡ ಹೇಗೆ ತನ್ನ

ರೂಪವನ್ನು ಬದಲಿಸಲು ಸಮರ್ಥವಾಗುತ್ತದೆಯೋ ಹಾಗೆಯೇ ಅಜ್ಞಾನಿಯು ಆಕಸ್ಮಾತ್ತಾಗಿ ಕಾರ್ಯವನ್ನು ಸಾಧಿಸುತ್ತಾನೆ. ಆದರೆ ಇದು ನಿಜವಾದ ಅರ್ಥದಲ್ಲಿ ಸಾಧನೆಯಲ್ಲ ಎಂದು ಪ್ರಕೃತ ಸೂತ್ರದಲ್ಲಿ, ಹಿಂದಿನ ಸೂತ್ರಕ್ಕೆ ಚಾಣಕ್ಯನು ದೃಷ್ಟಾಂತವನ್ನು ಕೊಡುತ್ತಾನೆ.

## ೧೬೭. ಸಿದ್ಧಸ್ಯೈವ ಕಾರ್ಯಸ್ಯ ಪ್ರಕಾಶನಂ ಕರ್ತವ್ಯಮ್

ಕಾರ್ಯವು ಸಿದ್ಧಿಸಿದ ಮೇಲೆಯೇ ಅದರ ಕಲ್ಪನೆ ಜನರಿಗೆ ಬರಬೇಕು. ಅಲ್ಲಿಯ ವರೆಗೂ ಅದು ಗೌಪ್ಯವಾಗಿರಬೇಕು ಎಂದು ಹೇಳುವ ಈ ಸೂತ್ರವು, ಕೈಕೊಂಡ ಕಾರ್ಯದಲ್ಲಿ ಶತ್ರುಗಳಿಂದ ಉದ್ಭವಿಸಬಹುದಾದ ವಿಘ್ನಗಳು ಹಾಗು ದುರ್ದೈವದಿಂದ ಸಂಭವಿಸಬಹುದಾದ ಆಘಾತಗಳು ಕಾರ್ಯಸಿದ್ಧಿಗೆ ತಡೆಯನ್ನುಂಟುಮಾಡುವ ಸಾಧ್ಯತೆಗಳನ್ನು ಲಕ್ಷ್ಯದಲ್ಲಿಟ್ಟು ಹೇಳಲ್ಪಟ್ಟಿದೆ. ಗೌಪ್ಯವಾಗಿದ್ದ ಕಾರ್ಯಕ್ಕೆ ಶತ್ರುಗಳಿಂದ ವಿಘ್ನಗಳು ಬರಲಾರವು. ಒಂದು ವೇಳೆ ದುರ್ದೈವದಿಂದ ಕಾರ್ಯವು ನೆರವೇರದಿದ್ದರೆ ಅಪಹಾಸ್ಯಕ್ಕೂ ಈಡಾಗುವ ಪ್ರಸಂಗ ಬರುವುದಿಲ್ಲ. ಅಂತೆಯೇ ಜನಸಾಮಾನ್ಯರಿಗೆ ಕಾರ್ಯಸಿದ್ಧಿಯಾದ ಮೇಲೆಯೇ ಅದರ ಕಲ್ಪನೆ ಬರಬೇಕೆಂದು ಹೇಳಿದ್ದರಲ್ಲಿ ಅರ್ಥವಿದೆ.

## ೧೬೮. ಜ್ಞಾನವತಾಮಪಿ ದೈವಮಾನುಷ ದೋಷಾತ್ ಕಾರ್ಯಾಣಿ ದುಷ್ಯಂತಿ

ಎಷ್ಟೇ ಬುದ್ಧಿವಂತನಾದ ಜ್ಞಾನಿಗೂ ಕೂಡ ದೈವದ ದುರ್ವಿಪಾಕದಿಂದಾಗಲಿ ಅಥವಾ ಮನುಷ್ಯರಿಂದ ಅನಿವಾರ್ಯವಾಗಿ ಘಟಿಸಬಹುದಾದ

ತಪ್ಪುಗಳ ಪರಿಣಾಮದಿಂದಾಗಲಿ ಕೈಕೊಂಡ ಕಾರ್ಯಗಳು ವಿಫಲವಾಗುತ್ತವೆ. 'To err is human' ಎಂಬ ನಾಣ್ಣುಡಿಯಂತೆ ಮನುಷ್ಯನೆಂದಮೇಲೆ ಹಲವು ಸಲ ಅವನಿಂದ ತಪ್ಪಾಗುವುದು ಸಹಜವೇ. ಇದಕ್ಕೆ ಅಮಾತ್ಯರಾಕ್ಷಸನ ಉದಾಹರಣೆಯೇ ಸಾಕ್ಷಿ. ಅತ್ಯದ್ಭುತ ಪ್ರತಿಭಾವಂತನಾದ ಅವನ ಕಾರ್ಯಗಳು ಹಲವು ಸಲ ದೈವದುರ್ವಿಪಾಕದಿಂದ ಒಮ್ಮೊಮ್ಮೆ ಮನುಷ್ಯಸಹಜವಾದ ಭಾವೋದ್ರೇಕದಿಂದ ವಿಫಲವಾದದ್ದನ್ನು ನಾವು ಓದಿದ್ದೇವೆ. ಆದ್ದರಿಂದ ಮನುಷ್ಯರಿಗೆ ದೈವದ ಸಹಾಯವು ಅತ್ಯವಶ್ಯ. ಮನುಷ್ಯಸಹಜವಾದ ದೋಷಗಳಿಂದ ಪಾರಾಗುವುದಕ್ಕೆ ತನಗಿಂತ ಬುದ್ಧಿವಂತರ ಸಲಹೆಯು ಅವಶ್ಯವೆಂಬುವುದು ಈ ಸೂತ್ರದ ಗರ್ಭಿತಾರ್ಥ.

## ೧೬೯. ದೈವಂ ಶಾಂತಿಕರ್ಮಣಾ ಪ್ರತಿಷೇದ್ಧವ್ಯಮ್

ಅದೃಷ್ಟವಶಾತ್ ದೇಶಕ್ಕೆ ಒದಗಿಬಂದ ಆಪತ್ತುಗಳನ್ನು ದೈವೀ ಆಪತ್ತುಗಳು ಎಂದು ಕರೆಯಲಾಗುತ್ತದೆ. ಮನುಷ್ಯರನ್ನು ಮೀರಿದ ದೈವೀಕಾರಣಗಳಿಂದಾಗಿ ಸಂಭವಿಸಬಹುದಾದ ಬೆಂಕಿಯ ಅನಾಹುತ, ಜಲಪ್ರಳಯ, ಭೂಕಂಪನ, ಮಹಾಮಾರಿ ಮುಂತಾದ ಪಿಡುಗುಗಳು, ಬರಗಾಲ, ಇಲಿ ಹಾಗು ಹಿಂಸ್ರಪಶುಗಳಿಂದ ಹಾಗೆಯೇ ವಿಷಸರ್ಪ. ಭೂತ. ಪಿಶಾಚಿ, ರಾಕ್ಷಸರಿಂದ ಸಂಭವಿಸಬಹುದಾದ ಉಪದ್ರವಗಳು ಎಲ್ಲರ ಅನುಭವಕ್ಕೂ ಬರುವ ವಿಷಯ. ಇಂಥ ವಿಪತ್ತುಗಳಿಂದ ದೇಶವನ್ನು ರಕ್ಷಿಸುವುದಕ್ಕಾಗಿ ರಾಜನು ವೇದ ಹಾಗು ತಂತ್ರೋಕ್ತ ಶಾಂತಿಕರ್ಮಗಳನ್ನು ಮಾಡಿಸಬೇಕು ಎಂದು ಅರ್ಥಶಾಸ್ತ್ರದಲ್ಲಿ ಹೇಳಲಾಗಿದೆ. ಇಂಥ ಶಾಂತಿಕರ್ಮಗಳಲ್ಲಿ ಪೌರ್ಣಮಾದಿ ಪರ್ವಗಳಲ್ಲಿ ಭೂತಬಲಿ. ಹೋಮ. ಹವನ. ಸ್ವಸ್ತಿವಾಚನ ಇವು ಸಮಾವೇಶಗೊಳ್ಳುತ್ತವೆ. ಇವುಗಳ ಗುರಿ ನಿಸರ್ಗ ದೇವತೆಗಳನ್ನು ಶಾಂತಗೊಳಿಸುವುದು.

ಇಂದಿನ ವೈಜ್ಞಾನಿಕ ಪ್ರಗತಿಯ ಯುಗದಲ್ಲಿ ಇವೆಲ್ಲ ಮೂಢನಂಬಿಕೆ

ಎಂದು ಹೀಯಾಳಿಸುವವರೂ ಇದ್ದಾರೆ. ಆದರೆ ಕೌಟಿಲ್ಯನ ಕಾಲದಲ್ಲಿ ವೈದಿಕ ಕರ್ಮಗಳಿಗೆ ಇನ್ನೂ ಮಹತ್ವವಿತ್ತು. ಸ್ವತಃ ಸೂತ್ರಕಾರನೇ ಶ್ರೇಷ್ಠ ವೈದಿಕನಾಗಿದ್ದು ಮಂತ್ರಸಾಮರ್ಥ್ಯದ ಅನುಭವ ಅವನಿಗಿತ್ತು. ಅಥರ್ವಣ ವೇದದಲ್ಲಿಯ ಅಭಿಚಾರ ಪ್ರಯೋಗದಿಂದ ಅವನು ನಂದರನ್ನು ಸಂಹರಿಸಿದ್ದನು. ಅರ್ಥಶಾಸ್ತ್ರದಲ್ಲಿಯ ' ಔಪನಿಷದಿಕಮ್ ' ಎಂಬ ಒಂದು ಸಂಪೂರ್ಣ ಪ್ರಕರಣವು ಈ ಮಂತ್ರ, ತಂತ್ರ, ಅಭಿಚಾರಾದಿಗಳನ್ನೇ ಚರ್ಚಿಸುತ್ತದೆ. ರಾಜಪುರೋಹಿತನು ಈ ವಿದ್ಯೆಯಲ್ಲಿ ಪರಿಣತನಾದವನೇ ಇರಬೇಕೆಂಬುದು ಗ್ರಂಥಕಾರನ ಅಭಿಪ್ರಾಯ. ಆದ್ದರಿಂದ ಕೌಟಿಲ್ಯನು ಅಂಧಶ್ರದ್ಧೆಯಿಂದ ದೈವೀ ಉಪಾಯಗಳನ್ನು ಸೂಚಿಸದೆ ಸ್ವಂತ ಅನುಭವದ ಆಧಾರದಿಂದ ಹೇಳುತ್ತಾನೆ.

ವೈಜ್ಞಾನಿಕ ಮನೋವೃತ್ತಿಯುವರೆಂದೆನಿಸಿಕೊಳ್ಳುವ ಅದೆಷ್ಟೋ ಜನರು ಇನ್ನೂ ತಮ್ಮ-ತಮ್ಮ ಮನೆಗಳಲ್ಲಿ ಗೃಹ, ವಾಸ್ತುಶಾಂತಿ, ದುಷ್ಟನಕ್ಷತ್ರ, ಜನನ ಶಾಂತಿ ಇತ್ಯಾದಿಗಳನ್ನು ಮಾಡಿಸುವುದು ಎಲ್ಲರಿಗೂ ಗೊತ್ತಿದ್ದ ವಿಷಯ. ಇತ್ತೀಚೆಗೆ ಕರ್ಮಕಾಂಡವನ್ನು ನಿಂದಿಸುವುದು ಒಂದು ಫ್ಯಾಶನ್ ಆಗಿಬಿಟ್ಟಿದೆಯಷ್ಟೇ.

ದೈವೀ ಉಪಾಯಗಳು ನಿಂದ್ಯವಾಗಲಿಕ್ಕೆ ಬೇರೊಂದು ಕಾರಣವೆಂದರೆ, ವೇದಗಳನ್ನು, ಕರ್ಮಕಾಂಡವನ್ನು ಸರಿಯಾಗಿ ಅಭ್ಯಸಿಸಿ, ನಿಜವಾದ ಅರ್ಥದಲ್ಲಿ ಕರ್ಮನಿಷ್ಠರಾದ ಋತ್ವಿಜರು ದೊರೆಯುವುದು ಈಗ ಅಪರೂಪವಾಗಿದೆ. ಇದಲ್ಲದೆ ಅವರಲ್ಲಿರಬೇಕಾದ ಚಾರಿತ್ರ ಶುದ್ಧಿ ಹಾಗು ಅಯಾಚಿತ ವೃತ್ತಿಯು ಇಲ್ಲದಾಗಿದೆ. ಹೀಗಾಗಿ ವೇದೋಕ್ತ ಕರ್ಮಗಳು ಅಪಮೌಲ್ಯಗೊಂಡಿವೆ. ಇದು ಕರ್ಮಗಳ ದೋಷವಲ್ಲ, ಆದರೆ ವೈದಿಕರ ದೋಷ. ಚಾಣಕ್ಯನು ಎಲ್ಲ ರೀತಿಯಿಂದಲೂ ಯೋಗ್ಯತಾಸಂಪನ್ನನಾದುದರಿಂದ ದೈವೀ ಉಪಾಯಗಳನ್ನು ಸಮರ್ಥಿಸುವ ಅವನ ಪಕ್ಷವನ್ನು ಯಾರೂ ಕಸಿದುಕೊಳ್ಳಲಾರರು. ಅಂತೆಯೇ ಅವನು ದೈವೀ ವಿಪತ್ತುಗಳನ್ನು ಪರಿಹರಿಸಲು ಸಮರ್ಥರಾದ ಮಾಂತ್ರಿಕರು, ಸಿದ್ಧಪುರುಷರು, ತಪಸ್ವಿಗಳು ರಾಜನಿಂದ ಸನ್ಮಾನಿಸಲ್ಪಟ್ಟವರಾಗಿ ದೇಶದಲ್ಲಿ ವಾಸಿಸುತ್ತಿರಬೇಕು ಎಂದು ಧೈರ್ಯ-

ದಿಂದ ಹೇಳುತ್ತಾನೆ. ಮುಂದುವರಿದವರನ್ನು ಕೆಳಕ್ಕೆ ನೂಕಿ, ಹಿಂದುಳಿದವರನ್ನು ಮೇಲಕ್ಕೆತ್ತಬೇಕೆಂದು ವಾದಿಸುವ ಇಂದಿನ ರಾಜಕಾರಣಿಗಳಿಗೆ ಚಾಣಕ್ಯನ ಈ ವಿಚಾರವು ಸೇರಲಿಕ್ಕಿಲ್ಲ.

## ೧೭೦. ಮಾನುಷೀಂ ಕಾರ್ಯವಿಪತ್ತಿಂ ಕೌಶಲೇನ ನಿವಾರಯೇತ್

ಮನುಷ್ಯರಿಂದ ಸಮಾಜಕ್ಕೆ ಆಗಬಹುದಾದ ಅಪಾಯಗಳನ್ನು ಬುದ್ಧಿಕೌಶಲ್ಯದಿಂದ ನಿವಾರಿಸಬೇಕು ಎಂದು ಈ ಸೂತ್ರವು ಹೇಳುತ್ತದೆ. ಇಂಥ ಸಮಾಜಕಂಟಕರನ್ನು ಚಾಣಕ್ಯನು—

ಏವಂ ಚೋರಾನ್ ಅಚೋರಾಖ್ಯಾನ್ ವಣಿಕ್
ಕಾರುಕುಶೀಲವಾನ್।
ಭಿಕ್ಷುಕಾನ್ ಕುಹಕಾಂಶ್ಚಾನ್ಯಾನ್ ವಾರಯೇತ್
ದೇಶಪೀಡನಾತ್ ॥

ಎಂಬ ಶ್ಲೋಕದಲ್ಲಿ ವರ್ಣಿಸಿದ್ದಾನೆ. ಲಂಚಬಡಕ ಅಧಿಕಾರಿಗಳು, ಕೊಲೆ, ಸುಲಿಗೆಗಳನ್ನು ಮಾಡುವಂಥವರಂತೂ ಸರಿಯೇ. ಆದರೆ ವ್ಯಾಪಾರಿಗಳು, ಉದ್ಯೋಗಪತಿಗಳು, ನಟನರ್ತಕ ಮುಂತಾದವರು ಹಾಗು ಭಿಕ್ಷುಕರ ರೂಪದಲ್ಲಿಯ ವಂಚಕರು ಇವರೆಲ್ಲ ಕಳ್ಳರೆನಿಸಿಕೊಳ್ಳದಿದ್ದರೂ ಕಳ್ಳರೇ ಎಂದು ಚಾಣಕ್ಯನು ಅರ್ಥಶಾಸ್ತ್ರದಲ್ಲಿ ಹೇಳುತ್ತಾನೆ. ಆದ್ದರಿಂದ ಇವರೆಲ್ಲರೂ ಸಮಾಜಕಂಟಕರೇ ಎಂಬುದು ಅವನ ಅಭಿಪ್ರಾಯ. ಇದು ಮೇಲುನೋಟಕ್ಕೆ ಆಶ್ಚರ್ಯವನ್ನುಂಟುಮಾಡಿದರೂ ಚಾಣಕ್ಯನ ಅಮೋಘವಾದ ಬುದ್ಧಿಶಕ್ತಿ ಹಾಗು ಸೂಕ್ಷ್ಮನಿರೀಕ್ಷಣೆಗಳ ದ್ಯೋತಕವಾಗಿದೆ. ಈಗಿನಂತೆ ಪ್ರಾಚೀನ ಭಾರತದಲ್ಲಿ ಬೃಹತ್ ಉದ್ಯೋಗಪತಿಗಳು ಇರಲಿಲ್ಲವೆಂಬುದೇನೋ ನಿಜ. ಆದರೆ ಗೃಹೋದ್ಯೋಗಗಳಂತೂ ಇದ್ದೇ ಇದ್ದವು. ವ್ಯಾಪಾರಿ-

ಗಳು ಹಾಗು ಉದ್ಯೋಗಪತಿಗಳು ತಾವು ಹೆಚ್ಚು ಲಾಭವನ್ನು ಪಡೆಯುವ ಉದ್ದೇಶದಿಂದ ಅನೇಕಾನೇಕ ಮಾರ್ಗಗಳಿಂದ ಜನರನ್ನು ಮೋಸಗೊಳಿಸಿ ಸಮಾಜವನ್ನು ಶೋಷಿಸುತ್ತಾರೆ. ಒಮ್ಮೆಲೇ ವಸ್ತುಗಳ ಬೆಲೆಯನ್ನು ಕೃತ್ರಿಮವಾಗಿ ಏರಿಸುವುದು ಹಾಗು ಇಳಿಸುವುದು, ಕಡಿಮೆ ಬೆಲೆಯ ಸರಕು-ಗಳನ್ನು ಮೋಸದಿಂದ ಹೆಚ್ಚು ಬೆಲೆಗೆ ಮಾರುವುದು, ತೂಕ–ಅಳತೆಗಳಲ್ಲಿ ಗಿರಾಕಿಗಳನ್ನು ಮೋಸಗೊಳಿಸುವುದು. ಒಳ್ಳೆಯ ಹಾಗು ನಿಕೃಷ್ಟ ದರ್ಜೆಯ ವಸ್ತುಗಳನ್ನು ಬೆರೆಸಿ ಒಳ್ಳೆಯವೆಂದೇ ಮಾರುವುದು, ತೆರಿಗೆ ಕೊಡುವಲ್ಲಿ ಸರಕಾರಕ್ಕೆ ಮೋಸಮಾಡುವುದು — ಇವೆಲ್ಲ ಅವರ ಕಸಬುಗಳೇ ಆಗಿದ್ದು ಎಲ್ಲರಿಗೂ ಗೊತ್ತಿದ್ದ ವಿಷಯ. ಹಾಗೆಯೇ ನಟ–ನರ್ತಕರು ಜನರನ್ನು ಕಾರ್ಯವಿಮುಖರನ್ನಾಗಿ ಮಾಡಿ ದುರ್ಮಾರ್ಗಕ್ಕೆಳೆಯುತ್ತಾರೆ. ದೂರ-ದರ್ಶನದಲ್ಲಿಯ ಬಹಳಷ್ಟು ಕಾರ್ಯಕ್ರಮಗಳನ್ನು ನೋಡಿ, ಸಮಾಜ ವಿಶೇಷ-ವಾಗಿ ಚಿಕ್ಕಮಕ್ಕಳು ಎಷ್ಟು ಕೆಡಹತ್ತಿದ್ದಾರೆ ಎಂಬುದನ್ನು ಇಲ್ಲಿ ಸ್ಮರಿಸು-ವುದು ಅತ್ಯವಶ್ಯ. ವಂಚಕರಾದ ಭಿಕ್ಷುಕರ ಅನುಭವವಂತೂ ಎಲ್ಲರಿಗೂ ಇದ್ದೇ ಇದೆ. ಹೀಗೆ ಈ ಸಮಾಜಕಂಟಕರಿಂದ ರಾಜನು ಸಮಾಜವನ್ನು ರಕ್ಷಿಸಬೇಕು—ಎಂಬುದು ಈ ಸೂತ್ರದ ಅಭಿಪ್ರಾಯ. ಅದಕ್ಕಾಗಿ ಸಾಮ, ದಾನಾದಿ ಉಪಾಯಗಳನ್ನು, ದಂಡದ ಭಯವನ್ನು ಆಡಳಿತದಲ್ಲಿ ಪ್ರಸಂಗಾನು ಸಾರವಾಗಿ ಉಪಯೋಗಿಸುವುದನ್ನೇ ಈ ಸೂತ್ರದಲ್ಲಿ 'ಬುದ್ಧಿಕೌಶಲ್ಯ' ಎಂದು ಹೇಳಲಾಗಿದೆ.

## ೧೭೧. ಕಾರ್ಯವಿಪತ್ತೌ ದೋಷಾನ್ ವರ್ಣಯಂತಿ ಬಾಲಿಶಾಃ

ಕೈಕೊಂಡ ಕಾರ್ಯವನ್ನು ನೆರವೇರಿಸಲು ಸಾಧ್ಯವಾಗದಿದ್ದಾಗ ಅಂಥ ಕಾರ್ಯಗಳಲ್ಲಿ ದೋಷಗಳನ್ನು ಹುಡುಕಿ ತಮ್ಮ ಅಸಾಮರ್ಥ್ಯವನ್ನು ಮುಚ್ಚಿ-ಕೊಳ್ಳಲು ಪ್ರಯತ್ನಿಸುವವರು ಮೂರ್ಖರು ಎಂದು ಪ್ರಕೃತ ಸೂತ್ರವು

ಹೇಳುತ್ತದೆ. ' ತಮಗೆ ಕುಣಿಯಲು ಬರದವರು ಅಂಗಳ ಡೊಂಕು ' ಎಂದು ಹೇಳುವಂತೆ ಈ ಮೂರ್ಖರು ವ್ಯವಹರಿಸುತ್ತಾರೆ. ಯೋಗ್ಯತಾಸಂಪನ್ನರು ಮಾತ್ರ ಎಂಥ ವಿಪತ್ತುಗಳು ಬಂದರೂ ಸಮರ್ಥ ರೀತಿಯಲ್ಲಿ ಎದುರಿಸಿ ಸಫಲರಾಗುತ್ತಾರೆಂಬುದೇ ತಾತ್ಪರ್ಯ.

## ೧೭೨. ಕಾರ್ಯಾರ್ಥಿನಾ ದಾಕ್ಷಿಣ್ಯಂ ನ ಕರ್ತವ್ಯಮ್

ಯಾರೇ ಆಗಲಿ ಬೇರೊಬ್ಬರಿಂದ ತಮ್ಮ ಕೆಲಸವನ್ನು ಮಾಡಿಸಿಕೊಳ್ಳಬೇಕಿದ್ದಾಗ ಅತೀ ಸರಳ ಹಾಗು ಸೌಮ್ಯವಾಗಿರಬಾರದು. ಅತೀ ಸಭ್ಯ ಮನುಷ್ಯನನ್ನು ಸಮಾಜವು ಉಪೇಕ್ಷಿಸುತ್ತದೆ. ಅಂಥವರಿಗೆ ಬೆಲೆ ಕೊಡುವವರು ತೀರ ಅಪರೂಪ. ಪ್ರಭಾವೀ ವ್ಯಕ್ತಿಗೆ ಮಾತ್ರ ಸಮಾಜದಲ್ಲಿ ಸ್ಥಾನವುಂಟು. ತಮ್ಮ ಪ್ರಭಾವವನ್ನು ಪ್ರಕಟಿಸಿದಾಗ ಜನರು ಅಂಥವರಿಗೆ ಮರ್ಯಾದೆ ಕೊಡಲು ಮುಂದೆ ಬರುತ್ತಾರೆ. ಆದ್ದರಿಂದ ಅತಿಯಾದ ಸಜ್ಜನಿಕೆಯು ಹಲವು ಸಲ ಪಥ್ಯವಾಗುವುದಿಲ್ಲವೆಂಬುದು ಈ ಸೂತ್ರದ ಅಭಿಪ್ರಾಯ. ಇಲ್ಲಿ ಮನುಷ್ಯರಲ್ಲಿಯ ಸೌಮ್ಯತನ ಒಂದು ದೋಷವೆಂದು ಅರ್ಥಮಾಡಲಾಗದು. ಒಳ್ಳೆಯತನವನ್ನು ಭಗವಂತನು ಕೂಡ ಮೆಚ್ಚುತ್ತಾನೆ. ಪರಮಾರ್ಥದಲ್ಲಿ ಅದಕ್ಕೆ ಸ್ಥಾನವಿದೆ. ಲೌಕಿಕ ಹಾಗು ರಾಜಕೀಯ ವ್ಯವಹಾರಗಳಲ್ಲಿ ಮಾತ್ರ ಅತೀ ಸೌಮ್ಯದ ಉಪೇಕ್ಷೆಯಾಗಬಹುದೆಂಬುದು ಈ ಸೂತ್ರದ ತಾತ್ಪರ್ಯ. ಇದಕ್ಕೆ ದೃಷ್ಟಾಂತವೆಂದು—

## ೧೭೩, ಕ್ಷೀರಾರ್ಥೀ ವತ್ಸೋ ಮಾತುರೂಧಃ ಪ್ರತಿಹಂತಿ

ಆಕಳ ಕರುವು ತಾಯಿಯ ಕೆಚ್ಚಲಲ್ಲಿಯ ಹಾಲು ಕುಡಿಯುವಾಗ ಗುದ್ದಿ-

ಗುದ್ದಿ ಕುಡಿಯುವಂತೆ ಮನುಷ್ಯರು ತಮ್ಮ ಕಾರ್ಯವಾಗಬೇಕಾದಾಗ ಪ್ರಸಂಗಾನುಸಾರ ಕಠೋರರಾಗಬೇಕಾಗುತ್ತದೆಂದು ಇಲ್ಲಿ ಸೂಚಿಸಲಾಗಿದೆ.

## ೧೭೪. ಅಪ್ರಯತ್ನಾತ್ ಕಾರ್ಯವಿಪತ್ತಿರ್ಭವೇತ್

ಪ್ರಯತ್ನ ಮಾಡದ ಕಾರ್ಯವು ಸಿದ್ಧಿಸಲಾರದಷ್ಟೇ ಅಲ್ಲ, ಅದು ಕೆಟ್ಟುಹೋಗುತ್ತದೆ. ಹಲವು ಜನರು ದೈವವನ್ನು ಅತಿಯಾಗಿ ನಂಬಿ, ಇನ್ನೂ ಕೆಲವರು ತಮ್ಮ ಆಲಸ್ಯದ ಪರಿಣಾಮವಾಗಿ ಪ್ರಯತ್ನ ಮಾಡುವುದನ್ನು ಬಿಟ್ಟು ಕೇವಲ ಸಿದ್ಧಿಯನ್ನಪೇಕ್ಷಿಸುತ್ತಾರೆ. ಇದು ತರವಲ್ಲವೆಂದು ತಿಳಿಯ-ಪಡಿಸಿ ದೈವದ ಮೇಲೆಯೇ ಕೈಯೂರಿ ಕೂಡ್ರುವುದು ಮೂರ್ಖತನ ಎಂಬುದನ್ನು—

## ೧೭೫. ನ ದೈವಪ್ರಮಾಣಾನಾಂ ಕಾರ್ಯಸಿದ್ಧಿಃ

ಕೇವಲ ದೈವ ಅಥವಾ ಅದೃಷ್ಟದಲ್ಲಿಯೇ ಭರವಸೆಯನ್ನಿಡುವವರ ಕಾರ್ಯಗಳು ಎಂದೂ ಸಿದ್ಧಿಸಲಾರವೆಂದು ಪುನಃ ಈ ಸೂತ್ರದಲ್ಲಿ ಹೇಳ-ಲಾಗಿದೆ.

## ೧೭೬. ಕಾರ್ಯಬಾಹ್ಯೋ ನ ಪೋಷಯತ್ಯಾಶ್ರಿತಾನ್

ಯಾವನ ಕಾರ್ಯಗಳು ಸಿದ್ಧಿಸುವುದಿಲ್ಲವೋ ಅಂಥ ರಾಜನಿಗೆ ತನ್ನನ್ನೇ ಆಶ್ರಯಿಸಿರುವ ಪರಿವಾರ ಹಾಗು ಸಿಬ್ಬಂದಿಯನ್ನು ಕೂಡ ಪೋಷಿಸುವುದು

ಅಸಾಧ್ಯವಾಗುತ್ತದೆ. ಎಂದ ಮೇಲೆ ಆಡಳಿತ ನಿರ್ವಹಣೆಯಲ್ಲಿ ಅವನು ಸಂಪೂರ್ಣ ವಿಫಲನಾಗುತ್ತಾನೆಂದು ಬೇರೆ ಹೇಳಬೇಕಾಗಿಲ್ಲ.

## ೧೭೭. ಯಃ ಕಾರ್ಯಂ ನ ಪಶ್ಯತಿ ಸೋಽಂಧಃ

ತನ್ನ ಕಾರ್ಯದ ಸ್ವರೂಪವನ್ನು ಸರಿಯಾಗಿ ತಿಳಿದುಕೊಂಡಿರದವನು ಕುರುಡನಿದ್ದಂತೆಯೇ ಸರಿ. ಅವನ ಕಣ್ಣುಗಳು ದೃಷ್ಟಿಯನ್ನು ಕೊಡುತ್ತಿದ್ದರೂ ಕಾರ್ಯದ ಮರ್ಮವನ್ನು ತಿಳಿದುಕೊಳ್ಳುವುದರಲ್ಲಿ ಬುದ್ಧಿಯಿಲ್ಲದೆ ಅವುಗಳ ಉಪಯೋಗವಾಗುವುದಿಲ್ಲ. ಅಂತೆಯೇ ದೃಷ್ಟಿ ಇಲ್ಲದ ಕುರುಡನಿಗೂ, ದೃಷ್ಟಿ ಇದ್ದ ಇವನಿಗೂ ಭೇದವಿಲ್ಲವೆನ್ನುವುದೇ ತಾತ್ಪರ್ಯ.

## ೧೭೮. ಪ್ರತ್ಯಕ್ಷ ಪರೋಕ್ಷಾನುಮಾನೈಃ ಕಾರ್ಯಾಣಿ ಪರೀಕ್ಷೇತ್

ರಾಜನು ಆಡಳಿತ ನಡೆಸಬೇಕಾದಾಗ ಅನೇಕ ಸಮಸ್ಯೆಗಳು ಉದ್ಭವಿಸುವುದು ಸಹಜ. ವಿಶಾಲವಾದ ದೇಶದಲ್ಲಿ ಅವು ಬೇರೆ ಬೇರೆ ಪ್ರದೇಶಗಳಿಗೆ ಸಂಬಂಧಪಟ್ಟವು ಇರಲು ಸಾಕು. ಇಂಥವುಗಳಲ್ಲಿ ಹಲವೊಂದು ಕಾರ್ಯಗಳನ್ನು ಆದ್ಯತೆ ಹಾಗು ಮಹತ್ವವನ್ನರಿತು ಸ್ವತಃ ನಿರ್ವಹಿಸಬೇಕಾಗುತ್ತದೆ. ಇದು ಪ್ರತ್ಯಕ್ಷ. ಇನ್ನೊಬ್ಬರ ಮುಖಾಂತರವಾಗಿ ನಿರ್ವಹಿಸಬೇಕಾದವುಗಳು ಪರೋಕ್ಷ. ಹಿಂದಿನ ಅನುಭವಗಳ ಆಧಾರದ ಮೇಲಿಂದ ಮುಂದೆ ನೆರವೇರಿಸತಕ್ಕವುಗಳ ಅನುಮಾನ ಮಾಡುವುದೇ 'ಅನುಮೇಯ' ಅನೇಕ ಸ್ಥಳಗಳಲ್ಲಿ, ಅನೇಕ ರೀತಿಯ ಕಾರ್ಯಗಳನ್ನು ಸಕಾಲಕ್ಕೆ [illegible]ಬೇಕಾದುದರಿಂದ ಅಮಾತ್ಯಾದಿಗಳ ಸಹಾಯವು ಅವಶ್ಯವೆನಿಸುತ್ತದೆ. ಆದ್ದರಿಂದ ಆಯಾ ಕಾರ್ಯಗಳನ್ನು ರಾಜನು ಪ್ರಸಂಗಾನುಸಾರವಾಗಿ ಪ್ರತ್ಯಕ್ಷ, ಪರೋಕ್ಷ ಹಾಗು ಅನುಮಾನಗಳ ಮೂಲಕ ಪರೀಕ್ಷಿಸಿ ಮುನ್ನಡೆಯಬೇಕು.

## ೧೭೯. ಅಪರೀಕ್ಷ್ಯಕಾರಿಣಂ ಶ್ರೀಃ ಪರಿತ್ಯಜತಿ

ಮೇಲಿನ ಸೂತ್ರಗಳಲ್ಲಿ ವಿವರಿಸಿದ ಪ್ರಕಾರ ಯಾವುದೇ ಕಾರ್ಯ-ವನ್ನು ಪೂರ್ವಾಪರ ವಿಚಾರವಿಲ್ಲದೆ ಅರ್ಥಾತ್ ಸರಿಯಾಗಿ ಪರೀಕ್ಷಿಸದೆ, ಕೇವಲ ತಾತ್ಕಾಲಿಕ ಮನಸ್ಸಿನ ಉದ್ವೇಗದಿಂದ ಕೈಕೊಂಡಲ್ಲಿ ಸಂಪತ್ತು ಅವರ ಕೈಬಿಡುತ್ತದೆ. ಅರ್ಥಾತ್ ವಿನಾಶಕ್ಕೀಡಾಗುತ್ತಾರೆ. ಈ ವಿಷಯದಲ್ಲಿ ಹಿಂದಿನ ಸೂತ್ರಗಳಲ್ಲಿ ಉದಾಹರಿಸಲ್ಪಟ್ಟ ಮಹಾಕವಿ ಭಾರವಿಯ ' ಸಹಸಾ ವಿದಧೀತ್ ನ ಕ್ರಿಯಾಂ ' ಎಂಬ ಉಕ್ತಿಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

## ೧೮೦. ಪರೀಕ್ಷ್ಯಕಾರ್ಯೇ ವಿಪತ್ತಿಃ

ಮುಂದೆ ಸಂಕಟಗಳಿಗೆ ಈಡಾಗಬಾರದೆಂದಿದ್ದರೆ ಅಥವಾ ಅವು ಬಂದರೂ ಪಾರಾಗಬೇಕೆಂದಿದ್ದರೆ ಕಾರ್ಯದ ಆಗು–ಹೋಗುಗಳನ್ನು ಸಮಗ್ರವಾಗಿ ಪರೀಕ್ಷಿಸಿ ಕೈಕೊಳ್ಳಬೇಕು. ಇದರಿಂದ ವಿಪತ್ತುಗಳನ್ನು ದಾಟುವುದು ಸಾಧ್ಯವೆಂದು ಪ್ರಕೃತ ಸೂತ್ರವು ತಿಳಿಯಪಡಿಸುತ್ತದೆ.

## ೧೮೧. ಸ್ವಶಕ್ತಿಂ ಜ್ಞಾತ್ವಾ ಕಾರ್ಯಮಾರಭೇತ್

ತನ್ನ ಸಾಮರ್ಥ್ಯವನ್ನು ಅರಿತುಕೊಂಡು ಯಾವುದೇ ಕಾರ್ಯವನ್ನಾ-ಗಲಿ ಆರಂಭಿಸಬೇಕೆಂದು ಹೇಳುವ ಈ ಸೂತ್ರವು ಅತ್ಯಂತ ಸಮಂಜಸ ಹಾಗು ವಾಸ್ತವಿಕವಾದ ಉಪದೇಶವನ್ನು ಮಾಡುತ್ತವೆ. ಸಾಧ್ಯವಾಗಬಹುದಾದ ಕೆಲಸವನ್ನು ಕೂಡ ಈಡೇರಿಸದ ಆಲಸಿಗಳು ಈ ಜಗತ್ತಿನಲ್ಲಿರುವಂತೆ ತಮ್ಮ ಸಾಮರ್ಥ್ಯಕ್ಕೆ ನಿಲುಕದ ಸಾಹಸಕ್ಕೆ ಕೈಹಾಕುವ ಮೂರ್ಖರಿಗೂ ಕೊರತೆ-ಯಿಲ್ಲ.

ಯೋಗ್ಯತೆಯಿಲ್ಲದಿದ್ದರೂ ದೊಡ್ಡವರೆನಿಸಿಕೊಳ್ಳಬೇಕೆಂಬ ಹಂಬಲ ವಿದ್ದವರು ಸಮಾಜದಲ್ಲಿ ಎಷ್ಟು ಜನರಿಲ್ಲ? ಹಾಗೆಯೇ ರಾಜರು ಕೂಡ ತಮ್ಮ ಯೋಗ್ಯತೆಗೆ ಮೀರಿದ ಮಹತ್ವಾಕಾಂಕ್ಷೆಯನ್ನಿಟ್ಟುಕೊಂಡು ವಿನಾ-ಶಕ್ಕೆ ಈಡಾಗುತ್ತಾರೆ. ಆದ್ದರಿಂದ ಸೂತ್ರಕಾರನು ತಮ್ಮ ಸಾಮರ್ಥ್ಯಕ್ಕೆ ನಿಲುಕುವ ಕಾರ್ಯಗಳನ್ನೇ ಕೈಕೊಳ್ಳಬೇಕೆಂದು ಬೋಧಿಸಿದ್ದಾನೆ.

## ೧೮೨. ಸ್ವಜನಂ ತರ್ಪಯಿತ್ವಾ ಯಃ ಶೇಷ ಭೋಜೀಸೋಽಮೃತಭೋಜೀ

ತನ್ನ ಕುಟುಂಬ, ಬಂಧು-ಬಾಂಧವರು ಹಾಗು ಪರಿವಾರದವರನ್ನು ಪ್ರೀತಿಯಿಂದ ನೋಡಿಕೊಳ್ಳಬೇಕೆನ್ನುವ ಅರ್ಥದಲ್ಲಿ ಈ ಸೂತ್ರದ ತಾತ್ಪರ್ಯ-ವಿದೆ. ಒಂದು ಕುಟುಂಬದಲ್ಲಿ ' ಕರ್ತಾ ' ಅಥವಾ ಯಜಮಾನನು ತನ್ನಿಂದಲೇ ಆ ಕುಟುಂಬಕ್ಕೆ ಘನತೆ, ಗೌರವ ಎನ್ನುವ ಅಹಂಕಾರದಿಂದ ಊಟ, ಉಡಿಗೆ ಇತ್ಯಾದಿ ವಿಷಯಗಳಲ್ಲಿ ತನ್ನ ವೈಶಿಷ್ಟ್ಯ ಅಥವಾ ಪ್ರತ್ಯೇಕತೆಯನ್ನು ಕಾಯ್ದು ಕೊಂಡು ಹೋಗುವ ಪರಿಪಾಠವು ಹಲವೆಡೆ ಕಂಡುಬರುತ್ತದೆ. ಇದರಿಂದಾಗಿ ಆ ಕುಟುಂಬದಲ್ಲಿ ದ್ವೈಧೀಭಾವವು (ವೈಷಮ್ಯ) ಬೆಳೆಯುತ್ತ ಹೋಗು-ತ್ತದೆ. ಇದು ಅಭ್ಯುದಯದ ಲಕ್ಷಣವಲ್ಲ. ಎಲ್ಲರನ್ನೂ ಸಮಾನತೆಯಿಂದ ಕಂಡು ವಾತ್ಸಲ್ಯಭಾವದಿಂದಿರುವುದು ಯಜಮಾನನಿಗೆ ಭೂಷಣ. ಇದ-ರಿಂದಾಗಿ ಅಪೇಕ್ಷಿಸದಿದ್ದರೂ ಅವನಿಗೆ ತಾನೇ ತಾನಾಗಿ ಗೌರವ ದೊರೆಯದೇ ಇರಲಾರದು. ಆದ್ದರಿಂದ ತನ್ನ ಬಳಗವನ್ನೆಲ್ಲ ತೃಪ್ತಿಯಲ್ಲಿಟ್ಟು ತಾನು ಜೀವನದ ಭೋಗಗಳನ್ನು ಅನುಭವಿಸುವವನು ಅಮೃತವನ್ನೇ ಭುಂಜ-ಸುತ್ತಾನೆ ಎನ್ನುವುದು ಶಾಶ್ವತವಾದ ಸತ್ಯ. ಇಂಗ್ಲೀಷ್ ಭಾಷೆಯಲ್ಲಿ ಇದಕ್ಕೆ ' Fellow-feeling ' ಎಂದು ಹೇಳುವುದುಂಟು. ಸ್ವಪ್ರತಿಷ್ಠೆಗಾಗಿ ಹಣ-ಗಾಡುವುದು ಬುದ್ಧಿವಂತಿಕೆಯ ಲಕ್ಷಣವಲ್ಲ. ಎಲ್ಲ ಬಳಗವನ್ನು ತನ್ನೊಂದಿಗೆ

ಮೇಲಕ್ಕೆತ್ತಲು ಪ್ರಯತ್ನಿಸಬೇಕೆನ್ನುವುದೇ ಈ ಸೂತ್ರದಲ್ಲಿಯ ಬುದ್ಧಿ-ವಾದ.

## ೧೮೩. ಸರ್ವಾನುಷ್ಠಾನಾದಾಯ ಮುಖಾನಿ ವರ್ಧಂತೇ

ಯಾವುದೇ ಕಾರ್ಯಾಚರಣೆಯ ಯಶಸ್ಸು. ಅದರಿಂದಾಗಬಹುದಾದ ಲಾಭವನ್ನು ಅವಲಂಬಿಸಿರುತ್ತದೆ ಎಂದು ಹೇಳುವ ಈ ಸೂತ್ರವು ಪರ್ಯಾಯವಾಗಿ ಹಾನಿಗೀಡುಮಾಡುವ ಕಾರ್ಯಗಳನ್ನು ಕೈಕೊಳ್ಳುವುದು ಜಾಣತನ-ವಲ್ಲ ಎಂದು ಸಾರುತ್ತದೆ.

ನಮ್ಮ ಸರಕಾರವು ಪಬ್ಲಿಕ್ ಸೆಕ್ಟರದಲ್ಲಿಯ ಅದೆಷ್ಟು ಉದ್ಯೋಗ-ಗಳಿಂದ ಹಾನಿಗೀಡಾಗಿದೆ ಎಂಬುದನ್ನು ತಿಳಿಯುವುದು ಇಲ್ಲಿ ಉಚಿತವೆನಿ-ಸೀತು. ನಮ್ಮ ದೇಶಕ್ಕಾಗುವ ಹಾನಿಯಲ್ಲಿಯ ಬಹಳಷ್ಟು ಭಾಗ ಇಂಥ ಉದ್ಯೋಗಗಳಿಂದಲೇ ಆಗುತ್ತವೆಂದರೆ ತಪ್ಪಾಗಲಾರದು. ಬ್ಯಾಂಕುಗಳ ರಾಷ್ಟ್ರೀ-ಕರಣದಿಂದಾಗಿ ಕೆಲವು ಹಾನಿಗೀಡಾದದ್ದು. ದಿವಾಳಿ ತೆಗೆಯುವ ಪರಿಸ್ಥಿತಿ-ಯಲ್ಲಿ ಇದ್ದುದನ್ನು ಇಲ್ಲಿ ಸ್ಮರಿಸಬಹುದು. ರಾಜ್ಯಾಡಳಿತದಲ್ಲಿಯೇ ಆಗಲಿ ಅಥವಾ ವ್ಯಕ್ತಿಗತ ಜೀವನದಲ್ಲಿಯೇ ಆಗಲಿ ಹಾನಿಗೀಡುಮಾಡುವ ಕಾರ್ಯ-ಗಳನ್ನು ಕೈಕೊಳ್ಳುವುದು ಬುದ್ಧಿಗೇಡಿಗಳ ಲಕ್ಷಣ ಎಂಬುದೇ ತಾತ್ಪರ್ಯ.

## ೧೮೪. ನಾಸ್ತಿ ಭೀರೋಃ ಕಾರ್ಯ ಚಿಂತಾ

ಪ್ರಕೃತ ಸೂತ್ರದಲ್ಲಿ ಅಂಜುಬುರುಕನಿಗೆ ಕಾರ್ಯಸಿದ್ಧಿಯ ಚಿಂತೆಯಿಲ್ಲ ಎಂದು ವ್ಯಂಗ್ಯವಾಗಿ ಹೇಳಲ್ಪಟ್ಟಿದೆ. ಯಾವುದೇ ಕಾರ್ಯವನ್ನು ಕೈಕೊಳ್ಳುವ ಧೈರ್ಯವೇ ಅವನಿಗೆ ಇಲ್ಲದಾಗ ಅದನ್ನು ಯಶಸ್ವಿಯಾಗಿ ನೆರವೇರಿಸುವ

ಪ್ರಶ್ನೆಯೇ ಉಳಿಯುವುದಿಲ್ಲ. ಇಂಥವನಿಗೆ ವರ್ತಮಾನವೂ ಇಲ್ಲ, ಭವಿಷ್ಯವೂ ಇಲ್ಲ. ಇಂಥ ಹೇಡಿತನವನ್ನು ಪರೋಕ್ಷವಾಗಿ ನಿಂದಿಸುವುದೇ ಈ ಸೂತ್ರದ ಉದ್ದೇಶ. ಕಾರ್ಯವನ್ನು ಕೈಕೊಂಡು. ಆದನ್ನು ಯಶಸ್ವಿಯಾಗಿ ಪೂರ್ಣಗೊಳಿಸುವುದರಲ್ಲಿಯೇ ಮನುಷ್ಯಜೀವನದ ಸಾರ್ಥಕ್ಯವಿದೆ.

## ೧೮೫. ಸ್ವಾಮಿನಃ ಶೀಲಂ ಜ್ಞಾತ್ವಾ ಕಾರ್ಯಂ ಸಾಧಯೇತ್

ಸ್ವಾಮಿ ಎಂದರೆ ರಾಜಕೀಯ ದೃಷ್ಟಿಯಲ್ಲಿ ರಾಜನೆಂದೂ, ಇತರ ವ್ಯವಹಾರಗಳಲ್ಲಿ ನಾವು ಯಾರ ಸೇವೆಯನ್ನು ಮಾಡಬೇಕಾಗಿದೆಯೋ ಅಂಥ ಯಜಮಾನನೆಂದೂ ಅರ್ಥವಾಗುವುದು. ಅವನ ಸ್ವಭಾವವನ್ನು ಅರಿತು ಜಾಣತನದಿಂದ ಅವನ ಮನಸ್ಸನ್ನು ನೋಯಿಸದೆ. ಅಪಮಾನವಾಗದಂತೆ ನಡೆದುಕೊಂಡು ತಮ್ಮ ಹಿತವನ್ನು ಸಾಧಿಸಿಕೊಳ್ಳಬೇಕು ಎಂದು ಉಪದೇಶಿಸುತ್ತದೆ ಈ ಸೂತ್ರ. ಒಂದು ಪ್ರಸಂಗದಲ್ಲಿ ಸ್ವಾಮಿಯ ಅಭಿಪ್ರಾಯವು ತಪ್ಪಾಗಿದ್ದರೂ ಕೂಡ ಅದಕ್ಕೆ ಬಹಿರಂಗವಾಗಿ ಪ್ರತಿಭಟಿಸದೆ, ಸೌಮ್ಯ ರೀತಿಯಲ್ಲಿ ತಿಳಿಹೇಳಿ ಅವನ ಮನಸ್ಸನ್ನು ಒಲಿಸಿಕೊಳ್ಳಬೇಕು. ಸೇವಕನಾದವನು ಸ್ವಾಮಿಯನ್ನು ವಿನಯಾದರಗಳಿಂದ ಕಾಣುವುದರಲ್ಲಿಯೇ ಸ್ವಹಿತವಿದೆ ಎಂಬುದೇ ಈ ಸೂತ್ರದ ತಾತ್ಪರ್ಯ.

## ೧೮೬. ಧೇನೋಃ ಶೀಲಜ್ಞಃ ಕ್ಷೀರಂ ಭುಂಕ್ತೇ

ಹಸುವಿನ ಸ್ವಭಾವವನ್ನರಿತವನು ಮಾತ್ರ ಅದರ ಹೈನದ ಸುಖವನ್ನು ಉಪಭೋಗಿಸಬಲ್ಲನು ಎಂಬ ದೃಷ್ಟಾಂತದ ಮೂಲಕ ಹಿಂದಿನ ಸೂತ್ರದಲ್ಲಿಯ ಅಭಿಪ್ರಾಯವನ್ನು ಇಲ್ಲಿ ದೃಢಪಡಿಸಲಾಗಿದೆ. ಹಲವು ಹಸುಗಳು

ಹಾಲು ಕರೆಯುವಾಗ ಅತ್ತಿತ್ತ ಕಾಲು ಸರಿಸುವುದು, ಒದೆಯುವುದು, ಆಹಾರವನ್ನಿಟ್ಟರೆ ಮಾತ್ರ ಹಾಲುಕರೆಯಗೊಡುವುದು—ಹೀಗೆ ಅನೇಕಾನೇಕ ಸ್ವಭಾವವೈಚಿತ್ರ್ಯವುಳ್ಳವುಗಳಾಗಿರುತ್ತವೆ. ಅದನ್ನರಿತಾಗಲೇ ಹಾಲು ದೊರೆಯಬಲ್ಲದು.

## ೧೮೭. ಕ್ಷುದ್ರೇಗುಹ್ಯ ಪ್ರಕಾಶನಮಾತ್ಮವಾನ್ನ-ಕುರ್ಯಾತ್

ಕ್ಷುದ್ರ ವ್ಯಕ್ತಿಗಳ ಮುಂದೆ ತಮ್ಮ ಗುಪ್ತ ವಿಷಯಗಳನ್ನು ಎಂದೂ ಪ್ರಕಟಗೊಳಿಸಬಾರದು. ಅವರಲ್ಲಿ ವಿಷಯದ ಮಹತ್ವವನ್ನು ಅರಿತು-ಕೊಂಡು ಅವನ್ನು ಗೌಪ್ಯವಾಗಿಡಬೇಕೆಂಬ ತಿಳಿವಳಿಕೆಯಾಗಲಿ, ಮನೋ-ದಾರ್ಢ್ಯವಾಗಲಿ ಇರುವುದಿಲ್ಲ. ಹಣದಾಸೆಯಿಂದಾಗಲಿ ಅಥವಾ ಒಣ ದೊಡ್ಡಸ್ತಿಕೆಯ ಮೋಹದಿಂದಾಗಲಿ ಅವರಿಂದ ರಹಸ್ಯಸ್ಫೋಟವಾದರೆ ಕಾರ್ಯಹಾನಿಯಾಗುವುದರಲ್ಲಿ ಸಂದೇಹವಿಲ್ಲ. ಆದ್ದರಿಂದ ತಿಳಿದವರು ಕ್ಷುದ್ರರ ಜೊತೆಗೆ ಇಂಥ ವ್ಯವಹಾರ ಮಾಡಕೂಡದು.

## ೧೮೮. ಆಶ್ರಿತೈಃ ಅಪಿ ಅವಮನ್ಯತೇ ಮೃದುಸ್ವಭಾವಃ

ರಾಜ ಅಥವಾ ಇನ್ನಾರೇ ಆಗಲಿ, ಅತಿ ಮೃದು ಸ್ವಭಾವದವರಿದ್ದರೆ ಅವರ ಕೈಕೆಳಗಿನವರು ಕೂಡ ಅಂಥವರನ್ನು ಅವಮಾನಗೊಳಿಸುತ್ತಾರೆ. ತಾತ್ಪರ್ಯವೆಂದರೆ, ಅಧಿಕಾರ ನಡೆಸುವವರು ಅವಶ್ಯವಿರುವ ಮಟ್ಟ-ಗಾದರೂ ದರ್ಪವನ್ನು ಪ್ರಕಟಿಸಲೇಬೇಕು. ತೀರ ಸೌಮ್ಯ ಸ್ವಭಾವದವರ ದುರುಪಯೋಗವನ್ನು ಪಡೆದು ಯಾರೇ ಆಗಲಿ ಕಾರ್ಯತತ್ಪರರಾಗುವ-

ದಿಲ್ಲ, ಹಾಗೆಯೇ ಅವರ ವಿನಾಶಕ್ಕೂ ಕಾರಣರಾಗುತ್ತಾರೆ. ಈ ವಿಷಯ-ದಲ್ಲಿ ಈಗಾಗಲೇ ಹಿಂದಿನ ಸೂತ್ರಗಳಲ್ಲಿ ವಿಶೇಷ ಚರ್ಚೆಯಾಗಿದೆ.

## ೧೮೯. ಅಲ್ಪಸಾರಂ ಶ್ರುತವಂತಮಪಿ ನ ಬಹುಮನ್ಯತೇ ಲೋಕಃ

ಮನುಷ್ಯನು ಎಷ್ಟೇ ವಿದ್ಯಾವಂತನಾಗಿದ್ದರೂ ಕೂಡ ' ಅಲ್ಪಸತ್ವೀ ' ಎಂದರೆ ತನ್ನ ಪ್ರಭಾವವನ್ನು ಬೀರುವಷ್ಟು ಸಾಮರ್ಥ್ಯವುಳ್ಳವನಾಗಿರ-ದಿದ್ದರೆ. ಜನರು ಅವನಿಗೆ ಎಷ್ಟೂ ಬೆಲೆ ಕೊಡುವುದಿಲ್ಲ. ಇದನ್ನೇ ಹಿಂದೀ ಭಾಷೆಯಲ್ಲಿ ' ದುನಿಯಾ ತೋ ಝುಕತೀ ಹೈ. ಲೇಕಿನ್ ಝುಕಾನೇವಾಲಾ ಚಾಹಿಯೇ ' ಎಂದು ಹೇಳುತ್ತಾರೆ. ಮನುಷ್ಯರು ಸಾಮಾನ್ಯವಾಗಿ ಸ್ವಾರ್ಥ-ಪ್ರೇರಿತರಾದುದರಿಂದ ಸಜ್ಜನಿಕೆಯಿಂದಿರುವುದು ದುರ್ಲಭ. ಆದರೆ ಅವ-ರನ್ನು ಬಗ್ಗಿಸುವಂಥ ಸಮರ್ಥರ ಮುಂದೆ ಏನೂ ಮಾತಾಡದೆ ಅವರು ಹೇಳಿದಂತೆ ಬಗ್ಗಿ ನಡೆಯುತ್ತಾರೆ. ಇದು ಲೋಕದ ಸಾಮಾನ್ಯ ಸ್ವಭಾವ. ಆದ್ದರಿಂದ ವಿದ್ಯೆ ಅಥವಾ ಅಧಿಕಾರ ಏನೇ ಇದ್ದರೂ ಕಾರ್ಯ ಮಾಡಿಸಿ-ಕೊಳ್ಳಲು ಅವಶ್ಯವಿದ್ದ ಮಟ್ಟಿಗೆ ದರ್ಪವಿರಲಿಲ್ಲವೆಂದರೆ ಯಾರೂ ಅವರಿಗೆ ವಿಶೇಷ ಬೆಲೆ ಕೊಡುವುದಿಲ್ಲ.

## ೧೯೦. ಅತಿಭಾರಃ ಪುರುಷಮವಸಾದಯತಿ

ಹಣ. ಕೀರ್ತಿ ಇತ್ಯಾದಿ ಯಾವುದೇ ಆಕಾಂಕ್ಷೆಯಿಂದ ತಮ್ಮ ಯೋಗ್ಯ-ತೆಗ ಮೀರಿದ ಹೊಣೆಗಾರಿಕೆಯನ್ನು ಹೊತ್ತುಕೊಳ್ಳುವವರು ಅಥವಾ ಕೆಲಸ ಮಾಡುವವರು ದುಃಖಕ್ಕೀಡಾಗುತ್ತಾರೆ. ಮನುಷ್ಯನ ದೈಹಿಕ ಹಾಗು ಬೌದ್ಧಿಕ ಸಾಮರ್ಥ್ಯಕ್ಕೆ ಒಂದು ಮಿತಿಯಿರುತ್ತದೆ. ವಿಶೇಷವಾಗಿ ವಯ-

ಸ್ಸಾದಂತೆ ಅದು ಕಡಿಮೆಯಾಗುವುದು ಸಹಜ. ಇಂಥ ಪರಿಸ್ಥಿತಿಯಲ್ಲಿ ತಿಳಿ-ದವರು ನಿವೃತ್ತಿಯನ್ನು ಪಡೆಯಬೇಕು. ಎಷ್ಟೇ ಸಾಮರ್ಥ್ಯವಂತರಿಗೂ ಮಿತಿಮೀರಿದ ಕಾರ್ಯಭಾರದಿಂದ ಶರೀರದ ಹ್ರಾಸ ಹಾಗು ಮಾನಸಿಕ ಅಸ್ವಾಸ್ಥ್ಯ ಉಂಟಾಗುತ್ತದೆಂದು ಬೇರೆ ಹೇಳಬೇಕಾಗಿಲ್ಲ.

ಇತ್ತೀಚೆಗೆ ಸೇವಾನಿವೃತ್ತರಾದ ಜನರೂ ಕೂಡ ವೇಳೆ ಹೋಗುವುದಿಲ್ಲ-ವೆಂದು ಪುನಃ ಸರ್ವಿಸ್ ಮಾಡುತ್ತಾರೆ. ಇಂಥ ಪರಿಶ್ರಮದಿಂದಾಗಿ ಆರೋಗ್ಯವಾದರೂ ಕೆಡುತ್ತದೆ ಇಲ್ಲವೆ ಪರಿಶ್ರಮ ಮಾಡದೆ ಸಂಬಳ ಪಡೆ-ದರೆ ಕೈಕೊಂಡ ಕಾರ್ಯಕ್ಕೆ ಅನ್ಯಾಯ ಬಗೆದಂತಾಗುತ್ತದೆ. ಜೀವನದಲ್ಲಿ ಅತಿಯಾಗಿ ಪರಿಶ್ರಮ ಮಾಡುವವರ ಗತಿ, ಅತಿಯಾದ ಭಾರವನ್ನು ಹೊತ್ತ ಮನುಷ್ಯನು ಕುಪ್ಪಳಿಸುವಂತಾಗುತ್ತದೆ ಎಂಬುದೇ ಈ ಸೂತ್ರದ ತಾತ್ಪರ್ಯ. ಈ ಸಂದರ್ಭದಲ್ಲಿ ಅತಿ ಸುಂದರವಾದ ಶ್ಲೋಕವೊಂದನ್ನು ಉದಾಹರಿಸ-ಬಹುದು :

> ವರ್ಷಾರ್ಥಮಷ್ಟೌ ಪ್ರಯತೇತ ಮಾಸಾನ್
> ನಿಶಾರ್ಥಮರ್ಧಂ ದಿವಸೇ ಯತೇತ ।
> ವಾರ್ಧಕ್ಯ ಹೇತೋಃ ವಯಸಾನವೇನ
> ಪರತ್ರ ಹೇತೋರಿಹಜನ್ಮನಾ ಚ ॥

ವರುಷವೆಲ್ಲ ಸುಖಪಡಬೇಕಾದರೆ ಎಂಟುತಿಂಗಳು ಮಾತ್ರ ಪರಿಶ್ರಮ ಮಾಡಬೇಕು. ರಾತ್ರಿಯಲ್ಲಿ ಸುಖವಾಗಿ ನಿದ್ರಿಸಬೇಕಾದರೆ ಹಗಲೆಲ್ಲ ದುಡಿಯ-ಬೇಕು. ಮುಪ್ಪಿನ ಕಾಲದಲ್ಲಿ ಸುಖದಿಂದಿರುವುದಕ್ಕಾಗಿ ಪ್ರಾಯದಲ್ಲಿ ದುಡಿಯಬೇಕು. ಪರಲೋಕದ ಸುಖಕ್ಕಾಗಿ ಇಹಲೋಕದಲ್ಲಿ ಸತ್ಕಾರ್ಯ ಮಾಡಬೇಕು ಎಂದು ಹೇಳುವ ಈ ಶ್ಲೋಕವು ತುಂಬಾ ಬೋಧಪ್ರದ-ವಾಗಿದೆ.

## ೧೯೧. ಯಃ ಸಂಸದಿ ಪರದೋಷಂ ಶಂಸತಿ ಸ ಸ್ವದೋಷಂ ಪ್ರಖ್ಯಾಪಯತಿ

ಇನ್ನೊಬ್ಬರ ದೋಷಗಳನ್ನು ಸಭೆಯಲ್ಲಿ ಎತ್ತಿತೋರಿಸುವವನು ಒಂದು ರೀತಿಯಲ್ಲಿ ತನ್ನ ದೋಷಗಳನ್ನೇ ಪ್ರಕಟಿಸುತ್ತಾನೆ ಎಂದು ಹೇಳುವ ಈ ಮಾತು ಅರ್ಥಗರ್ಭಿತವಾದದ್ದು. ನಿಜವಾಗಿಯೂ ಇದು ಮನುಷ್ಯನ ಛಿದ್ರಾನ್ವೇಷಣ ಪ್ರವೃತ್ತಿ ಹಾಗು ಕ್ಷುದ್ರ ಮನಸ್ಸನ್ನು ಎತ್ತಿತೋರಿಸುತ್ತದೆ. 'ಖಲಃ ಸರ್ಷಪ ಮಾತ್ರಾಣಿ ಪರಛಿದ್ರಾಣಿ ಪಶ್ಯತಿ' ಎಂಬ ಪ್ರಸಿದ್ಧ ಸುಭಾಷಿತವು. ಹೆರವರ ಅತಿ ಸಣ್ಣ ದೋಷಗಳನ್ನು ಬಯಲಿಗೆಳೆಯುವ ದುಷ್ಟರು ತಮ್ಮ ಎಂತಹ ಅಕ್ಷಮ್ಯ ದೋಷಗಳನ್ನು ಕೂಡ ಬಚ್ಚಿಟ್ಟುಕೊಳ್ಳಲು ಅಥವಾ ಯೋಗ್ಯವೆಂದೇ ಸಾಧಿಸಲು ಪ್ರಯತ್ನಿಸುತ್ತಾರೆ—ಎಂದು ಹೇಳುತ್ತದೆ.

ಪಾರ್ಲಿಮೆಂಟಿನಲ್ಲಿಯ ಚರ್ಚೆಯ ಕಾಲಕ್ಕೆ ಇದರ ಅನುಭವವು ನಮಗೆ ಚೆನ್ನಾಗಿ ಬರುತ್ತದೆ. 'ಜನಾನಾಂ ಪೀಯೂಷಂ ಭವತಿ ಗುಣಿನಾಂ ದೋಷಕಣಿಕಾ' ಎಂದರೆ ಒಳ್ಳೆಯವರಲ್ಲಿಯ ಅತಿ ಸಣ್ಣ ದೋಷವು ಕೂಡ ದುಷ್ಟರಿಗೆ ಅಮೃತ ದೊರೆತಷ್ಟು ಆನಂದವನ್ನು ತಂದುಕೊಡುತ್ತದೆ ಎಂದು ಇಲ್ಲಿ ಹೇಳಿದೆ. '**One can share the sufferings of others, but not their joy**' ಎಂಬ ಆಂಗ್ಲ ಭಾಷೆಯಲ್ಲಿಯ ಉಕ್ತಿಯು ಕೂಡ ಮನುಷ್ಯರಲ್ಲಿ ಬೇರೂರಿದ ಅತಿ ಹೀನವಾದ ಮಾತ್ಸರ್ಯಭಾವಕ್ಕೆ ಉದಾಹರಣೆಯಾಗಿದೆ.

## ೧೯೨. ಆತ್ಮಾನಮೇವ ನಾಶಯತ್ಯನಾತ್ಮವತಾಂ ಕೋಪಃ

ಅವಿವೇಕಿಗಳ ಕೋಪವು ಅವರನ್ನೇ ನಾಶಮಾಡುತ್ತದೆ. ಏನೂ ಲಾಭವನ್ನು ತರದೆ ಏನೆಲ್ಲ ಅನರ್ಥಕ್ಕೆ ಗುರಿಮಾಡುವ ಒಂದೇ ವಿಷಯವೆಂದರೆ ಅದು ಕೋಪ. ಇದರಿಂದಾಗಿ ನಮ್ಮ ಬಗೆಗೆ ಒಳ್ಳೆಯ ಭಾವನ

ಇರುವವರು ಕೂಡ ನಮ್ಮ ಆ ವರ್ತನೆಯನ್ನು ಮೆಚ್ಚುವುದಿಲ್ಲ. ವಿರೋಧಿಗಳಿಗಂತೂ ಸೇಡು ತೀರಿಸಿಕೊಳ್ಳಲಿಕ್ಕೆ ಅದೊಂದು ಸಾಧನೆಯಾಗುತ್ತದೆ. ಕಾಮ. ಲೋಭಗಳಲ್ಲಿ ಸ್ವಾರ್ಥಸಾಧನೆಯ ಭ್ರಮೆಯಾದರೂ ಇದ್ದೀತು. ಆದರೆ ಕ್ರೋಧದಂತಹ ಶತ್ರುವು ಮನುಷ್ಯನಿಗೆ ಬೇರೊಂದಿಲ್ಲ.

ವಿವೇಕಿಯ ಸಾತ್ವಿಕ ಕೋಪವು ( **Righteous anger** ) ಮಾತ್ರ ಇದಕ್ಕೆ ಅಪವಾದ. ಅದರಲ್ಲಿ ಸತ್ಯನಿಷ್ಠೆ ಹಾಗು ಅನ್ಯರ ಕಲ್ಯಾಣಗಳು ಅಡಕವಾಗಿರುತ್ತವೆ. ಗುರುಗಳು ಶಿಷ್ಯರನ್ನು ಸುಧಾರಿಸುವುದಕ್ಕಾಗಿ ತೋರುವ ಕೋಪವು ಈ ವರ್ಗದಲ್ಲಿ ಬರುತ್ತದೆ.

## ೧೯೩. ನಾಸ್ತ್ಯಪ್ರಾಪ್ಯಂ ಸತ್ಯವತಾಮ್

ಸತ್ಯವಂತರಿಗೆ ಅಸಾಧ್ಯವಾದದ್ದೇನೂ ಇಲ್ಲ ಎಂದು ಹೇಳುವ ಈ ಸೂತ್ರವು ಸತ್ಯದ ಅಪಾರ ಮಹತ್ವವನ್ನು ಸೂಚಿಸುತ್ತದೆ.

ಸತ್ಯಮೂಲಾನಿ ಧರ್ಮಾಣಿ ಸತ್ಯಾನ್ನಾಸ್ತಿ ಪರಂ ಪದಮ್ ।
ಸತ್ಯೇನ ಲೋಕಾನ್ ಜಯತಿ ಸತ್ಯೇ ಸರ್ವಂ ಪ್ರತಿಷ್ಠಿತಮ್ ॥

ಎಂಬ ಶ್ಲೋಕವು, ಧರ್ಮದ ಮೂಲವೇ ಸತ್ಯ. ಸತ್ಯಕ್ಕಿಂತ ಶ್ರೇಷ್ಠ ಪದವು ಎಲ್ಲಿಯೂ ಇಲ್ಲ. ಸತ್ಯದಿಂದಲೇ ಲೋಕವನ್ನು ಗೆಲ್ಲುವುದು ಸಾಧ್ಯ. ಸತ್ಯದಲ್ಲಿಯೇ ಎಲ್ಲವೂ ಪ್ರತಿಷ್ಠಿತವಾಗಿದೆ—ಎಂದು ಸಾರಿಹೇಳುತ್ತದೆ. ಸತ್ಯವಂತನಿಗೆ ಭಯವಿಲ್ಲ. ಸ್ವಾಮಿ ವಿವೇಕಾನಂದರು ಒಂದು ಪ್ರಸಂಗದಲ್ಲಿ ಮನುಷ್ಯನ ಭಯಂಕರವಾದ ಶತ್ರುವೆಂದರೆ ಹೆದರಿಕೆ ಎಂದು ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು. ಸತ್ಯವಂತನನ್ನು ಅವನ ಶತ್ರುಗಳು ಕೂಡ ಮನಸ್ಸಿನಲ್ಲಿ ಗೌರವಿಸುತ್ತಾರೆ. ಧರ್ಮವು ಸತ್ಯದ ಪ್ರತ್ಯಕ್ಷ ಆಚರಣೆ ಎಂಬ ಮಾತು ಈಗಾಗಲೇ ಬಂದಿದೆ. ಆದ್ದರಿಂದ ಸತ್ಯಕ್ಕೆ ಅಲಭ್ಯವಾದದ್ದೇನೂ ಇಲ್ಲ ಎಂದು ಹೇಳುವ ಮಾತು ತ್ರಿಕಾಲಾಬಾಧಿತ ಸತ್ಯ.

## ೧೯೪. ಸಾಹಸೇ ನ ಕಾರ್ಯಸಿದ್ಧಿರ್ಭವತಿ

' ಸಾಹಸೇ ಪ್ರತಿವಸತಿ ಶ್ರೀಃ ' ಎಂಬ ಲೋಕೋಕ್ತಿಯು ಸಾಹಸ-ದಲ್ಲಿ ಯಶಸ್ಸಿದೆ ಎಂದು ಸಾರಿಹೇಳುವಾಗ ಪ್ರಕೃತ ಸೂತ್ರವು ಸಾಹಸದಿಂದ ಕಾರ್ಯ ಸಿದ್ಧಿಸುವುದಿಲ್ಲ ಎಂದು ಹೇಳಿದರೆ ವಿರೋಧವಾಗುವುದಿಲ್ಲವೇ ಎಂದು ಕೇಳಬಹುದು. ಆದರೆ ಇಲ್ಲಿ ಹೇಳಿದ ಸಾಹಸವು ದೈವಬಲವಿಲ್ಲದ ಸಾಹಸ ಅಥವಾ ಕಾಮ, ಕ್ರೋಧಾದಿಗಳಿಗೆ ತುತ್ತಾಗಿ ತನ್ಮೂಲಕ ಮಾಡುವ ದುಸ್ಸಾ-ಹಸವೆಂದು ಅರ್ಥಮಾಡಬೇಕಾಗುತ್ತದೆ. ಕೊಲೆ. ಸುಲಿಗೆ. ಅತ್ಯಾಚಾರ. ಸ್ತ್ರೀಯರ ಮೇಲಿನ ಬಲಾತ್ಕಾರ—ಇವೆಲ್ಲ ದುಸ್ಸಾಹಸಕ್ಕೆ ಉದಾಹರಣೆ-ಗಳು. ಹಾಗೆಯೇ ಹಲವೊಂದು ದುರ್ವ್ಯಸನಿಗಳು ಎಷ್ಟೇ ಸಾಹಸ ಮಾಡಿ-ದರೂ ತಮ್ಮ ಕರ್ಮದ ಪ್ರಭಾವದಿಂದ ಯಶೋಭಾಗಿಗಳಾಗುವುದಿಲ್ಲ. ಇದಕ್ಕೆ ಬೇಕಾದಷ್ಟು ಉದಾಹರಣೆಗಳು ಸಮಾಜದಲ್ಲಿ ದೊರೆಯುತ್ತವೆ.

## ೧೯೫. ವ್ಯಸನಾರ್ತೋ ವಿಸ್ಮರತ್ಯಪ್ರವೇಶೇನ

ವ್ಯಸನಾರ್ತ ಶಬ್ದಕ್ಕೆ ಇಲ್ಲಿ ದುಃಖದಿಂದ ಬಳಲುವವನು ಎಂದರ್ಥ. ದುಶ್ಚಟಗಳಿಗೆ ಈಡಾದವನು ಎಂಬ ಅರ್ಥವು ಪ್ರಸ್ತುತ ಸಂದರ್ಭದಲ್ಲಿ ಸಮಂಜಸವೆನಿಸುವುದಿಲ್ಲ. ಆದ್ದರಿಂದ ದುಃಖವು, ಅಂಥ ಪ್ರಸಂಗವು ದಾಟಿ-ಹೋದಮೇಲೆ ಕ್ರಮೇಣ ಮರೆತುಹೋಗುತ್ತದೆ ಎಂದು ಈ ಸೂತ್ರವು ಹೇಳುತ್ತದೆ. ಮನಸ್ಸಿನ ಗಾಯವನ್ನು ಮಾಯಿಸಲಿಕ್ಕೆ ಕಾಲಕ್ಕಿಂತ ತೀವ್ರ-ವಾದ ಬೇರೆ ಸಾಧನವಿಲ್ಲ ಎಂದು ಹೇಳುವ ಮಾತಿನ ಅರ್ಥವು ಇದೇ. ದುಃಖವು ಶಾಶ್ವತವಾಗಿದ್ದರೆ ಮನುಷ್ಯನಿಗೆ ಬದುಕುವುದೂ ಸಾಧ್ಯವಾಗ-ಲಾರದು. ತತ್ಕಾಲದಲ್ಲಿ ಮಾತ್ರ ದುಃಖವು ಮನುಷ್ಯನನ್ನು ಕಿಂಕರ್ತವ್ಯತಾ-ಮೂಢನನ್ನಾಗಿಸಿ ಕಾಲಕಳೆಯುವಂತೆ ನಂತರ ಕಾಲಾಂತರದಲ್ಲಿ ಅನುಕೂಲ ಪ್ರಸಂಗಗಳಿಂದಾಗಿ ದುಃಖದ ಮರೆವಾಗುವುದು ಈ ಲೋಕದಲ್ಲಿ ಎಲ್ಲರ ಅನುಭವಕ್ಕೂ ಬರುವ ಮಾತು.

## ೧೯೬. ನಾಸ್ತ್ಯನಂತರಾಯಃ ಕಾಲವಿಕ್ಷೇಪೇ

ವೃಥಾ ಕಾಲಹರಣ ಮಾಡುವುದರಿಂದ ವಿಘ್ನಗಳಿಗೆ ಅವಕಾಶ ಕಲ್ಪಿಸಿ-ಕೊಟ್ಟಂತಾಗುತ್ತದೆ ಎಂದು ಹೇಳುವ ಈ ಸೂತ್ರವು ಇಂದಿನ ಕೆಲಸವನ್ನು ನಾಳೆಗೆ ಹಾಕಬಾರದು ಎಂಬ ನಾಣ್ನುಡಿಯ ಮರ್ಮವನ್ನೇ ಪರ್ಯಾಯ-ವಾಗಿ ಹೇಳುತ್ತದೆ. ಹಿಂದೀ ಭಾಷೆಯಲ್ಲಿ 'ಘಡೀ ಚುಕೆ ತೂ ಬಾರಾ ಬರಸ' ಎಂದರೆ ಕೈಗೆ ಬಂದ ಅವಕಾಶವನ್ನು ತಪ್ಪಿಸಿಕೊಂಡರೆ ಹನ್ನೆರಡು ವರ್ಷ ಕಾಯಬೇಕಾಗುತ್ತದೆ ಎಂದು ಹೇಳುವುದರ ಅರ್ಥವೂ ಇದೇ. ಒಟ್ಟಿನ ಮೇಲೆ ಜಾಣನಾದವನು ಬಾಗಿಲಿಗೆ ಬಂದ ಅವಕಾಶವನ್ನು ಕಳೆದುಕೊಳ್ಳು-ವಂಥ ಮೂರ್ಖತನವನ್ನು ಮಾಡಬಾರದೆಂಬುದೇ ತಾತ್ಪರ್ಯ. ಒದಗಿ ಬಂದ ಅವಕಾಶವನ್ನು ಕಳೆದುಕೊಳ್ಳದೇ ತಮ್ಮ ಹಿತವನ್ನು ಸಾಧಿಸಿಕೊಳ್ಳು-ವುದೇ ವ್ಯಾವಹಾರಿಕ ಜಾಣ್ಮೆ.

## ೧೯೭. ಅಸಂಶಯ ವಿನಾಶಾತ್ ಸಂಶಯಃ ಶ್ರೇಯಾನ್

ಎರಡು ಕಾರ್ಯಗಳು ನಮ್ಮ ಮುಂದೆ ಇದ್ದಾಗ ಅವುಗಳಲ್ಲಿ ಒಂದರ ಪರಿಣಾಮವು ನಿಸ್ಸಂಶಯವಾಗಿ ವಿನಾಶವೆಂದು ತಿಳಿದಾಗ, ಹಾಗೆಯೇ ಇನ್ನೊಂದರ ಪರಿಣಾಮದ ಬಗ್ಗೆ ವಿನಾಶದ ಸಂದಿಗ್ಧತೆ ಇದ್ದಾಗ ಇವೆರಡ-ರಲ್ಲಿಯೂ ಒಂದನ್ನು ಆರಿಸಿಕೊಳ್ಳಲೇಬೇಕಾದ ಅವಶ್ಯಕತೆಯಿದ್ದರೆ ವಿನಾಶದ ಸಂದಿಗ್ಧತೆ ಇದ್ದುದನ್ನೇ ಆರಿಸಿಕೊಳ್ಳುವುದು ಜಾಣತನ. ಏಕೆಂದರೆ ವಿನಾ-ಶದ ನಿಶ್ಚಯವಿದ್ದುದನ್ನು ಕೈಕೊಂಡರೆ ಮರಣವನ್ನೇ ಅಪ್ಪಿಕೊಂಡಂತೆ. ಆದರೆ ವಿನಾಶದ ಸಂಶಯವಿದ್ದಾಗ ಪುರುಷಬುದ್ಧಿಯ ಸಹಾಯದಿಂದ, ದೈವ-ಬಲದಿಂದ ಇಲ್ಲವೆ ಭಗವದನುಗ್ರಹದಿಂದ ಯಶಸ್ಸಿನ ಸಂಭಾವ್ಯತೆಯಾದರೂ ಇರುತ್ತದೆ. ಆದ್ದರಿಂದ ಅದನ್ನೇ ಕೈಕೊಳ್ಳಬೇಕು ಎಂದು ಈ ಸೂತ್ರವು ನಿರ್ಣಯಾತ್ಮಕವಾಗಿ ಹೇಳುತ್ತದೆ.

## ೧೯೮. ಅಪರ ಧನಾನಿ ನಿಕ್ಷೇಪ್ತುಃ ಕೇವಲಂ ಸ್ವಾರ್ಥಮ್

ಜಗತ್ತಿನಲ್ಲಿಯ ಸ್ವಾರ್ಥಿಗಳಲ್ಲಿಯೂ ಹಲವು ಪ್ರಕಾರಗಳಿವೆ. ಇನ್ನೊಬ್ಬರಿಗೆ ಕೆಡಕು ಮಾಡದೆ ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುವುದು ಒಂದು ವರ್ಗ. ಇನ್ನೊಬ್ಬರನ್ನು ಮುರಿದು ತಮ್ಮ ಹಿತವನ್ನು ಸಾಧಿಸಿಕೊಳ್ಳುವವರದು ಇನ್ನೊಂದು ವರ್ಗ. ಈ ಎರಡನೆಯ ವರ್ಗದಲ್ಲಿಯೂ ಎರಡು ಭೇದಗಳು : ಮೊದಲನೆಯದರಲ್ಲಿ ಯಾವನೋ ಬೇರೊಬ್ಬನ ಅಂದರೆ ಸಂಬಂಧವಿಲ್ಲದವನಿಗೆ ಹಾನಿಯನ್ನುಂಟುಮಾಡಿ, ತಮ್ಮ ಹಿತವನ್ನು ಸಾಧಿಸಿಕೊಳ್ಳುವುದು. ಇನ್ನೊಂದರ ಪ್ರಕಾರ ಸಂಬಿದವರ ವಿಶ್ವಾಸಘಾತ ಮಾಡಿ, ತಮ್ಮ ಸ್ವಾರ್ಥವನ್ನು ಈಡೇರಿಸಿಕೊಳ್ಳುವುದು. ಈ ಕೊನೆಯ ವರ್ಗಕ್ಕೆ ಉದಾಹರಣೆಯೆಂದು ಪ್ರಸ್ತುತ ಸೂತ್ರದಲ್ಲಿ ಇನ್ನೊಬ್ಬರ ವಸ್ತು (ಆಭರಣಾದಿಗಳು) ವನ್ನು ಅಡವಿಟ್ಟು ತಮ್ಮ ಹಿತವನ್ನು ಸಾಧಿಸಿಕೊಳ್ಳುವವರು ಸ್ವಾರ್ಥಿಗಳೇ ಸ್ವಾರ್ಥಿಗಳು ಎಂದು ಈ ಸೂತ್ರವು ಕಾವ್ಯಮಯವಾದ ಭಾಷೆಯಲ್ಲಿ ತಿಳಿಯಪಡಿಸುತ್ತದೆ. ಇಂತಹ ಪ್ರಸಂಗಗಳನ್ನು ಆಗಾಗ ನಾವು ಸಮಾಜದಲ್ಲಿ ನೋಡುತ್ತೇವೆ. ಇದು ನಿಂದ್ಯವಾದ ಕರ್ಮವೆಂದು ಬೇರೆ ಹೇಳಬೇಕಾಗಿಲ್ಲ.

## ೧೯೯. ದಾನಂ ಧರ್ಮಃ

ಸದಾಚಾರವೇ ಧರ್ಮವೆಂದು ಮೊದಲನೆಯ ಸೂತ್ರದಲ್ಲಿ ನಿರ್ಣಯಿಸಲಾಗಿದೆ. ಹಾಗೆಯೇ ಪ್ರಕೃತ ಸೂತ್ರದಲ್ಲಿ ದಾನವೇ ಧರ್ಮವೆಂದು ಹೇಳಿದ್ದು, ದಾನವೂ ಸದಾಚಾರದ ಒಂದು ಅಂಗವೇ ಎಂಬುದನ್ನು ಮರೆಯಲಾಗದು. ಆದರೆ ಸತ್ಪಾತ್ರದಲ್ಲಿ ದಾನ ಮಾಡುವುದರಲ್ಲಿ ಮಾತ್ರ ಸಾರ್ಥಕ್ಯ-

ವಿದೆ. ಇಲ್ಲವಾದಲ್ಲಿ ಅದು ನಿಷ್ಫಲವಷ್ಟೇ ಅಲ್ಲ, ದುರಾಚಾರಕ್ಕೆ ಪ್ರೋತ್ಸಾಹನೆಯನ್ನು ಕೊಟ್ಟಂತೆ ಆಗಬಹುದು. ಭಾರತದಲ್ಲಿಯ ಭಿಕ್ಷುಕರ ಸಂಖ್ಯೆಯಲ್ಲಿ ಕಂಡುಬರುವ ಹೆಚ್ಚಳಕ್ಕೆ ಅಪಾತ್ರದಲ್ಲಿ ದಾನಮಾಡುವುದೇ ಕಾರಣ. ಇದು ಧರ್ಮದ ಮರ್ಮವನ್ನು ತಿಳಿದುಕೊಳ್ಳದ್ದರ ಫಲ. ದಾನದ ಫಲವು ಎಲ್ಲಿ ವ್ಯಕ್ತಿಯ ವಿಕಾಸ ಅಥವಾ ಸಮಾಜದ ಅಭ್ಯುದಯದಲ್ಲಿ ಪರಿಣಮಿಸುವುದೋ ಅಂಥ ದಾನವು ಮಾತ್ರ ಧರ್ಮ. ಪರದ್ರವ್ಯವನ್ನು ಅಪಹಿಟ್ಟು ಕಾರ್ಯಸಾಧಿಸಿಕೊಳ್ಳುವುದನ್ನು ಉತ್ತರಧ್ರುವಕ್ಕೆ ಹೋಲಿಸಿದರೆ, ಪರಹಿತಕ್ಕಾಗಿ ದಾನಮಾಡುವುದನ್ನು ದಕ್ಷಿಣಧ್ರುವಕ್ಕೆ ಹೋಲಿಸಬಹುದು.

## ೨೦೦. ದಾನಂ ನಿಧಾನಮನುಗಾಮಿ

ದಾನವು ಧರ್ಮವಾದರೂ ತಮ್ಮ ಯೋಗ್ಯತೆಯನ್ನು ನೋಡಿಕೊಂಡು ದಾನಮಾಡಬೇಕು ಎಂದು ಈ ಸೂತ್ರವು ಬೋಧಿಸುತ್ತದೆ. ಆಯಕ್ಕಿಂತ ವ್ಯಯವು ಎಂದೂ ಹೆಚ್ಚಾಗಿರಬಾರದೆಂದು ಉಪದೇಶಿಸುವ ಚಾಣಕ್ಯನು ಪ್ರಾಧಾನ್ಯತಃ ರಾಜನೀತಿಜ್ಞನಾದುದರಿಂದ ಸರ್ವಸ್ವವನ್ನು ದಾನಮಾಡಿ ಹಾಳಾಗಬಾರದೆಂದು ವ್ಯವಹಾರ ದೃಷ್ಟಿಯಿಂದ ಸೂಚಿಸಿದ್ದಾನೆ. ಇತಿಹಾಸ, ಪುರಾಣಗಳಲ್ಲಿ ದಾನವನ್ನು ಹೊಗಳುವ ಕಥೆಗಳಲ್ಲಿ ಪ್ರಾಣವನ್ನು ಕೂದ ಲೆಕ್ಕಿಸದೆ ದಾನಮಾಡಿದವರ ಉದಾಹರಣೆಗಳೂ ದೊರೆಯುತ್ತವೆ. ಇಲ್ಲಿ ಕರ್ಣನ ದೃಷ್ಟಾಂತವೊಂದೇ ಸಾಕು. ಇವೆಲ್ಲ 'ಅರ್ಥವಾದ' ರೂಪದಲ್ಲಿ ದಾನದ ಮಹತ್ವವನ್ನು ಹೇಳುತ್ತವೆಂದು ವ್ಯವಹಾರಜ್ಞನಾದ ಚಾಣಕ್ಯನು ತಿಳಿದಂತಿದೆ. ಆದ್ದರಿಂದ ಲೌಕಿಕದಲ್ಲಿ ಜೀವನ ಸಾರ್ಥಕ್ಯವನ್ನು ಪಡೆಯಬೇಕಾದವರು 'ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು' ಎಂಬ ತತ್ತ್ವದಂತೆ ತನ್ನ ಯೋಗ್ಯತೆಗೆ ತಕ್ಕಂತೆ ದಾನಮಾಡಬೇಕು ಎಂದು ಉಪದೇಶಿಸಲಾಗಿದೆ. ಸರ್ವಸ್ವವನ್ನು ದಾನಮಾಡಿ ಹೆಂಡಿರು–ಮಕ್ಕಳನ್ನು ಉಪವಾಸಕ್ಕೆ ಈಡುಮಾಡುವುದು ವ್ಯವಹಾರವಲ್ಲ.

## ೨೦೧. ಅತಿ ಶೂರೋ ದಾನಶೂರಃ

ಶೂರರಲ್ಲಿ ಯಾವನು ಹೆಚ್ಚಿನವನೆಂದರೆ ದಾನಶೂರನೇ ಅತಿ ಶೂರನು ಎಂದು ಈ ಸೂತ್ರವು ಹೇಳುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ ಯುದ್ಧದಲ್ಲಿ ಮಡಿಯುವ ಶೂರನಿಗೆ ಮರಣದೊಂದಿಗೆ ಅವನ ವೈಯಕ್ತಿಕ ಸಮಸ್ಯೆಗಳೆಲ್ಲ ಮುಗಿಯುತ್ತವೆ. ಆದರೆ ದಾನಮಾಡುವವನು ತನ್ನ ಸೊತ್ತನ್ನು ಪರರಿಗೆ ಸಮರ್ಪಿಸಿ, ಅದರ ಪರಿಣಾಮವಾಗಿ ಜೀವನದಲ್ಲಿ ಕಷ್ಟ-ಗಳನ್ನದುರಿಸಬೇಕಾಗುತ್ತದೆ. ಹೀಗಾಗಿ ಅವನಿಗೆ ಅತಿ ಶೂರನೆಂದು ಹೇಳುವಲ್ಲಿ ತಥ್ಯವಿದೆ.

## ೨೦೨. ನ ದಾನ ಸಮಂ ವಶ್ಯಮ್

ಇನ್ನೊಬ್ಬರನ್ನು ವಶಮಾಡಿಕೊಳ್ಳಲಿಕ್ಕೆ ದಾನದಂತಹ ಬೇರೊಂದು ಉಪಾಯವಿಲ್ಲ ಎಂದು ಹೇಳುವ ಈ ಸೂತ್ರವು ತ್ಯಾಗದ ಮಹತಿಯನ್ನೇ ಬೇರೆ ಶಬ್ದಗಳಲ್ಲಿ ತಿಳಿಸುತ್ತದೆ. ದಾನ ಸ್ವೀಕರಿಸುವವನು ದಾನಿಗಳಿಗೆ ಋಣ-ಯಾಗಿರಬೇಕಾದುದರಿಂದ ಅದಕ್ಕೆ ಸಮಾನವಾದ ದಾಸ್ಯವಿಲ್ಲ ಎಂದು ಹೇಳ-ಲ್ಪಡುತ್ತದೆ.

## ೨೦೩. ನಾರ್ಥಾಗತಃ ಅರ್ಥವದ್ ವಿಪರೀತೋ ವಾ ಅನರ್ಥಭಾವಃ

ಧರ್ಮಕ್ಕೆ ವಿರೋಧವಾಗದಂತೆ ಗಳಿಸಿದ ಹಣ, ಅರ್ಥ. ಅದಕ್ಕೆ ವಿರುದ್ಧವಾದದ್ದು ಅನರ್ಥ. ಇದನ್ನೇ 'ತದ್ವಿಪರೀತ' ಎಂಬ ಪದ-ಪ್ರಯೋಗದ ಮೂಲಕ ಈ ಸೂತ್ರವು ವಿವರಿಸುತ್ತದೆ. ಆದ್ದರಿಂದ ಪ್ರಸ್ತುತ

ಸೂತ್ರವು ಸನ್ಮಾರ್ಗದಿಂದ ಬಾರದೇ ಇದ್ದದ್ದು ಅಥವಾ ಸಾಕ್ಷಾತ್ ದುರ್ವ್ಯವ-ಹಾರದಿಂದ ಗಳಿಸಿದ ಹಣವು ( Black money ) ಅನರ್ಥಕ್ಕೀಡುಮಾಡು-ತ್ತದೆ ಎಂಬ ಸಿದ್ಧಾಂತವನ್ನು ಸಾರುತ್ತದೆ.

## ೨೦೪. ಯೋ ಧರ್ಮಾರ್ಥೌ ನ ವಿವರ್ಧಯತಿ ಸ ಕಾಮಃ

ಯಾವ ಕಾರ್ಯದ ಪರಿಣಾಮವು ಧರ್ಮಾಭಿವೃದ್ಧಿಯಲ್ಲಿ ಪರಿಣಮಿ-ಸುವುದಿಲ್ಲವೋ ಹಾಗೆಯೇ. ಅರ್ಥಾರ್ಜನೆಗೂ ಎಡೆಮಾಡಿಕೊಡುವುದಿಲ್ಲವೋ ಅದು ಕಾಮ ( ಪ್ರೇರಿತ )ವೆಂದು ಈ ಸೂತ್ರವು ತಿಳಿಯಪಡಿಸುತ್ತದೆ. ಸಾಮಾನ್ಯವಾಗಿ ಕಾಮವೆಂದರೆ ಕೇವಲ ಸ್ತ್ರೀಸುಖವಲ್ಲ. ಪಂಚೇಂದ್ರಿಯ-ಗಳಿಗೆ ಸಂಬಂಧಪಟ್ಟ ಭೋಗಗಳೆಲ್ಲ ಕಾಮದ ವಿಭಿನ್ನ ರೂಪಗಳೇ. ಆದ್ದ-ರಿಂದ ಧರ್ಮಾರ್ಥಗಳಿಗೆ ವಿರೋಧ ಬಾರದಂಥ ಕಾಮವು ತ್ಯಾಜ್ಯವಾಗಿರ-ದಿದ್ದರೂ ( ಧರ್ಮಾರ್ಥಾ ವಿರೋಧೇನ ಕಾಮಂ ಸೇವೇತ ) ತದ್ವಿರುದ್ಧ-ವಾದದ್ದು ಅನರ್ಥಕ್ಕೆ ಕಾರಣವಾಗುತ್ತದೆ. ಆದನ್ನೇ ಮುಂದಿನ ಸೂತ್ರ-ದಲ್ಲಿ—

## ೨೦೫. ತದ್ವಿರುದ್ಧೋ ಅನರ್ಥಸೇವೀ

ಧರ್ಮಾರ್ಥಗಳಿಗೆ ವಿರುದ್ಧವಾಗಿ ಕಾಮಸೇವನೆ ಮಾಡುವವನು ಅನರ್ಥಕ್ಕೀಡಾಗುತ್ತಾನೆ ಎಂದು ಹೇಳಲಾಗಿದೆ. ಕಾಮವು ಸರ್ವಥಾ ತ್ಯಾಜ್ಯ-ವಲ್ಲ. ಆದರೆ ಯಾವ ಪ್ರಸಂಗಗಳಲ್ಲಿ ತ್ಯಾಜ್ಯವೆಂಬುದನ್ನು ತಿಳಿಯಪಡಿಸು-ವುದೇ ಈ ಸೂತ್ರದ ಮೂಲೋದ್ದೇಶ.

## ೨೦೬. ಋಜುಸ್ವಭಾವ ಪರೋ ಜನೇಷು ದುರ್ಲಭಃ

ಸಮಾಜದಲ್ಲಿ ಸರಳ ಸ್ವಭಾವದ ವ್ಯಕ್ತಿಗಳು ದೊರೆಯುವುದು ದುರ್ಲಭ. ಈ ಮಾತು ಶಾಶ್ವತ ಸತ್ಯವೆಂದೆನ್ನಲು ಅಡ್ಡಿಯಿಲ್ಲ. ಸ್ವಾರ್ಥದಿಂದ ಪ್ರೇರಿತನಾಗಿರುವುದು ಮನುಷ್ಯನ ಸಾಮಾನ್ಯ ಸ್ವಭಾವ. ಅದರಲ್ಲಿ ಹಲವರಿಗೆ ಹೆಚ್ಚು ಸ್ವಾರ್ಥವಿದ್ದರೆ, ಬೇರೆಯವರಿಗೆ ಕಡಿಮೆ ಇರಬಹುದು. ಆದರೆ ಎಷ್ಟು ಸ್ವಾರ್ಥವಿಲ್ಲದ ಕೇವಲ ಪರಹಿತಕ್ಕಾಗಿಯೇ ಜೀವನ ಸಾಗಿಸುವ ಮಹಾತ್ಮರು ದೊರೆಯುವುದು ಅಪರೂಪ. ಇದೇ ಮಾತನ್ನು ಮನುವು " ದುರ್ಲಭೋ ಹಿ ಶುಚಿರ್ನರಃ " ಎಂಬ ಶಬ್ದಗಳಲ್ಲಿ ಸ್ಪಷ್ಟಪಡಿಸಿದ್ದಾನೆ. ಈ ಸೂತ್ರವು ಚಾಣಕ್ಯನ ಮನುಷ್ಯನ ಸ್ವಭಾವ ಪರೀಕ್ಷಣಾ ಶಕ್ತಿಯನ್ನು ಎತ್ತಿತೋರಿಸುತ್ತದೆ. ವ್ಯಾಪಾರಿಯು ಗಿರಾಕಿಗಳನ್ನು, ರೈತರು ಭೂ ಮಾಲಿಕರನ್ನು, ಬೇರೆಬೇರೆ ವೃತ್ತಿಯಲ್ಲಿರುವವರು ತಮ್ಮ ಲಾಭಕ್ಕಾಗಿ ಇತರರನ್ನು ಮೋಸಗೊಳಿಸುವುದು ಇವಕ್ಕೆಲ್ಲ ದೃಷ್ಟಾಂತ.

## ೨೦೭. ಅವಮಾನೇನಾಗತಮೈಶ್ವರ್ಯಂ ಅವಮನ್ಯತೆ ಸಾಧುಃ

ಒಳ್ಳೆಯ ಮನುಷ್ಯನು ಅವಮಾನವನ್ನು ಸಹಿಸಿ ದೊರೆಯಬಹುದಾದ ಐಶ್ವರ್ಯಕ್ಕಾಗಿ ಹಾತೊರೆಯುವುದಿಲ್ಲ. ಅವನಿಗೆ ಉಪವಾಸ ಬೀಳದಷ್ಟು ಮಾತ್ರ ಹಣ ದೊರೆತರೆ ಸಾಕು. ಅದರಿಂದ ತೃಪ್ತಿಗೊಂಡು, ಹೆಚ್ಚು ಹಣಕ್ಕಾಗಿ ಅಪಮಾನಕ್ಕೀಡಾಗುವುದನ್ನು ಬಯಸುವುದಿಲ್ಲ. ಈ ಸೂತ್ರವು ಮನುಷ್ಯನಲ್ಲಿ ಅವಶ್ಯವಾಗಿರಬೇಕಾದ ತೃಪ್ತಿ ಹಾಗೂ ಸ್ವಾಭಿಮಾನ ಎಂಬ ಎರಡು ಗುಣಗಳ ಮಹತ್ವವನ್ನು ಬೋಧಿಸುತ್ತದೆ. ಇನ್ನೂ ಎಷ್ಟೋ ಸದ್ಗುಣಗಳು ಮನುಷ್ಯನಲ್ಲಿರಬೇಕಾದದ್ದು ಅವಶ್ಯವಾಗಿದ್ದರೂ ಈ ಎರಡು ಗುಣಗಳು ಮಾತ್ರ ಅತ್ಯವಶ್ಯವೆಂಬುದೇ ಈ ಸೂತ್ರದ ಅಭಿಪ್ರಾಯ. ಇ

ಹೇಳಿದ ಸ್ವಾಭಿಮಾನದಲ್ಲಿ ಅಹಂಕಾರ ಅಥವಾ ಗರ್ವದ ಲವಲೇಶವೂ ಕೂಡ ಇರಕೂಡದೆಂಬುದನ್ನು ಮರೆಯಲಾಗದು.

## ೨೦೮. ಬಹೂನಪಿ ಗುಣಾನ್ ಏಕ ದೋಷೋ ಗ್ರಸತಿ

ಮನುಷ್ಯನಲ್ಲಿ ಅದೆಷ್ಟೋ ಸದ್ಗುಣಗಳಿದ್ದು ಒಂದೇ ಒಂದು ದೋಷವಿದ್ದರೂ ಕೂಡ ಅದು ಅವನ ಗುಣಗಳನ್ನೆಲ್ಲ ನುಂಗುತ್ತದೆ ಎಂಬೀ ಸೂತ್ರವು ದೋಷಗಳನ್ನು ಅಳಿಸಿಹಾಕಲಿಕ್ಕೆ ಪ್ರಯತ್ನಿಸಬೇಕೆಂಬುದನ್ನೇ ಎತ್ತಿತೋರಿಸುತ್ತದೆ. ಸದ್ಗುಣಗಳನ್ನು ಬೆಳೆಸಿಕೊಳ್ಳುವುದು ಒಳ್ಳೆಯ ಜೀವನದ ಒಂದು ಮುಖವಾದರೆ, ದೋಷಗಳನ್ನು ಹೋಗಲಾಡಿಸುವುದು ಇನ್ನೊಂದು ಮುಖ. ಪೂರ್ಣ ನಿರ್ದೋಷವಾಗಿರುವುದು ಪರಬ್ರಹ್ಮನ ಲಕ್ಷಣ. ಆದ್ದರಿಂದ ತಾತ್ಪರ್ಯದಲ್ಲಿ ಈ ಸೂತ್ರವು ಶಕ್ಯವಿದ್ದ ಮಟ್ಟಿಗೆ ದೋಷಗಳನ್ನು ಅಳಿಸಿಹಾಕಬೇಕೆಂದು ಉಪದೇಶಿಸುತ್ತದೆ ಎನ್ನುವುದೇ ಹೆಚ್ಚು ಯೋಗ್ಯವೆಂದೆನ್ನಿಸುತ್ತದೆ. ನಿರ್ದೋಷರಾಗಿರುವವರು ಲಕ್ಷಕ್ಕೆ ಒಬ್ಬರು ಕೂಡ ದೊರೆಯುವುದು ಅಪರೂಪ.

## ೨೦೯. ಮಹಾತ್ಮನಾಪರೇಣ ಸಾಹಸಂ ನ ಕರ್ತವ್ಯಮ್

ಸಜ್ಜನರು ಸಾಮಾನ್ಯರೊಂದಿಗೆ ಸಾಹಸಕ್ಕಿಳಿಯಬಾರದು. ಇಲ್ಲಿ ಸಾಮಾನ್ಯ ಶಬ್ದಕ್ಕೆ ದೊಡ್ಡವರ ವ್ಯಕ್ತಿತ್ವವನ್ನು ಅರಿತುಕೊಳ್ಳದಷ್ಟರ ಮಟ್ಟಿಗೆ ಸ್ವಾರ್ಥಪ್ರೇರಿತರಾದ ಸಮಾಜದಲ್ಲಿಯ ಜನರು ಎಂದು ಅರ್ಥಮಾಡುವುದು ಯೋಗ್ಯ. ಇವರು ಬುದ್ಧಿಹೇಳಲು ಹೋದವರ ಅಪಮಾನ ಮಾಡಲು ಹೇಸುವುದಿಲ್ಲ. ತಮ್ಮ ನಿಲುವು ತ್ರಿಕಾಲದಲ್ಲಿಯೂ ಯೋಗ್ಯ-

ವಾದದ್ದರಿಂದ ಉಳಿದವರಿಗೆ ಗೌರವ ಕೊಡುವ ಆವಶ್ಯಕತೆಯಿಲ್ಲ ಎಂಬ ಭ್ರಮೆಯಲ್ಲಿ ಇವರು ಎಂಥ ಅಕಾರ್ಯಕ್ಕೂ ಹೇಸುವುದಿಲ್ಲ. ಆದ್ದರಿಂದ ಮಹಾತ್ಮರು ಇದನ್ನೆಲ್ಲ ಅರಿತು ತಮ್ಮ ಗೌರವವನ್ನು ಕಾಯ್ದುಕೊಳ್ಳುವುದಕ್ಕಾಗಿ ಇಂಥವರೊಡನೆ ಸಾಹಸಕ್ಕಿಳಿಯಕೂಡದು—ಎಂದು ಪ್ರಸ್ತುತ ಸೂತ್ರವು ತಿಳಿಯಪಡಿಸುತ್ತದೆ. ರೈಲು ಹಾಗು ಬಸ್ಸುಗಳಲ್ಲಿ ಪ್ರವಾಸ ಮಾಡುವಾಗ ದೊಡ್ಡವರಿಗೆ ಹಾಗು ಒಳ್ಳೆಯವರಿಗೆ ಆಗುವ ತೊಂದರೆಗಳು ಇದಕ್ಕೆಲ್ಲ ದೃಷ್ಟಾಂತಗಳು.

## ೨೧೦. ಕದಾಚಿದಪಿ ಚರಿತ್ರಂ ನ ಲಂಘಯೇತ್

ತತ್ವನಿಷ್ಠರಾದ ಸತ್ಪುರುಷರು ತಮ್ಮ ಚಾರಿತ್ರ್ಯವನ್ನು ಎಂದೂ ಉಲ್ಲಂಘಿಸಬಾರದು. ಹಣ, ಅಧಿಕಾರ ಇತ್ಯಾದಿಗಳ ಮೋಹದಿಂದಾಗಿ ತಮ್ಮ ಚಾರಿತ್ರ್ಯವನ್ನು ಕಳೆದುಕೊಳ್ಳುವುದು ಕ್ಷುದ್ರರ ಲಕ್ಷಣ. ಇಂಗ್ಲೀಷ್ ಭಾಷೆಯಲ್ಲಿ ' If wealth is lost, nothing is lost. If health is lost, something is lost. If character is lost, everything is lost ' ಎಂದು ಹೇಳುವುದರ ಮರ್ಮವೂ ಇದೇ. ಐಶ್ವರ್ಯ ಹೋದರೂ ಪುನಃ ಗಳಿಸಬಹುದು. ಆರೋಗ್ಯ ಕೆಟ್ಟರೆ ಔಷಧೋಪಚಾರಗಳಿಂದ ಸುಧಾರಿಸಬಹುದು. ಆದರೆ ಚಾರಿತ್ರ್ಯವನ್ನು ಕಳೆದುಕೊಂಡ ಮನುಷ್ಯನು ಸತ್ತಂತೆಯೇ. ದೇಹವಿದ್ದರೂ ಗೌರವವನ್ನು ಕಳೆದುಕೊಂಡರೆ ಯಶಸ್ಸು ನಾಶವಾಗಿ, ಚೇತನ ಶರೀರಕ್ಕೆ ಅಪಕೀರ್ತಿಯನ್ನು ತಂದೊಡ್ಡುತ್ತದೆ. ರೊಟ್ಟಿಯ ತುಂಡಿಗಾಗಿ ಹಾತೊರೆಯುವ ನಾಯಿಗೂ, ಸ್ವಾರ್ಥಕ್ಕಾಗಿ ಸ್ವಾಭಿಮಾನವನ್ನು ಮಾರಿಕೊಂಡ ಚರಿತ್ರಹೀನನಿಗೂ ಏನೂ ಭೇದವಿಲ್ಲವೆನ್ನುವುದೇ ತಾತ್ಪರ್ಯ. ಇದಕ್ಕೆ ದೃಷ್ಟಾಂತರೂಪವಾಗಿ ಮುಂದಿನ ಸೂತ್ರವು—

## ೨೧೧. ಕ್ಷುಧಾರ್ಥೋ ನ ತೃಣಂ ಚರತಿ ಸಿಂಹಃ

ಸಿಂಹವು ಹಸಿದರೂ ಹುಲ್ಲು ತಿನ್ನುವುದಿಲ್ಲ. ಆನೆ ಅಥವಾ ಮೃಗದ ಬೇಟೆಯಾಡುವುದೇ ಅದರ ಯೋಗ್ಯತೆಗೆ ತಕ್ಕುದಾದುದರಿಂದ ಉಪವಾಸ ಬಿದ್ದರೂ ಕ್ಷುದ್ರಕೃತಿಗೆ ಅದು ಕೈಹಾಕಲಾರದು.

## ೨೧೨. ಪ್ರಾಣಾದಪಿ ಪ್ರತ್ಯಯೋ ರಕ್ಷಿತವ್ಯಃ

ಆದ್ದರಿಂದ ಮನುಷ್ಯನು ಪ್ರಾಣವನ್ನು ತೆತ್ತಾದರೂ ತನ್ನ ಪತ್ತು ಕಾಯ್ದುಕೊಳ್ಳಬೇಕು ಎಂದು ಈ ಸೂತ್ರವು ನಿರ್ಧರಿಸುತ್ತವೆ. ಮೃಚ್ಛಕಟಿಕ ನಾಟಕದಲ್ಲಿ ಚಾರುದತ್ತನು 'ನ ಭೀತೋ ಮರಣಾತ್ ಅಸ್ಮಿ ಕೇವಲಂ ದೂಷಿತಂ ಯಶಃ' ನಾನು ಮರಣಕ್ಕೆ ಎಂದೂ ಹೆದರಿಲ್ಲ. ಆದರೆ ಅಪ-ಕೀರ್ತಿಗೆ ಹೆದರುತ್ತೇನೆ ಎಂದು ಹೇಳಿದ್ದರ ಮರ್ಮವೂ ಇದೇ.

## ೨೧೩. ಪಿಶುನಃ ಶ್ರೋತಾ ಪುತ್ರದಾರೈರಪಿ ತ್ಯಜ್ಯತೇ

ಚಾಡಿಹೇಳುವವರನ್ನು ಅಥವಾ ಕೇಳುವವರನ್ನು ಅವರ ಹೆಂಡತಿ, ಮಕ್ಕಳು ಕೂಡ ಮೆಚ್ಚುವುದಿಲ್ಲ. ಅರ್ಥಾತ್ ಅಂಥವರನ್ನು ದೂರವಿದು-ತ್ತಾರೆ ಎಂದು ಪ್ರಸ್ತುತ ಸೂತ್ರವು ಹೇಳುತ್ತದೆ. ಮನುಷ್ಯನಲ್ಲಿರುವ ಅನೇಕ ದುರ್ಗುಣಗಳಲ್ಲಿ ಚಾಡಿಹೇಳುವುದು ಅಥವಾ ಕೇಳುವುದು ಅತಿ ಕೀಳು-ಮಟ್ಟದ್ದು. ಜನರು ತಮ್ಮ ಹಿತವನ್ನು ಸಾಧಿಸಿಕೊಳ್ಳುವುದಕ್ಕಾಗಿ ಇಂಥವ-ರನ್ನು ಉಪಯೋಗಿಸಿಕೊಳ್ಳುತ್ತಾರೆ. ಸ್ವಾಭಿಮಾನವಿಲ್ಲದ ಕ್ಷುದ್ರ ವ್ಯಕ್ತಿಯು ಮಾತ್ರ ಇಂಥ ಸ್ವಭಾವವನ್ನು ಹೊಂದಿರುತ್ತಾನೆ. ಇದರಿಂದ ಅವನಿಗೆ ಲಾಭವಂತೂ ಏನೂ ಇಲ್ಲ. ಆದರೆ ಸಮಾಜದಿಂದ ಹೀನನೆನಿಸಿಕೊಂಡು

ಭಾರ್ಯಾ, ಪುತ್ರಾದಿಗಳಿಗೂ ಕೂಡ ಬೇಸರವಾಗುತ್ತಾನೆ. ಇಂಥ ನೀಚನನ್ನು ಹತ್ತಿರ ಕರೆದು ಚಾಡಿ ಕೇಳುವವನು ಕೂಡ ಸ್ವಂತ ವಿಚಾರಶಕ್ತಿಯಿಲ್ಲದ ಕ್ಷುದ್ರ ಮಾನವನೆನಿಸಿಕೊಳ್ಳುತ್ತಾನೆ. ಕ್ಷುದ್ರರ ಸಹವಾಸ ಬಯಸುವವನು ಕ್ಷುದ್ರನಲ್ಲದೇ ಮತ್ತಾರು ?

## ೨೧೪. ಬಾಲಾದಪ್ಯರ್ಥ ಜಾತಂ ಶೃಣುಯಾತ್

ರಾಜ್ಯದ ವಿಸ್ತಾರ ಹಾಗು ವಿಷಯಗಳ ವೈವಿಧ್ಯದಿಂದಾಗಿ ರಾಜ್ಯಕಾರ್ಯವು ಪ್ರತ್ಯಕ್ಷ, ಪರೋಕ್ಷ, ಅನುಮಾನಗಳ ಆಧಾರದಿಂದ ನಡೆಯುತ್ತದೆಂದು ಈ ಹಿಂದೆ ವಿವರಿಸಲಾಗಿದೆ. ಅದಕ್ಕಾಗಿ ಮಂತ್ರಿ, ಸಚಿವ ಹಾಗು ಆಡಳಿತಗಾರರು ಇವರೆಲ್ಲರ ಸಹಾಯವು ರಾಜನಿಗೆ ಅವಶ್ಯವಾದದ್ದು. ಹೀಗೆ ಅನೇಕ ಪ್ರಸಂಗಗಳಲ್ಲಿ ಇನ್ನೊಬ್ಬರ ಸಲಹೆಯನ್ನು ಕೇಳಬೇಕಾದಾಗ ಯೋಗ್ಯವಾದ ಸಲಹೆಯನ್ನು ಒಬ್ಬ ಚಿಕ್ಕ ಬಾಲಕನು ಕೊಟ್ಟರೂ ಕೂಡ ಅದನ್ನು ಮನ್ನಿಸಬೇಕು ಎಂದು ಪ್ರಸ್ತುತ ಸೂತ್ರವು ಬೋಧಿಸುತ್ತದೆ. ಏಕೆಂದರೆ ಸಲಹೆಯ ಔಚಿತ್ಯವು ಮಹತ್ವವಾದದ್ದೇ ವಿನಃ ಅದನ್ನು ಕೊಡುವ ಮನುಷ್ಯನ ವಯಸ್ಸು ಮಹತ್ವದಲ್ಲ. ಈ ವಿಷಯದಲ್ಲಿ ಒಂದು ಅತ್ಯಂತ ಉದ್ಬೋಧಕವಾದ ಸುಭಾಷಿತವಿದೆ :

> ಯುಕ್ತಿಯುಕ್ತಂ ವಚೋ ಗ್ರಾಹ್ಯಂ ಬಾಲಾದಪಿ ಶುಕಾದಪಿ ।
> ಯುಕ್ತಿಹೀನಂ ವಚಸ್ತ್ಯಾಜ್ಯಂ ವೃದ್ಧಾದಪಿ ಶುಕಾದಪಿ ॥

ಸಮಂಜಸವಾದ ಮಾತನ್ನು ಹುಡುಗನೇ ಹೇಳಲಿ, ಗಿಳಿಯೇ ಹೇಳಲಿ ಅದರಂತೆ ನಡೆದು ಯುಕ್ತಿಹೀನವಾದ ಮಾತನ್ನು ವೃದ್ಧ ಅಥವಾ ಜ್ಞಾನನಿಧಿಯೆನಿಸಿಕೊಂಡ ವ್ಯಾಸಮಹರ್ಷಿಗಳ ಮಗನಾದ ಶುಕಾಚಾರ್ಯನೇ ಹೇಳಿದರೂ ಅದನ್ನು ಸ್ವೀಕರಿಸಬಾರದು.

## ೨೧೫. ಸತ್ಯಮಪ್ಯಶ್ರದ್ಧೇಯಂ ನ ವದೇತ್

ನಂಬಲಿಕ್ಕೆ ಅಯೋಗ್ಯವಾದ ಸತ್ಯವನ್ನು ಕೂಡ ಪ್ರಕಟಗೊಳಿಸಬಾರದು ಎಂದು ಈ ಸೂತ್ರವು ಉಪದೇಶಿಸುತ್ತದೆ. ಸತ್ಯವೇ ಧರ್ಮ ಎಂದು ಹೇಳುವ ಚಾಣಕ್ಯನು ಹೀಗೇಕೆ ಇಲ್ಲಿ ಹೇಳಿದ್ದಾನೆಂದು ಅನಿಸಬಹುದು. ಇದಕ್ಕೆ ಮುಖ್ಯ ಕಾರಣವೆಂದರೆ ನಂಬಲು ಸಾಧ್ಯವಿಲ್ಲದ ಸತ್ಯವನ್ನು ಉಸುರಿದರೆ ತತ್ಕಾಲಕ್ಕಾದರೂ ಜನರು ಅದನ್ನು ನಂಬದೆ, ಹೇಳಿದವನು ಅಪಹಾಸ್ಯಕ್ಕೀಡಾಗುವ ಸಾಧ್ಯತೆ ಇರುತ್ತದೆ. ಆದ್ದರಿಂದ ಅಂಥ ಸತ್ಯವು ತಾನೇ ಹೊರಗೆ ಬರುವ ವರೆಗೆ ಸುಮ್ಮನಿರುವುದು ಯೋಗ್ಯ. ವ್ಯವಹಾರದೃಷ್ಟಿಯಲ್ಲಿ ಇದು ಯೋಗ್ಯವಾದದ್ದೆಂದು ಒಪ್ಪಿಕೊಳ್ಳಬೇಕಾಗುತ್ತದೆ.

## ೨೧೬. ನಾಲ್ಪದೋಷಾತ್ ಬಹುಗುಣಾಃ ತ್ಯಜ್ಯಂತೇ

ಅಲ್ಪದೋಷದಿಂದಾಗಿ ಬಹುಗುಣವುಳ್ಳ ವಸ್ತುವನ್ನಾಗಲಿ, ಕಾರ್ಯವನ್ನಾಗಲಿ ತ್ಯಜಿಸಬಾರದು. ಆ ವಸ್ತುವಿನ ಗುಣಗಳಿಂದಾಗಿ ನಮಗಾಗುವುದಾವ ಲಾಭದ ಕಡೆಗೆ ನೋಡಬೇಕೇ ಹೊರತು ಏಕೈಕ ದೋಷದಿಂದಾಗುವ ಹಾನಿಯನ್ನೇ ಮುಂದೆ ಮಾಡಬಾರದು. ಅರ್ಥಾತ್ ಬಹಳ ಲಾಭವಾಗುವುದನ್ನು ಒಂದು ಕ್ಷುಲ್ಲಕ ದೋಷದಿಂದಾಗಿ ಬಿಡಬಾರದು ಎಂದು ಹೇಳುವ ಈ ಸೂತ್ರವು ವ್ಯಾವಹಾರಿಕ ದೃಷ್ಟಿಯಿಂದ ಯೋಗ್ಯವಾದದ್ದೇ. ಉದಾಹರಣೆಗಾಗಿ - ಒಂದು ಸಣ್ಣ ದೋಷದಿಂದಾಗಿ ಸದ್ಗುಣಿಯಾದ ಕನ್ಯೆಯನ್ನು ವರಿಸದೇ ಇರುವುದು ಮೂರ್ಖತನ. ಇನ್ನೂ ಅಲ್ಲದೆ—

## ೨೧೭. ವಿಪಶ್ಚಿತ್ಸ್ವಪಿ ಸುಲಭಾ ದೋಷಾಃ

ವಿದ್ವಾಂಸರಿಂದ ಕೂಡ ದೋಷಗಳು ಸಂಭವಿಸುವುದು ಸಾಧ್ಯ. ಪರಿಪೂರ್ಣತೆಯು ಪರಬ್ರಹ್ಮನ ಲಕ್ಷಣವೇ ಹೊರತು ಮನುಷ್ಯರದಲ್ಲ. ಆದ್ದ-

ರಿಂದ ದೋಷವರ್ಜಿತ ವ್ಯಕ್ತಿ ಇಲ್ಲವೆ ಕಾರ್ಯ ಎಲ್ಲಿಯೂ ದೊರೆಯಲಾರದು. ಜಾಣನಾದವನು ದೋಷವನ್ನು ಬದಿಗಿಟ್ಟು, ಗುಣಗಳ ಲಾಭ ಪಡೆಯಬೇಕಾದುದು ಅವಶ್ಯ. ಉದಾಹರಣೆಗೆಂದು—

## ೨೧೮. ನಾಸ್ತಿ ರತ್ನಮಖಂಡಿತಮ್

ರತ್ನದಲ್ಲಿ ಕೂಡ ತೂತು ಹೊಡದಿರುತ್ತದೆಂದು ಅದನ್ನು ಯಾರೂ ತಿಪ್ಪೆಯಲ್ಲಿ ಒಗೆಯುವುದಿಲ್ಲ. ಆದ್ದರಿಂದ ದೋಷಗಳ ಅನಿವಾರ್ಯತೆಯನ್ನು ಅರಿತು ವಾಸ್ತವಿಕ ದೃಷ್ಟಿಯನ್ನು ಅಳವಡಿಸಿಕೊಂಡು ವ್ಯವಹರಿಸುವುದು ಧರ್ಮ.

## ೨೧೯. ಮರ್ಯಾದಾತೀತಂ ನ ಕದಾಚಿದಪಿ ವಿಶ್ವಸೇತ್

ಲೋಕದ ಮರ್ಯಾದೆಯನ್ನು ಮೀರಿ ನಡೆಯುವವನನ್ನು ನಂಬಲಾಗದು ಎಂದು ಈ ಸೂತ್ರವು ಹೇಳುತ್ತದೆ. ಲೋಕದಲ್ಲಿ ವ್ಯವಹರಿಸುವುದಕ್ಕಾಗಿ ಪರಂಪರಾಗತವಾಗಿ ಕೆಲವೊಂದು ರೀತಿ-ರಿವಾಜುಗಳು ಬಂದಿರುತ್ತವೆ. ಇದಕ್ಕೇ ನಾಲ್ಕು ಜನ ನಡೆದುಕೊಂಡಂತೆ ನಡೆಯುವುದು ಎಂದು ಹೇಳುವುದು ವಾಡಿಕೆ. ಲೋಕವಿರುದ್ಧವಾಗಿ ನಡೆದುಕೊಳ್ಳಬಾರದೆಂದು ಹೇಳುವುದೂ ಇದಕ್ಕಾಗಿಯೇ. 'ಮರ್ಯಾದಾತೀತ' ಎಂಬ ಶಬ್ದವು ಪ್ರಸ್ತುತ ಸೂತ್ರದಲ್ಲಿ ಲೋಕವಿರುದ್ಧವಾಗಿ ನಡೆದುಕೊಳ್ಳುವ ಸ್ವೇಚ್ಛಾಚಾರಿ ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಸಮಾಜದ ಪರಿವೆಯಿಲ್ಲದ ಸ್ವೇಚ್ಛಾಚಾರಿಯಾಗಿ ಅಭಕ್ಷ್ಯ ಭಕ್ಷಣ, ಅಪೇಯ ಪಾನ, ಅಗಮ್ಯ ಗಮನ ಇತ್ಯಾದಿ ನಿಂದ್ಯ ಕಾರ್ಯಗಳಲ್ಲಿ ಪ್ರವೃತ್ತನಾದವನಲ್ಲಿ ಸ್ವಾರ್ಥಕ್ಕಿಂತಲೂ ಹೆಚ್ಚಾಗಿ ಉನ್ಮತ್ತತೆ ಹಾಗು ಔದ್ಧತ್ಯದಂಥ ದುರ್ಗುಣಗಳು ಎದ್ದುಕಾಣುತ್ತವೆ. ಇದ-

ನಿಗೆ ದೇವಧರ್ಮಗಳ ಭಯ, ಅನೀತಿಯ ಬಗ್ಗೆ ತಿರಸ್ಕಾರ, ಸಮಾಜದ ವಿಷಯವಾಗಿ ಪರಿವೆಯಿರುವುದಿಲ್ಲ. ಆದ್ದರಿಂದ ಇಂಥವನನ್ನು ನಂಬುವುದು ಸರ್ವನಾಶಕ್ಕೆ ಕಾರಣವೆಂದು ಇಲ್ಲಿ ತಿಳಿಯಪಡಿಸಲಾಗಿದೆ.

ಲೋಕೋತ್ತರ ಚರಿತ್ರತೆ ಎಂಬ ಬೇರೊಂದು ಶಬ್ದಪ್ರಯೋಗವಿದ್ದು, ಅದಕ್ಕೂ ಲೋಕವಿರುದ್ಧ ಶಬ್ದಕ್ಕೂ ಏನೂ ಸಂಬಂಧವಿಲ್ಲವೆಂಬ ದನ್ನು ನಾವಿಲ್ಲಿ ಗಮನಿಸಬೇಕು. ಸ್ವಾಮಿ ವಿವೇಕಾನಂದ, ರಾಮಕೃಷ್ಣ ಪರಮಹಂಸ, ಅರವಿಂದ ಘೋಷರಂತಹರು ಲೋಕೋತ್ತರ ಚರಿತ್ರರು. ಇವರೆಲ್ಲ ಗೌರ-ವಾಸ್ಪದರು, ಪೂಜ್ಯರು ಎಂದು ಬೇರೆ ಹೇಳಬೇಕಾಗಿಲ್ಲ. ನಿರ್ಲಜ್ಜನಾದ ಮರ್ಯಾದಾತೀತನ ವಿಷಯದಲ್ಲಿ ಮಾತ್ರ ಈ ಸೂತ್ರವಿದೆ.

## ೨೨೦. ಅಪ್ರಿಯಕೃತಂ ಪ್ರಿಯಮಪಿ ದ್ವೇಷಂ ಭವತಿ

ಅಪ್ರಿಯ ಮನುಷ್ಯಗೆ ಎಂದರೆ ಯಾರಿಗೆ ನಮ್ಮ ವಿಷಯಕ್ಕೆ ಸೇರಿಕೆ ಇರುವುದಿಲ್ಲವೋ ಅಂಥವನಿಗೆ ನಾವು ಹಿತವನ್ನು ಮಾಡಿದರೂ ಅವನು ಸರಿಯಾಗಿ ಅರ್ಥಮಾಡಿಕೊಳ್ಳದೆ ಅದರಲ್ಲಿ ದ್ವೇಷವನ್ನೇ ಹುಡುಕುತ್ತಾನೆ. ಹೀಗಾಗಿ ನಮ್ಮನ್ನು ಯಾವಾಗಲೂ ತಿರಸ್ಕಾರದಿಂದಲೇ ನೋಡುತ್ತಾನೆ. ಹೆಂಡತಿಯ ಸೇರಿಕೆಯಿಲ್ಲದ ಗಂಡ ಅಥವಾ ಗಂಡನನ್ನು ಸೇರದ ಹೆಂಡತಿಯಲ್ಲಿ ಇಂಥ ಪ್ರವೃತ್ತಿಯು ಕಂಡುಬರುವುದನ್ನು ನಾವು ಗುರುತಿಸಬಹುದು. ಇನ್ನೊಬ್ಬರು ನಮಗೆ ಮಾಡಿದ್ದು ಒಳ್ಳೆಯದೋ ಹೇಗೆ ಎಂದು ವಿಚಾರ ಮಾಡದಷ್ಟರ ಮಟ್ಟಿಗೆ ಅಪ್ರಿಯತೆ ಬೇರೂರಿದ್ದರಿಂದ ಅದರ ಪರಿಣಾಮವು ತಿರಸ್ಕಾರದ ರೂಪದಲ್ಲಿ ಪ್ರಕಟವಾಗುತ್ತದೆ.

## ೨೨೧. ನಮಂತ್ಯಪಿ ತುಲಾಕೋಟಿಃ ಕೂಪೋದಕ-ಕ್ಷಯಂ ಕರೋತಿ

ಬೆಳೆಗಳಿಗೆ ನೀರು ಹಾಯಿಸುವಾಗ ಬಾವಿಯಲ್ಲಿಯ ನೀರನ್ನು ಬಾಗಿ

ತುಂಬಿಕೊಳ್ಳುವ ಮಟ್ಟೆಯು ( ಬಕೆಟ್ಟು ) ಬಾವಿಯನ್ನು ಬರಿದಾಗಿಸುತ್ತದೆ ಎಂಬ ದೃಷ್ಟಾಂತದ ಮೂಲಕ ಮೇಲಿನ ಸೂತ್ರದ ಅರ್ಥವನ್ನು ವಿವರಿಸಲು ಸೂತ್ರಕಾರನು ಇಲ್ಲಿ ಪ್ರಯತ್ನಿಸಿದ್ದಾನೆ. ಕವಿಯ ಧಾಟಿಯಲ್ಲಿ ನೀರಿನತ್ತ ಬಾಗುವುದು ಅಪ್ರಿಯನಿಗೆ ತೋರಿದ ಪ್ರೀತಿಯೆಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಂತೆ ತೋರುತ್ತದೆ. ಆದರೂ ದೃಷ್ಟಾಂತವು ಅಷ್ಟು ಮಾರ್ಮಿಕವೆನಿಸುವುದಿಲ್ಲ.

## ೨೨೨. ಸತಾಂಮತಂ ನಾತಿಕ್ರಮೇತ್

ವಿದ್ವಾಂಸರಾದ ಸಜ್ಜನರ ಸಲಹೆ ಅಥವಾ ಅಭಿಪ್ರಾಯವನ್ನು ಎಂದೂ ತಿರಸ್ಕರಿಸಬಾರದೆಂದು ಪ್ರಸ್ತುತ ಸೂತ್ರವು ಉಪದೇಶಿಸುತ್ತದೆ. ಕೇವಲ ವಿದ್ವಾಂಸರಲ್ಲಿ ಸ್ವಾರ್ಥವಿರಬಹುದು. ಕೇವಲ ಒಳ್ಳೆಯವರಲ್ಲಿ ಶಾಸ್ತ್ರಾನುಭವವಿರದಾಗ ವಿಚಾರದ ಪರಿಪಕ್ವತೆ ಇಲ್ಲದಿರಬಹುದು. ಆದರೆ ವಿದ್ಯೆ ಹಾಗು ಸದಾಚಾರ ಎರಡರಿಂದಲೂ ಭೂಷಿತರಾದವರಲ್ಲಿ ಲೋಕಕಲ್ಯಾಣದ ಭಾವನೆ ಇರುತ್ತದೆ. ಹೀಗಾಗಿ ಅವರ ಸಲಹೆಯಲ್ಲಿ ಸ್ವಾರ್ಥಕ್ಕೆ ಎಷ್ಟೂ ಅವಕಾಶವಿರದ್ದರಿಂದ ಕೇವಲ ಪರಹಿತಕ್ಕಾಗಿಯೇ ಅವರು ಹೇಳುತ್ತಿದ್ದಾರೆಂಬುದನ್ನು ನಂಬಿ ಸಮಾಜವು ಅವರನ್ನು ಗೌರವಿಸಬೇಕು.

ಮಹಾಕವಿ ಕಾಳಿದಾಸನು ತನ್ನ ಅಮರಕೃತಿಯಾದ ಶಾಕುಂತಲದ ಭರತವಾಕ್ಯದಲ್ಲಿ ' ಸರಸ್ವತೀ ಶ್ರುತಮಹತಾಂ ಮಹೀಯತಾಮ್ ' ಎಂದರೆ ಬಲ್ಲವರ ಮಾತಿಗೆ ಬೆಲೆ ಇರಲಿ ಎಂದು ಭಗವಂತನಲ್ಲಿ ಪ್ರಾರ್ಥಿಸಿದ್ದಾನೆ. ವಿಚಿತ್ರವೆಂದರೆ, ಈಗ ಬಲ್ಲವರ ಮಾತಿಗೆ ಬೆಲೆಯಿಲ್ಲದಾಗಿದೆ. ಬಹುಜನ ಸಮಾಜ, ದಲಿತರ ಪೋಷಣೆ, ಹಿಂದುಳಿದವರ ಕಲ್ಯಾಣ—ಇತ್ಯಾದಿ ಬಣ್ಣದ ಮಾತುಗಳನ್ನಾಡಿ ಒಳ್ಳೆಯವರನ್ನು ಹೀಯಾಳಿಸುವುದು ಒಂದು ಫ್ಯಾಶನ್ನಾಗಿಬಿಟ್ಟಿದೆ.

## ೨೨೩. ಗುಣವದಾಶ್ರಯಾತ್ ನಿರ್ಗುಣೋಽಪಿ ಗುಣೀಭವತಿ

ಸದ್ಗುಣಿಗಳ ಆಶ್ರಯದಲ್ಲಿರುವುದರಿಂದ ಗುಣಹೀನರು ಕೂಡ ಸದ್ಗುಣಿಗಳಾಗುವರು ಎಂದು ಹೇಳುವ ಈ ಸೂತ್ರವು ಸತ್ಸಂಗದ ಮಹತ್ವವನ್ನು ಬೋಧಿಸುತ್ತದೆ. ತಾಯಿ–ತಂದೆಗಳ ರಕ್ತದ ಗುಣವು ಮಕ್ಕಳಲ್ಲಿ ಬರುವುದೇನೋ ನಿಜ. ಆದರೆ ದೊಡ್ಡವರಾದ ಮೇಲೆ ಸಮಾಜದಲ್ಲಿ ಅನೇಕರ ಸಂಪರ್ಕವು ಬರುವುದು ಅನಿವಾರ್ಯ. ಅದರ ಪ್ರಭಾವ ಹೆಚ್ಚಾದರೆ ಒಮ್ಮೊಮ್ಮೆ ರಕ್ತಗತವಾಗಿ ಬಂದ ಗುಣಗಳಿಗಿಂತ ಅವೇ ಪ್ರಭಾವಿಯಾಗುತ್ತವೆ. ಆದ್ದರಿಂದ ಒಳ್ಳೆಯ ಸಹವಾಸದಲ್ಲಿರುವುದು ಶ್ರೇಯಸ್ಕರವಾದದ್ದು. ಎಷ್ಟೋ ಒಳ್ಳೆಯ ಜನರು ಕೇವಲ ಸಹವಾಸದ ಪ್ರಭಾವದಿಂದಾಗಿ ದುಶ್ಚಟಗಳಿಗೆ ಈಡಾಗಿ ಹಾಳಾದುದನ್ನು ನಾವು ನೋಡುತ್ತೇವೆ. ಸತ್ಸಂಗವೇ ಮನುಷ್ಯಜೀವನಕ್ಕೆ ಸಾರ್ಥಕ್ಯವನ್ನು ತಂದುಕೊಡುವುದು ಎಂದು ಹೇಳಿ, ಮುಂದಿನ ಮೂರು ಸೂತ್ರಗಳಲ್ಲಿ ಈ ಸಿದ್ಧಾಂತವನ್ನು ಸಮರ್ಥಿಸುವ ಉದಾಹರಣೆಗಳನ್ನು ಕೊಡಲಾಗಿದೆ.

## ೨೨೪. ಕ್ಷೀರಾಶ್ರಿತ ಜಲಂ ಕ್ಷೀರಮೇವ ಭವತಿ

ನೀರು ಹಾಲಿನ ಸಂಪರ್ಕದಿಂದ ಹಾಲೇ ಅನಿಸಿಕೊಳ್ಳುತ್ತದೆ. ಆದ್ದರಿಂದ ಹಾಲಿನಲ್ಲಿ ನೀರು ಬೆರೆಸಿ ಮಾರಾಟ ಮಾಡುವವರು ಹಾಲಿನ ದರವನ್ನೇ ನೀರಿಗೂ ಪಡೆಯುತ್ತಾರೆ. ಇದು ಹಾಲಿನ ಸಂಪರ್ಕದ ಪ್ರಭಾವ.

## ೨೨೫. ಮೃತ್ಪಿಂಡೋಽಪಿ ಪಾಟಲೀ ಗಂಧಮುತ್ಪಾದಯತಿ

ಮಣ್ಣಿನ ಮುದ್ದೆಯಲ್ಲಿ ಪಾಟಲೀ ಪುಷ್ಪದ ಪರಾಗವು ಬೆರೆತರೆ ಮಣ್ಣೂ ಕೂಡ ಸುಗಂಧಮಯವಾಗುತ್ತದೆ. ಇದೂ ಸಂಪರ್ಕದ ಪ್ರಭಾವವೇ.

## ೨೨೬. ರಜತಂ ಕನಕಸಂಪರ್ಕಾತ್ ಕನಕಂ ಭವತಿ

ಬಂಗಾರದಲ್ಲಿ ಬೆಳ್ಳಿಯನ್ನು ಬೆರಿಸಿ ಆಭರಣಗಳನ್ನು ತಯಾರಿಸಿದರೆ ಅವು ಬಂಗಾರದ ಆಭರಣಗಳೇ ಎನಿಸಿಕೊಳ್ಳುತ್ತವೆ. ಇದು ಸುವರ್ಣದ ಸಂಪರ್ಕದ ಪ್ರಭಾವ.

## ೨೨೭. ಉಪಕರ್ತುರಪಕರ್ತುಮಿಚ್ಛತ್ಯಬುಧಃ

ಅವಿವೇಕಿಯು ಉಪಕಾರ ಮಾಡಿದವನಿಗೆ ಕೇಡುಬಗೆಯಲು ಬಯಸುತ್ತಾನೆ. ಇದು ಅಪ್ಪಟ ದುಷ್ಟರಲಕ್ಷಣ. ಅವರ ದುರ್ಬುದ್ಧಿ. ತಮ್ಮ ಕಲ್ಯಾಣವನ್ನು ಸಾಧಿಸಿದ ಮಾತ್ರಕ್ಕೆ ತೃಪ್ತಿಹೊಂದುವುದಿಲ್ಲ. ಉಳಿದವರು ಸಂತೋಷ-ಸಮಾಧಾನಗಳಿಂದಿರದೆ, ಒಂದಿಲ್ಲ ಒಂದು ಆಪತ್ತಿನಿಂದ ಬಳಲುತ್ತಿರಬೇಕೆಂದು ಇವರ ಕ್ಷುದ್ರ ಮನಸ್ಸು ಬಯಸುತ್ತಿರುತ್ತದೆ. ಆದ್ದರಿಂದ ಪರರಿಗೆ ಉಪಕಾರ ಮಾಡಿಯಾಗಲೀ ಅವರು ಚಡಪಡಿಸುತ್ತಿರುವಂತೆ ಮಾಡಬೇಕೆಂಬುದು ಇವರ ಅಪೇಕ್ಷೆ.

## ೨೨೮. ನ ಪಾಪಕರ್ಮಣಾಂ ಆಕ್ರೋಶ ಭಯಮ್

ಪಾಪಕಾರ್ಯನಿರತರಾದವರು ಅರ್ಥಾತ್ ಮೇಲಿನ ಸೂತ್ರದಲ್ಲಿ ವರ್ಣಿಸಲ್ಪಟ್ಟವರು ನಿಂದೆಗೆ ಎಂದೂ ಹೆದರುವುದಿಲ್ಲ. ಉಪಕಾರ ಮಾಡಿದಂಥವರಿಗೆ ನಾವು ಅಪಕಾರ ಬಗೆದರೆ ಜನರು ನಮಗೆ ಏನೆಂದಾರು ? ಸಮಾಜದಲ್ಲಿ ನಮಗೆ ಮರ್ಯಾದೆ ಸಿಗಲಿಕ್ಕಿಲ್ಲ—ಹೀಗೆಲ್ಲ ವಿವೇಕಪ್ರಪೂರ್ಣ ವಿಚಾರಗಳು ಅವರಲ್ಲಿ ಮೂಡುವುದಿಲ್ಲ. ಅಂತೆಯೇ ಅವರು ನಿರ್ಲಜ್ಜರು, ನಿಂದೆಗೆ ಹೆದರದವರು ಆಗಿರುತ್ತಾರೆಂಬುದು ಸೂತ್ರಕಾರನ ಅಭಿಪ್ರಾಯ.

## ೨೨೯. ಅವಿಶ್ವಸ್ತೇಷು ವಿಶ್ವಾಸೋ ನ ಕರ್ತವ್ಯಃ

ನಂಬಿಗೆಗೆ ಅಯೋಗ್ಯರಾದ ದುಷ್ಟರಲ್ಲಿ ವಿಶ್ವಾಸವನ್ನೆಂದೂ ಇಡಬಾರದು. ತಮ್ಮ ಸ್ವಾರ್ಥಕ್ಕಾಗಿ ಅವರು ಹಲವು ಸಲ ಸವಿಮಾತುಗಳನ್ನಾಡಬಹುದು. ಒಳ್ಳೆಯವರೆಂದು ನಂಬಿಗೆಯನ್ನು ಹುಟ್ಟಿಸುವ ಸಲುವಾಗಿ ಹಾವಭಾವ, ಕ್ರಿಯೆಗಳ ಮೂಲಕ ಮನ ಸೆಳೆದುಕೊಳ್ಳಲು ಯತ್ನಿಸಬಹುದು. ಇಂಥ ನಾಟಕೀಯತೆಗೆ ಬಲಿಬೀಳದೆ ಅಂಥವರಿಂದ ದೂರವಿರಬೇಕೆಂಬುದೇ ಪ್ರಸ್ತುತ ಸೂತ್ರದ ತಾತ್ಪರ್ಯ. ಏಕೆಂದರೆ—

## ೨೩೦. ವಿಷಂ ವಿಷಮೇವ ಸಾರ್ವಕಾಲಮ್

ವಿಷವು ಯಾವಾಗಲೂ ವಿಷವಾಗಿಯೇ ಉಳಿಯುವಂತೆ ದುಷ್ಟನು ತನ್ನ ಸ್ವಭಾವವನ್ನು ಎಂದೂ ಬಿಡಲಾರನೆಂಬ ಶಾಶ್ವತ ಸತ್ಯವನ್ನು ಈ ಸೂತ್ರವು ತಿಳಿಯಪಡಿಸುತ್ತದೆ. ಬೇವಿನಲ್ಲಿ ಬೆಲ್ಲವನ್ನು ಬೆರೆಸಲಿ ಅಥವಾ ಹಾಗಲಕಾಯಿಯ ತರಕಾರಿಗೆ ಬೇಕಾದಷ್ಟು ಸಂಸ್ಕಾರ ಮಾಡಲಿ, ಅದು ತನ್ನ ಕಹಿತನವನ್ನು ಬಿಡಲಾರಂತೆ ಇರುತ್ತದೆ—ಈ ದುಷ್ಟರ ಸ್ವಭಾವ.

## ೨೩೧. ಅರ್ಥಸಮಾದಾನೇ ವೈರಿಣಾಂ ಸಂಗ ಏವ ನ ಕರ್ತವ್ಯಃ

ಸಂಪದಭಿವೃದ್ಧಿಗೆ ಸಂಬಂಧಿಸಿದ ಯೋಜನೆಗಳಲ್ಲಿ ಶತ್ರುವಿನ ಸಹಕಾರ ಹಾಗು ಸಂಬಂಧಗಳು ಎಷ್ಟೂ ಇರಬಾರದು ಎನ್ನುವ ಈ ಸೂತ್ರವು, ಶತ್ರುವು ಯಾವಾಗಲೂ ಶತ್ರುವೇ. ತನ್ನ ಸ್ವಾರ್ಥಕ್ಕಾಗಿ ಯಾವಾಗಲಾದರೊಮ್ಮೆ ಮೈತ್ರಭಾವವನ್ನು ಮೇಲೆ-ಮೇಲೆ ಪ್ರಕಟಿಸಿದಂತೆ ತೋರಬಹುದು. ಆದರೆ

ಅದು ಎಂದಿಗೂ ಹಾರ್ದಿಕ ಮೈತ್ರಿ ಆಗಿರಲಾರದು. ಆದ್ದರಿಂದ ಶಾಶ್ವತ ಕಲ್ಯಾಣಕಾರೀ ಆರ್ಥಿಕ ಯೋಜನೆಗಳಲ್ಲಿ ಶತ್ರುವಿನ ಸಂಬಂಧವನ್ನು ಇಟ್ಟು-ಕೊಳ್ಳಲಾಗದು. ಭಾರತವು ಪಾಕಿಸ್ತಾನದೊಂದಿಗೆ ಮೈತ್ರೀ ವಿಚಾರವನ್ನು ಮಾಡುವಾಗ, ಚಾಣಕ್ಯನ ಈ ಉಪದೇಶವನ್ನು ನೆನಪಿನಲ್ಲಿಡಬೇಕು.

## ೨೩೨. ಅರ್ಥಸಿದ್ಧೌ ವೈರಿಣಂ ನ ವಿಶ್ವಸೇತ್

ಕಾರ್ಯಸಿದ್ಧಿಯ ವಿಷಯದಲ್ಲಿ ಶತ್ರುವನ್ನು ಎಂದಿಗೂ ನಂಬಲಾಗದು ಎಂದು ಹೇಳುವ ಈ ಸೂತ್ರವು ಹಿಂದಿನ ಸೂತ್ರಕ್ಕೆ ಅಂಗವಾಗಿದೆ. ಈ ಎರಡೂ ಸೂತ್ರಗಳಲ್ಲಿ ಶತ್ರು ಶಬ್ದಕ್ಕೆ ನೈಸರ್ಗಿಕ ಶತ್ರು ಎಂದು ಅರ್ಥ ಮಾಡುವುದು ಯೋಗ್ಯ. ನೆರೆಯ ರಾಜರು ಇಂಥ ಶತ್ರುವರ್ಗದಲ್ಲಿ ಬರುತ್ತಾರೆಂದು ಈಗಾಗಲೇ ಚರ್ಚಿಸಲಾಗಿದೆ. ಸಾಮಾನ್ಯವಾಗಿ ನೈಸರ್ಗಿಕ ಶತ್ರುಗಳಲ್ಲಿ ಒಬ್ಬನ ಹಿತವು ಇನ್ನೊಬ್ಬನ ಅಹಿತವೇ ಆಗಿರುವುದರಿಂದ. ಒಬ್ಬನ ಕಾರ್ಯಸಿದ್ಧಿಸಿದರೆ ಇನ್ನೊಬ್ಬನಿಗೆ ಹಾನಿಯೇ. ಆದ್ದರಿಂದ ಶತ್ರುವನ್ನು ನಂಬ-ಕೂಡದು ಎಂದು ಉಪದೇಶಿಸಲ್ಪಟ್ಟಿದೆ.

## ೨೩೩. ಅರ್ಥಾಧೀನ ಏವ ನಿಯತಸಂಬಂಧಃ

ರಾಜಕೀಯದಲ್ಲಿ ಸಂಬಂಧ ಬೆಳೆಯಬೇಕಾದರೆ ಸ್ವಹಿತವೇ ಮುಖ್ಯ ಕಾರಣ. ಆದ್ದರಿಂದ ಪರಸ್ಪರರಲ್ಲಿ ಮೈತ್ರೀಭಾವ ಉಂಟಾಗಬೇಕಾದರೆ ಕೈಕೊಂಡ ಕಾರ್ಯದಿಂದ ಉಭಯತರಿಗೂ ಲಾಭವಿರಬೇಕು. ಇದು ಇಬ್ಬ-ರಿಗೂ ಸಮಾನ ಶತ್ರುವಿದ್ದಾಗ ಮಾತ್ರ ಸಾಧ್ಯ. ಇದೇ ಅರ್ಥಾಧೀನತೆ. ಇದನ್ನು ಈ ಸೂತ್ರವು. ಯಾರೇ ಇಬ್ಬರಲ್ಲಿ ನಿಶ್ಚಿತ ಸಂಬಂಧವುಂಟಾಗಬೇಕಾ-

ವರೆ 'ಪರಸ್ಪರ ಹಿತಾಸಕ್ತಿಯೇ ಅವಕ್ಕೆ ಮೂಲವೆಂದು ಸ್ಪಷ್ಟಪಡಿಸುತ್ತದೆ. ಬಾಂಗ್ಲಾದೇಶದ ಸ್ಥಾಪನೆಯ ಕಾಲಕ್ಕೆ ಪಾಕಿಸ್ತಾನದ ವಿರುದ್ಧ ಭಾರತ ಹಾಗು ಬಾಂಗ್ಲಾ ಆಳುವಳಿಗಾರರಲ್ಲಿ ಇಂಥ ಸಂಬಂಧ ಉತ್ಪನ್ನವಾದುವಕ್ಕೆ ಪರಸ್ಪರ ಹಿತವೇ ಕಾರಣವೆಂದು ಬೇರೆ ಹೇಳಬೇಕಾಗಿಲ್ಲ.

## ೨೩೪. ಯಾವತ್ ಶತ್ರೋಃ ಛಿದ್ರಂ ಪಶ್ಯತಿ ತಾವತ್ ಹಸ್ತೇನ, ಸ್ಕಂಧೇನ ವಾ ವಾಹ್ಯಃ

ಶತ್ರುವಿನ ಮೇಲೆ ಯಾವಾಗಲೂ ದ್ವೇಷವನ್ನು ಕಾರುತ್ತಲೇ ಇರುವ ಆವಶ್ಯಕತೆಯಿಲ್ಲ. ರಾಜಕಾರಣದಲ್ಲಿ ಶತ್ರುವಿನ ದೌರ್ಬಲ್ಯ (Weak points) ಕಂಡುಬರುವ ವರೆಗೆ ಅರ್ಥಾತ್ ಅವಕಾಶ ದೊರೆಯುವ ವರೆಗೆ ಅವನನ್ನು ಹೆಗಲಮೇಲೆ ಕುಳ್ಳಿರಿಸಿಕೊಳ್ಳಬಹುದು ಎಂದು ಕವಿಗಳ ಧಾಟಿಯಲ್ಲಿ ಈ ಸೂತ್ರವು ಹೇಳಲ್ಪಟ್ಟಿದೆ. ಆದರೆ ಮುಂದಿನ ಸೂತ್ರದಲ್ಲಿ—

## ೨೩೫. ಶತ್ರುಂ ಛಿದ್ರೇ ಪ್ರಹರೇತ್

ಶತ್ರುವಿನ ನ್ಯೂನತೆಗಳ ಅರಿವಾದೊಡನೆ ಅಂದರೆ ಅವನು ಪೇಚಿನ ಪ್ರಸಂಗಗಳಲ್ಲಿ ಸಿಕ್ಕಾಗ ಹಣ್ಣುಮಾಡಬೇಕು ಎಂದು ಹೇಳಲಾಗಿದೆ. ಸಾಧ್ಯವಿದ್ದ ಮಟ್ಟಿಗೆ ಮುಂದೆ ಅವನಿಂದ ತಮಗೆ ಎಂದೂ ಬಾಧೆಯಾಗದಂತೆ ಕೈಕಟ್ಟಿಬಿಡಬೇಕು. ಇಲ್ಲವೆ ನಾಶಮಾಡಬೇಕು ಎಂಬುದು ಸೂತ್ರಕಾರನ ಅಭಿಪ್ರಾಯವಿದ್ದಂತೆ ತೋರುತ್ತದೆ.

## ೨೩೬. ಹಸ್ತಗತಮಪಿ ಶತ್ರುಂ ನ ವಿಶ್ವಸೇತ್

ಪ್ರಸ್ತುತ ಸೂತ್ರದಲ್ಲಿ ಶತ್ರುವು ಕೈಸೆರೆ ಸಿಕ್ಕಿದ್ದರೂ ಕೂಡ ಅವನನ್ನು

ಪೂರ್ಣ ನಂಬಲಾಗದು ಎಂದು ಉಪದೇಶಿಸಲಾಗಿದೆ. ಏಕೆಂದರೆ ಕೈಸೆರೆ ಸಿಕ್ಕಾಗ ಅವನು ತನ್ನ ಅವಸಾನವಂತೂ ಸಮೀಪಿಸಿದೆ—ಎಂದು ಬಗೆದು ಹತಾಶ ಭಾವನೆಯಿಂದ ವಿಜಿಗೀಷುವಿಗೆ ಕೇಡು ಮಾಡಬಹುದು ಎಂದು ತಿಳಿಸಿ, ಮುಂಜಾಗ್ರತೆಯಿಂದಿರಲು ಎಚ್ಚರಿಸಿರುವುದು ಸೂತ್ರಕಾರನ ದೂರದರ್ಶಿತ್ವ-ವನ್ನು ಸೂಚಿಸುತ್ತದೆ.

## ೨೩೭. ಶತ್ರೋರಪಿ ಸುತಃ ಸಖಾ ರಕ್ಷಿತವ್ಯಃ

ಒಂದುವೇಳೆ ಶತ್ರುವಿನ ಮಗನು ಮೈತ್ರಿಯನ್ನು ಬಯಸಿ, ತನ್ನ ತಂದೆಗೆ ವಿರುದ್ಧನಾಗಿ ವಿಜಿಗೀಷುವಿನೆಡೆಗೆ ಬಂದರೆ ಅವನನ್ನು ರಕ್ಷಿಸಬೇಕೆಂದು ಪ್ರಸ್ತುತ ಸೂತ್ರವು ತಿಳಿಯಪಡಿಸುತ್ತದೆ. ಇದಕ್ಕೆ ಕಾರಣ ಶತ್ರುವಿನ ಶತ್ರುವು ತನ್ನ ಮಿತ್ರನೆಂಬ ಸಿದ್ಧಾಂತ. ಆದರೆ ಯಾವುದೇ ವ್ಯವಹಾರವನ್ನಾಗಲೀ ತುಂಬಾ ಜಾಗ್ರತೆಯಿಂದ ಮಾಡಬೇಕೆಂಬುದು ಚಾಣಕ್ಯನ ಮೂಲ ಸಿದ್ಧಾಂತ.

## ೨೩೮. ಆತ್ಮಛಿದ್ರಂ ನ ಪ್ರಕಾಶಯೇತ್

ಶತ್ರುವಿನ ಛಿದ್ರಗಳನ್ನು ತಿಳಿದುಕೊಳ್ಳುವುದಕ್ಕೆ ಶತಪ್ರಯತ್ನ ಮಾಡ-ಬೇಕಾದದ್ದು ಹೇಗೆ ವಿಜಿಗೀಷುವಿನ ಕರ್ತವ್ಯವೋ ಹಾಗೆಯೇ ತನ್ನ ಛಿದ್ರ-ಗಳು ಇನ್ನೊಬ್ಬರಿಗೆ ಗೊತ್ತಾಗದಂತೆ ಜಾಗ್ರತೆ ವಹಿಸುವುದೂ ಅವನ ಪರಮ ಕರ್ತವ್ಯವೆಂದು ಈ ಸೂತ್ರವು ತಿಳಿಯಪಡಿಸುತ್ತದೆ. ಇದು ವಿಜಿಗೀಷುವಿನ ಸೂಕ್ಷ್ಮಬುದ್ಧಿ, ಕಾರ್ಯನೈಪುಣ್ಯ ಹಾಗು ಸದಾಕಾಲವೂ ಸಾವಧಾನದಿಂದ ಇರುವ ಪ್ರವೃತ್ತಿ ಇವುಗಳನ್ನವಲಂಬಿಸಿರುತ್ತದೆ ಎಂದು ಬೇರೆ ಹೇಳಬೇಕಾ-ಗಿಲ್ಲ. ರಾಜ್ಯಶಾಸ್ತ್ರವನ್ನು ಎಲ್ಲರೂ ಅಭ್ಯಾಸಮಾಡಿದರೂ ಕೂಡ ವ್ಯಕ್ತಿಗತ ಕಾರ್ಯನೈಪುಣ್ಯದಿಂದಾಗಿಯೇ ಎಲ್ಲೆಡೆಯಲ್ಲಿಯೂ ಯಶಸ್ಸು ದೊರೆಯು-ವುದು ಸಾಧ್ಯವೆಂಬುದೇ ಶಾಶ್ವತ ಸತ್ಯ.

## ೨೩೯. ಛಿದ್ರಪ್ರಹಾರಿಣಃ ಶತ್ರವಃ

ಮೇಲಿನ ಸೂತ್ರದಲ್ಲಿಯ ಉಪದೇಶಕ್ಕೆ ಆಧಾರವೆಂದರೆ ಶತ್ರುಗಳು ಯಾವಾಗಲೂ ನಮ್ಮ ನ್ಯೂನತೆ ಹಾಗು ಛಿದ್ರಗಳನ್ನು ಕಾಯುತ್ತಲೇ ಇರುತ್ತಾರೆ. ಅವು ಗೊತ್ತಾದ ಕ್ಷಣಕ್ಕೆ ಪ್ರಹಾರ ಮಾಡುತ್ತಾರೆಂಬುದರಲ್ಲಿ ಸಂಶಯವಿಲ್ಲ. ಆದ್ದರಿಂದ ಅದಕ್ಕೆ ಆಸ್ಪದ ಕೊಡಕೂಡದು.

## ೨೪೦. ಸ್ವಜನಸ್ಯ ದುರ್ವೃತ್ತಂ ನಿವಾರಯೇತ್

ನಮ್ಮವರ ಅರ್ಥಾತ್ ಯಾರ ಕಲ್ಯಾಣದಲ್ಲಿ ನಮಗೆ ಆಸಕ್ತಿ ಇರುವುದೋ ಅಂಥವರಲ್ಲಿಯ ದುರಾಚಾರವನ್ನು ಹೋಗಲಾಡಿಸಲಿಕ್ಕೆ ಪ್ರಯತ್ನಿಸಬೇಕು ಎಂದು ಮಾರ್ಗದರ್ಶನ ಮಾಡುವ ಈ ಸೂತ್ರವು ಪರ್ಯಾಯವಾಗಿ ಅಂಥವರನ್ನು ಸನ್ಮಾರ್ಗದಲ್ಲಿ ಪ್ರವೃತ್ತಿಸಬೇಕು ಎಂದು ಹೇಳುತ್ತದೆ. ' ಇಷ್ಟಂ ಧರ್ಮೇಣ ಯೋಜಯೇತ್ ' ಎಂದು ಬೋಧಿಸುವ ಮಾತಿನ ಮರ್ಮವು ಇದೇ.

ಸಮಾಜದಲ್ಲಿ ಮಕ್ಕಳನ್ನು ಅತಿಯಾಗಿ ಮಮತೆಯಿಂದ ಕಾಣುವ ತಂದೆ ತಾಯಿಗಳು ಅವರಲ್ಲಿಯ ದೋಷಗಳನ್ನು ಕಡೆಗಣಿಸಿ, ಅವರು ಮಾಡುವುದೆಲ್ಲವೂ ಒಳ್ಳೆಯದೇ ಎಂದು ಸಾಧಿಸಿಕೊಳ್ಳುವ ಪ್ರವೃತ್ತಿಯನ್ನು ನಾವು ಅಲ್ಲಲ್ಲಿ ಕಾಣುತ್ತೇವೆ. ಇಂಥ ಪ್ರಸಂಗಗಳಲ್ಲಿ ಅಪ್ರಿಯವೆನಿಸಿದರೂ ಅವರಿಗೆ ಛೀಹಾಕಿ ಸನ್ಮಾರ್ಗಕ್ಕೆ ತರಬೇಕು ಎಂಬುದು ತಾತ್ಪರ್ಯ. ಈ ಸೂತ್ರಕ್ಕೆ ಒಂದು ಸಮಂಜಸವಾದ ಉದಾಹರಣೆಯೆಂದು, ಧೃತರಾಷ್ಟ್ರನು ತನ್ನ ಮಕ್ಕಳ ತಪ್ಪನ್ನು ತಿದ್ದದೆ, ಅವರು ಮಾಡಿದ್ದನ್ನೆಲ್ಲ ಅಪ್ರತ್ಯಕ್ಷವಾಗಿ ಬೆಂಬಲಿಸಿ ಕೊನೆಗೆ ಸರ್ವನಾಶಕ್ಕೆ ಕಾರಣವಾದದ್ದನ್ನು ಇಲ್ಲಿ ನೆನೆಯಬಹುದು.

## ೨೪೧. ಸ್ವಜನಾವಮಾನೋಽಪಿ ಮನಸ್ವಿನಾಂ ದುಃಖಮಾವಹತಿ

ಸ್ವಜನರ ಅಪಮಾನವಾದರೆ ಅದು ತಮ್ಮ ಅಪಮಾನವೇ ಎಂದು ಬಗೆದು ನೊಂದುಕೊಳ್ಳುವುದು ಸ್ವಾಭಿಮಾನಿಗಳಾದ ಸಜ್ಜನರ ಸ್ವಭಾವ. ಆದ್ದರಿಂದ ತಮ್ಮ ಬಂಧು-ಬಾಂಧವರನ್ನು ಸನ್ಮಾರ್ಗಪ್ರವೃತ್ತರನ್ನಾಗಿ ಮಾಡಿ, ತಮ್ಮ ಸ್ಥಾನ ಮಾನಗಳನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಪ್ರಯತ್ನಿಸಬೇಕಾದದ್ದು ಕರ್ತವ್ಯವೆಂದು ಇಲ್ಲಿ ಹೇಳಲಾಗಿದೆ.

## ೨೪೨. ಏಕಾಂಗ ದೋಷಃ ಪುರುಷಮವಸಾದಯತಿ

ಒಂದು ಸಾಮಾನ್ಯ ದೋಷವೂ ಕೂಡ ಮನುಷ್ಯರ ಮರ್ಯಾದೆಯನ್ನು ಕಳೆಯುವುದಾದ್ದರಿಂದ ಶಕ್ಯವಿದ್ದ ಮಟ್ಟಿಗೆ ಜಾಗರೂಕರಾಗಿ ತಮ್ಮ ಆಚಾರ-ವಿಚಾರಗಳನ್ನು ಸರಿಯಾಗಿ ಇಟ್ಟುಕೊಳ್ಳಬೇಕಾದದ್ದು ಕರ್ತವ್ಯ. ಕೆಲಸವಿಲ್ಲದೇ ಬೇರೆಯವರ ಮನೆಗೆ ಹೋಗಿ ಗಂಟೆಗಟ್ಟಲೆ ಹರಟೆಹೊಡೆಯುತ್ತ ಕೂಡ್ರುವಂತಹ ಒಂದು ಸಾಮಾನ್ಯ ದೋಷವೂ ಕೂಡ ಮನುಷ್ಯನನ್ನು ಅದೆಷ್ಟು ಅಪ್ರಿಯನನ್ನಾಗಿ ಮಾಡುತ್ತದೆಂಬುದನ್ನು ಇಲ್ಲಿ ಸ್ಮರಿಸಬಹುದು.

## ೨೪೩. ಶತ್ರುಂ ಜಯತಿ ಸುವೃತ್ತತಾ

ಸದಾಚಾರವು ಶತ್ರುವನ್ನು ಕೂಡ ನಮ್ಮ ಮುಂದೆ ತಲೆಬಾಗುವಂತೆ ಮಾಡುತ್ತದೆ ಎಂದು ಪ್ರಸ್ತುತ ಸೂತ್ರವು ಹೇಳುತ್ತದೆ. ಎಷ್ಟೇ ಮಾತ್ಸರ್ಯವಿದ್ದರೂ ಕೂಡ ಮನುಷ್ಯನ ಸಚ್ಚಾರಿತ್ರ್ಯವು ಸರ್ವಮಾನ್ಯವಾಗುವುದ-

ರಲ್ಲಿ ಸಂಶಯವಿಲ್ಲವೆಂಬುದೇ ಇದರ ತಾತ್ಪರ್ಯ. ಆದ್ದರಿಂದ ಯಾವಾಗಲೂ ನಮ್ಮ ಅಕಲ್ಯಾಣ ಬಯಸುವಂತಹ ಶತ್ರುವು ಕೂಡ ಒಂದು ವೇಳೆ ಬಹಿರಂಗವಾಗಿ ಒಪ್ಪಿಕೊಳ್ಳದಿದ್ದರೂ ಮನಸಾ ನಮ್ಮ ಸಚ್ಚರಿತ್ರವನ್ನು ಗೌರವಿಸದೇ ಗತಿಯಿಲ್ಲ. ಪಾಂಡವರ ಒಳ್ಳೆಯತನವನ್ನು ಕೌರವರು ಮನಸ್ಸಿನಲ್ಲಿ ಗೌರವಿಸುತ್ತಿದ್ದರು ಎಂಬುದಕ್ಕೆ ಮಹಾಭಾರತದಲ್ಲಿ ಅಲ್ಲಲ್ಲಿ ಸೂಚ್ಯವಾಗಿ ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು.

## ೨೪೪. ನಿಕೃತಿಪ್ರಿಯಾ ನೀಚಾಃ

ಯಾವಾಗಲೂ ಇನ್ನೊಬ್ಬರನ್ನು ಮೋಸಗೊಳಿಸುವುದು ಇಲ್ಲವೆ ಅಪಮಾನ ಮಾಡುವುದು ನೀಚರ ಲಕ್ಷಣವೆಂಬುದು ಈ ಸೂತ್ರದ ಅಭಿಪ್ರಾಯ. ಇಂಥ ಸ್ವಭಾವವು ಸಾಮಾನ್ಯವಾಗಿ ಬದಲಾಗಲಾರದು. ಅದಕ್ಕೇ ನೀಚರಿಗೆ ಎಲ್ಲೆಲ್ಲಿಯೂ ಗೌರವವಿರುವುದಿಲ್ಲ. ಇಂಥ ಸ್ವಭಾವವನ್ನು ಗುರುತಿಸಿ ಇವರಿಂದ ದೂರವಿರಲು ಸೂಚಿಸುವುದೇ ಈ ಸೂತ್ರದ ಗುರಿ.

## ೨೪೫. ನೀಚಸ್ಯ ಮತಿರ್ನದಾತವ್ಯಾ

ನೀಚರಿಗೆ ಎಂದೂ ಸಲಹೆಯನ್ನು ಕೊಡಬಾರದು. ಏಕೆಂದರೆ ಬುದ್ಧಿಹೇಳುವವರೊಂದಿಗೆ ಗುದ್ದಾಡುವುದು ನೀಚರ ಲಕ್ಷಣ. ಈ ವಿಷಯದಲ್ಲಿದ್ದ ಒಂದು ಸುಪ್ರಸಿದ್ಧ ಸುಭಾಷಿತವನ್ನು ಇಲ್ಲಿ ಉದಾಹರಿಸಬಹುದು :

ಉಪದೇಶೋ ಹಿ ಮೂರ್ಖಾಣಾಂ ಪ್ರಕೋಪಾಯ
ನ ಶಾಂತಯೇ ।
ಪಯಃಪಾನಂ ಭುಜಂಗಾನಾಂ ಕೇವಲಂ ವಿಷವರ್ಧನಮ್ ॥

ಹಾವಿಗೆ ಹಾಲೆರೆದರೆ ಅದು ವಿಷವನ್ನು ಬೆಳೆಸುವಂತೆ. ಮೂರ್ಖರಿಗೆ ಮಾಡಿದ ಉಪದೇಶವು ಅವರನ್ನು ಸನ್ಮಾರ್ಗತ್ತರನ್ನಾಗಿ ಮಾಡದೆ ಕೇವಲ ಕೋಪಕ್ಕೆ ಕಾರಣವಾಗುತ್ತದೆ.

## ೨೪೬. ತೇಷು ವಿಶ್ವಾಸೋ ನ ಕರ್ತವ್ಯಃ

ನೀಚರನ್ನು ಎಂದಿಗೂ ನಂಬಕೂಡದು ಎಂದು ಹೇಳುವ ಈ ಸೂತ್ರವು ಅಪವಾದಕ್ಕಾಗಿ ಕೂಡ ಅವರಲ್ಲಿ ಒಳ್ಳೆಯತನವಿರಲಾರದು. ಬೇವಿನ ರಸವು ಹೇಗೆ ಅಪವಾದಾತ್ಮಕವಾಗಿ ಸಿಹಿ ಇರಲಾರದೋ ಹಾಗೆಯೇ ಇವರ ಪರಿಸ್ಥಿತಿ. ಆದ್ದರಿಂದ ನಂಬಿಗೆ ಹಾಗು ನೀಚತ್ವ ಈ ಎರಡೂ ಶಬ್ದಗಳು ಎಂದೂ ಎಲ್ಲಿಯೂ ಕೂಡಿರಲಾರವೆಂಬುದೇ ತಾತ್ಪರ್ಯ.

## ೨೪೭. ಸುಪೂಜಿತೋಽಪಿ ದುರ್ಜನಃ ಪೀಡಯತ್ಯೇವ

ದುಷ್ಟರೊಂದಿಗೆ ಎಷ್ಟೇ ಒಳ್ಳೆಯತನದಿಂದ ನಡೆದುಕೊಂಡರೂ ಅವರು ಬೇರೊಬ್ಬರ ಕೃತಿಯಲ್ಲಿ ದೋಷವನ್ನು ಹುಡುಕಿ, ಪರನಿಂದೆ ಹಾಗು ಪರಪೀಡೆಗಳಲ್ಲಿಯೇ ಸಂತಸವನ್ನು ಕಾಣುತ್ತಾರೆ. ಅದು ಅವರ ಸ್ವಭಾವ. ಚೇಳಿಗೆ ಪೆಟ್ಟಾಗಬಾರದೆಂದು ಸಾವಕಾಶವಾಗಿ ಅದರ ಕೊಂಡಿಯ ಮೇಲೆ ಕೈಯಾಡಿಸಿದರೂ ಅದು ಕಡಿಯದೆ ಬಿಡಲಾರದು. ಹಾಗೆಯೇ ನೀಚರು ಉಪಕಾರ ಮಾಡಿದವರನ್ನು ಕೂಡ ಪೀಡಿಸುವುದೇ ಧರ್ಮವೆಂದು ಬಗೆಯುತ್ತಾರೆ.

## ೨೪೮. ಚಂದನಾದೀನಪಿ ದಾವೋಗ್ನಿರ್ದಹತ್ಯೇವ

ಅರಣ್ಯದಲ್ಲಿ ಹುಟ್ಟಿದ ಬೆಂಕಿಯು, ಎಲ್ಲರಿಗೂ ಪರಿಮಳವನ್ನು ಕೊಡುವ ಚಂದನವೃಕ್ಷವನ್ನು ಕೂಡ ಸುಟ್ಟುಹಾಕುವಂತೆ, ನೀಚರ ಕೃತಿ ಇರುತ್ತದೆಂದು ದೃಷ್ಟಾಂತರೂಪವಾಗಿ ಪ್ರಕೃತ ಸೂತ್ರವು ತಿಳಿಯಪಡಿಸುತ್ತದೆ.

## ೨೪೯. ಕದಾಪಿ ಪುರುಷಂ ನಾವಮನ್ಯೇತ

ಎಂತಹ ಪ್ರಸಂಗದಲ್ಲಿಯೂ ಬೇರೊಬ್ಬನನ್ನು ಅಪಮಾನಗೊಳಿಸ-ಬಾರದು. ಇಂದು ತನ್ನ ಹೀನ ಪರಿಸ್ಥಿತಿಯಿಂದಾಗಿ ಅಪಮಾನಗೊಂಡವನು ಕಾಲಾಂತರದಲ್ಲಿ ದೈವಬಲದಿಂದ ಬಲಿಷ್ಠನಾದರೆ ಅದನ್ನು ತೀರಿಸಿಕೊಳ್ಳದೆ ಬಿಡ ಲಾರನು. ಇದೂ ಅಲ್ಲದೆ ಒಂದಿಲ್ಲೊಂದು ಪ್ರಸಂಗದಲ್ಲಿ ಎಂಥ ಸಾಮಾನ್ಯ ಮನುಷ್ಯನ ಸಹಾಯವೂ ನಮಗೆ ಬೇಕಾಗುತ್ತದೆ. ಹೀಗಾಗಿ ಇಂದು ಅವ-ನನ್ನು ಅಪಮಾನಗೊಳಿಸಿದ್ದಕ್ಕಾಗಿ, ಮುಂದೆ ಪಶ್ಚಾತ್ತಾಪಪಡಬೇಕಾಗು-ತ್ತದೆ.

## ೨೫೦. ಕ್ಷಂತವ್ಯಮಿತಿ ಪುರುಷಂ ನ ಬಾಧೇತ

ತಮ್ಮನ್ನು ಕ್ಷಮಿಸಬೇಕೆಂದು ಯಾವ ಪ್ರಸಂಗದಲ್ಲಿಯೂ ಇನ್ನೊಬ್ಬರ ಮೇಲೆ ಒತ್ತಡ ತರಬಾರದು. ಅದರಿಂದ ಆತ್ಮಗೌರವಕ್ಕೆ ಧಕ್ಕೆ ತಗಲಿ-ದಂತಾಗುತ್ತದೆ. ರಾಷ್ಟ್ರೀಯ ಚಳುವಳಿಗಳಲ್ಲ ಭಾಗವಹಿಸಿದವರು ಹಲವು ಸಲ ಕ್ಷಮೆ ಕೇಳಿ ಜೇಲಿನಿಂದ ಬಿಡುಗಡೆ ಹೊಂದಿದ್ದುಂಟು. ತಾವಾಗಿಯೇ ಕ್ಷಮೆ ಮಾಡುವುದು ಬೇರೆ, ಬಲವಂತದಿಂದ ಕ್ಷಮೆ ಕೇಳುವುದು ಬೇರೆ ಎಂಬು ವನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ. ಕ್ಷಮೆ ಕೇಳುವುದು ವೀರರ ಲಕ್ಷಣವಲ್ಲ-

ವೆನ್ನುವುದನ್ನು ಇಲ್ಲಿ ಮರೆಯಲಾಗದು. ಒದಗಿಬಂದ ಪ್ರಸಂಗವು ದೈವ-ದುರ್ವಿಪಾಕವೆಂದು ಅದನ್ನು ಸಹಿಸಿಕೊಳ್ಳುವುದು ಧೀರರ ಲಕ್ಷಣ.

## ೨೫೧. ಭರ್ತ್ರಾರ್ಥಿಕಂ ರಹಸ್ಯಕ್ತಂ ವಕ್ತುಮಿಚ್ಛಂತ್ಯಬುದ್ಧಯಃ

ರಾಜಸೇವಕನು ಮೂರ್ಖನಾಗಿದ್ದಲ್ಲಿ ಸ್ವಾಮಿಯು ಹೇಳಿದ ರಹಸ್ಯ ವಿಷಯವನ್ನು ಉಪ್ಪು ಖಾರ ಹಚ್ಚಿ ಎಲ್ಲರಿಗೂ ಬೀರುತ್ತ ಹೋಗುತ್ತಾನೆ. ರಾಜನಿಗೆ ತಾನು ಅದೆಷ್ಟು ಪ್ರಿಯನಾಗಿದ್ದೇನೆ ಎಂದು ತೋರಿಸುವ ಭರದಲ್ಲಿ ರಹಸ್ಯವನ್ನು ಹೊರಗೆಡಹುತ್ತಿದ್ದೇನಲ್ಲಾ ಎಂಬ ವಿಚಾರವು ಕೂಡ ಇಂಥ ಮೂರ್ಖನಿಗೆ ಹೊಳೆಯುವುದಿಲ್ಲ. ಇಂಥ ಜೊತೆಗಾರರಿರುವ ರಾಜನನ್ನು ಸೋಲಿಸಲು ಶತ್ರುಗಳಿಗೆ ಹೆಚ್ಚು ಪ್ರಯತ್ನಮಾಡುವ ಅವಶ್ಯಕತೆ ಬೀಳಲಾರದು.

## ೨೫೨. ಅನುರಾಗಸ್ತು ಫಲೇನ ಸೂಚ್ಯತೇ

ಪ್ರೇಮದ ಪರೀಕ್ಷೆಯು ಫಲದ ಮೇಲಿಂದ ಆಗುತ್ತದೆ. ಯಾರೇ ಆಗಲಿ ನಿಮ್ಮ ವಿಷಯಕ್ಕೆ ನಮಗೆ ಆತ್ಮೀಯತೆ ಇದೆ ಎಂದು ಹೇಳಿದರೆ, ಆ ಮಾತಿನ ಸತ್ಯಾಂಶವು ಅವರ ಸಹವಾಸದಿಂದ ನಮಗೆ ದೊರೆಯುವ ಫಲದಿಂದ ಸಿದ್ಧವಾಗುತ್ತದೆ. ತಾತ್ಪರ್ಯವೆಂದರೆ, ನಮ್ಮಿಂದ ಕೆಲಸ ಮಾಡಿಸಿಕೊಳ್ಳುವುದಕ್ಕಾಗಿ ಬಹಳಷ್ಟು ಜನರು ಪ್ರೇಮ ಅಥವಾ ಆತ್ಮೀಯತೆಯನ್ನು ನಾಟಕೀಯವಾಗಿ ಪ್ರಕಟಿಸುತ್ತಾರೆ. ಅದನ್ನು ನಂಬುವುದು ಜಾಣತನವಲ್ಲ, ಅವರ ಕೃತಿಯಿಂದ ನಮಗೆ ನಿಜವಾದ ಲಾಭವಾದಲ್ಲಿ ಮಾತ್ರ ಅವರು ನಮ್ಮ

ಹಿತೈಷಿಗಳೆಂದು ಬಗೆಯಬೇಕೆಂದು ಹೇಳುವ ಈ ಸೂತ್ರವು ರಾಜಕೀಯದಲ್ಲಿ ಅಥವಾ ಲೌಕಿಕದಲ್ಲಿ ಮೈತ್ರೀಭಾವವು ಕೇವಲ ಬಾಯಿಂದ ಪ್ರಕಟವಾದರೆ ಸಾಲದು. ಕೃತಿಯಲ್ಲಿಯೂ ಬರಬೇಕೆಂಬುದನ್ನು ಸೂಚಿಸುತ್ತದೆ.

## ೨೫೩. ಪ್ರಜ್ಞಾಫಲಮೈಶ್ವರ್ಯಂ

ಐಶ್ವರ್ಯವು ವಿವೇಕಪೂರ್ಣವಾದ ಬುದ್ಧಿಯ ಫಲವು. ಇದರ ಅರ್ಥ ಅನ್ಯಾಯದಿಂದ ಗಳಿಸಿದ ಸಂಪತ್ತು ಕಾಲಾಂತರದಲ್ಲಿಯಾಗಲಿ ಮನುಷ್ಯನನ್ನು ಅಧೋಗತಿಗೆ ಎಳೆಯುತ್ತದೆ ಎಂಬುದು. ಇದಕ್ಕೆ ಮುಖ್ಯ ಕಾರಣವೆಂದರೆ, ಅನ್ಯಾಯ ಹಾಗು ಅವಿವೇಕಿಗಳಿಗೆ ಆಸ್ಪದವಿದ್ದಲ್ಲಿ ಮನುಷ್ಯರು ದುರ್ಮಾರ್ಗ ಪ್ರವೃತ್ತರಾಗಿ ಸಮಾಜದಲ್ಲಿ ಅಪ್ರಿಯರಾಗುತ್ತಾರೆ. ವ್ಯಸನಾಧೀನರಾಗುವುದರಿಂದ ಸಂಪತ್ತು ನಶಿಸಿಹೋಗುತ್ತದೆ. ಆದರೆ ವಿವೇಕಿಯಾಗಿದ್ದ ಅಲ್ಪ ಸಂಪತ್ತು ಕೂಡ ಸಂಯಮದಿಂದ ಜೀವನ ನಡೆಸುವುದರ ಪರಿಣಾಮವಾಗಿ ಮನಶ್ಶಾಂತಿಯನ್ನು ತರುತ್ತದೆ. ಈ ಅರ್ಥದಲ್ಲಿ ಐಶ್ವರ್ಯವು ಪ್ರಜ್ಞಾಫಲವೆಂದು ಈ ಸೂತ್ರವು ಸೂಚಿಸಿದೆ.

## ೨೫೪, ದಾತವ್ಯಮಿತಿ ಬಾಲಿಶಃ ಪರಿಕ್ಲೇಶೇನ ದಾಸ್ಯತಿ

ಮೂರ್ಖನು ಅವಶ್ಯವಾಗಿ ಕೊಡಬೇಕಾದ ವಸ್ತುವನ್ನು ಕೂಡ ಮನಸ್ಸಿಲ್ಲದ ಮನಸ್ಸಿನಿಂದ ಅರ್ಥಾತ್ ಅನಿವಾರ್ಯವಾಗಿ ಕೊಡುತ್ತಾನೆಂದು ಹೇಳುವ ಈ ಸೂತ್ರವು ಮೂರ್ಖನಾದ ಜಿಪುಣನ ಸ್ವಭಾವವನ್ನು ಅತಿ ಸುಂದರವಾಗಿ ಚಿತ್ರಿಸುತ್ತದೆ. ಕೊಡದೇ ಗತಿ ಇಲ್ಲ, ಆದರೆ ಕೊಡುವ ಮನಸ್ಸಿಲ್ಲ. ಹೀಗಾಗಿ ಕೊಟ್ಟರೂ ಕೊಡದಂತೆ ಅಥವಾ ಕೊಟ್ಟದ್ದಕ್ಕೆ ಶ್ರೇಯಸ್ಸು ಕೂಡ ಬಾರದ ಪರಿಯಲ್ಲಿ ಕೊಡುತ್ತಾನೆ. ಲಾಭವೂ ಇಲ್ಲ, ಕೀರ್ತಿಯೂ ಇಲ್ಲ ಎನ್ನುವ ಪರಿಸ್ಥಿತಿಗೆ ತಾನೇ ಕಾರಣನಾಗುತ್ತಾನೆ.

## ೨೫೫. ಮಹದೈಶ್ವರ್ಯಂ ಪ್ರಾಪ್ಯ ಅಧೃತಿಮಾನ್ ವಿನಶ್ಯತಿ

'ಧೈರ್ಯಂ ಸರ್ವತ್ರ ಸಾಧನಂ' ಎಂಬ ಲೋಕೋಕ್ತಿಯಂತೆ ಧೈರ್ಯವಿಲ್ಲದವನಿಗೆ ಎಲ್ಲೆಲ್ಲಿಯೂ ಅಪಯಶವೇ ಕಟ್ಟಿಟ್ಟದ್ದು ಎಂಬುದು ಇಲ್ಲಿ ಸೂಚಿಸಲ್ಪಟ್ಟಿದೆ. ಹೀಗಾಗಿ ಎಷ್ಟೇ ಐಶ್ವರ್ಯವಿದ್ದರೂ ಕೂಡ ಧೈರ್ಯವಿರದಿದ್ದರೆ ಅವನಿಗೆ ವಿನಾಶವೇ ಗತಿ ಎಂಬುದೇ ತಾತ್ಪರ್ಯ. ಮನುಷ್ಯರಿಗೆ ವಿಶೇಷವಾಗಿ ರಾಜನಿಗೆ ಹಾಗು ಆಡಳಿತ ನಡೆಸುವವರಿಗೆ ಎಡರು-ತೊಡರುಗಳು ಬಹಳ. ಅವನ್ನು ಎದುರಿಸಲು ಧೈರ್ಯಕ್ಕಿಂತ ಹೆಚ್ಚಿನ ಸಾಧನವಿಲ್ಲ. ಇಲ್ಲಿಯೇ ಅವನ ಪ್ರಭುಶಕ್ತಿ ಹಾಗು ಉತ್ಸಾಹಶಕ್ತಿಗಳು ಉಪ-ಯೋಗಕ್ಕೆ ಬರಬಲ್ಲವು. ಆದ್ದರಿಂದ ವಿನಾಶದಿಂದ ತಪ್ಪಿಸಿಕೊಳ್ಳುವುದು ಧೈರ್ಯದಿಂದ ಮಾತ್ರ ಸಾಧ್ಯ. ಅದು ಸಮಯಕ್ಕೆ ತಕ್ಕಂತೆ ಶಕ್ತಿ ಹಾಗು ಯುಕ್ತಿಗಳನ್ನು ವಿನಿಯೋಗಿಸಲು ಮಾರ್ಗದರ್ಶನ ಮಾಡುತ್ತದೆ.

## ೨೫೬. ನಾಸ್ತಿ ಅಧೃತೇಃ ಐಹಿಕಾಮುಷ್ಮಿಕಮ್

ಮೇಲಿನ ಸೂತ್ರಕ್ಕೆ ನಿರ್ಣಯರೂಪದಲ್ಲಿ ಪ್ರಸ್ತುತ ವಾಕ್ಯವು ಧೈರ್ಯ-ವಿಲ್ಲದವನಿಗೆ ಇಹಲೋಕದಲ್ಲಿಯೂ ಯಶಸ್ಸು ಹಾಗು ಸುಖಗಳಿಲ್ಲ. ಪರ-ಲೋಕದ ಸುಖವಿದ್ದಂತೂ ಪ್ರಶ್ನೆಯೇ ಇಲ್ಲ. ಏಕೆಂದರೆ ಪಾರಮಾರ್ಥಿಕದಲ್ಲಿ ಶ್ರೇಯಸ್ಸು ದೊರೆಯಬೇಕಾದರೆ ತ್ಯಾಗವೇ ಅದಕ್ಕೆ ಮೂಲ. ಅಧೈರ್ಯದ ಮನುಷ್ಯನಿಗೆ ತ್ಯಾಗವೆಲ್ಲಿಂದ ಬಂದೀತು ? ಅವನಿಗೆ ಕಟ್ಟಿಟ್ಟದ್ದು ಹಾನಿ ಮಾತ್ರ. ಹೀಗಾಗಿ ಇಹ-ಪರಗಳೆರಡಕ್ಕೂ ಎರವಾಗುತ್ತಾನೆ.

## ೨೫೭. ನ ದುರ್ಜನೈಃ ಸಹ ಸಂಸರ್ಗಃ ಕರ್ತವ್ಯಃ

ದುರ್ಜನರ ಸಹವಾಸವನ್ನು ಎಂದಿಗೂ ಮಾಡಬಾರದು ಎಂಬ ಪ್ರಸಿದ್ಧ

ಲೋಕೋಕ್ತಿಯನ್ನೇ ಈ ಸೂತ್ರವು ಹೇಳುತ್ತದೆ. ಇದಕ್ಕೆ ಪ್ರಾಮುಖ್ಯವಾಗಿ ಎರಡು ಕಾರಣಗಳು. ಒಂದು ದುರ್ಜನರ ಸಹವಾಸದಿಂದ ಅವರ ದುರ್ಗುಣಗಳು ನಮ್ಮಲ್ಲಿಯೂ ಗೊತ್ತಿಲ್ಲದೆ ಬಂದು ಸೇರುತ್ತವೆ. ಎರಡನೆಯದಾಗಿ ಅವರ ಸಹವಾಸದಲ್ಲಿರುವ ನಮ್ಮನ್ನು, ನಾವು ಒಳ್ಳೆಯವರಾಗಿದ್ದರೂ ದುರ್ಜನರೆಂದೇ ಬಗೆಯುತ್ತಾರೆ. ಇದಕ್ಕೆ ಉದಾಹರಣೆಯೆಂದು ಮುಂದಿನ ಸೂತ್ರದಲ್ಲಿ—

## ೨೫೮. ಶೌಂಡಹಸ್ತಗತಂ ಪಯೋಪ್ಯವಮನ್ಯತೆ

ಸರಾಯಿಯನ್ನು ಮಾರುವವನ ಹತ್ತಿರವಿದ್ದ ಹಾಲನ್ನು ಕೂಡ ಜನರು ಸರಾಯಿಯೆಂದೇ ತಿಳಿಯುತ್ತಾರೆಂದು ಬಹು ಮಾರ್ಮಿಕವಾಗಿ ಸೂತ್ರಕಾರನು ವಿವರಿಸಿದ್ದಾನೆ. 'ಪಯೋಽಪಿ ಶೌಂಡಿಕೀ ಹಸ್ತೇ ವಾರುಣೀತ್ಯಭಿಧೀಯತೇ' ಎಂಬ ಪ್ರಸಿದ್ಧ ಸುಭಾಷಿತವನ್ನು ಇಲ್ಲಿ ಸ್ಮರಿಸಬಹುದು.

## ೨೫೯. ಕಾರ್ಯಸಂಕಟೇಷ್ವರ್ಥ ವ್ಯವಸಾಯಿನೀ ಬುದ್ಧಿಃ

ಕೈಕೊಂಡ ಕಾರ್ಯಗಳಲ್ಲಿ ಸಂಕಟಗಳು ಬಂದೊದಗಿದಾಗ ಅಧೈರ್ಯಗೊಳ್ಳದೆ ದಾರಿಯನ್ನು ಹುಡುಕಿ ಕಾರ್ಯರತರಾಗಲಿಕ್ಕೆ ಪ್ರೇರಿಸುವುದೇ ಶ್ರೇಷ್ಠವಾದ ಬುದ್ಧಿ. ನಿಜವಾಗಿಯೂ ಬುದ್ಧಿಯ ಪರೀಕ್ಷೆ ಇಂತಹ ಪ್ರಸಂಗಗಳಲ್ಲಿಯೇ ಆಗುತ್ತದೆ. ಏನೂ ಸಮಸ್ಯೆಗಳಿಲ್ಲದಾಗ ಬುದ್ಧಿಯ ಹಿರಿಮೆಯನ್ನು ತಿಳಿದುಕೊಳ್ಳಲಿಕ್ಕೆ ಅವಕಾಶ ಕೂಡ ಇರಾವುದಿಲ್ಲ.

## ೨೬೦. ಮಿತಭೋಜನಂ ಸ್ವಾಸ್ಥ್ಯಮ್

ಚಾಣಕ್ಯನಿಗೆ ಅರಿಯದ್ದು ಏನೂ ಇಲ್ಲವೆಂದೇ ಅವನನ್ನು 'Chanakya was an epitome of wisdom and fountain head of all khowledge ' ಎಂದು ಬಣ್ಣಿಸುತ್ತಾರೆ. ಧರ್ಮದ ಹಿರಿಮೆ ಹಾಗು ಅರ್ಥದ ಆವಶ್ಯಕತೆಯನ್ನು ಹೇಳಹೊರಟ ಇವನು, ಪ್ರಸ್ತುತ ಸೂತ್ರದಲ್ಲಿ ಆಹಾರಸೇವನೆಯ ವಿಷಯವಾಗಿಯೂ ನಾಲ್ಕು ಮಾತುಗಳನ್ನು ಹೇಳು-ತ್ತಾನೆ.

ಆರೋಗ್ಯವು ಸರಿಯಾಗಿ ಉಳಿಯಬೇಕಾದರೆ ಮಿತಭೋಜನವು ಅತ್ಯ-ವಶ್ಯ. ಶರೀರಕ್ಕೆ ಬೇಕಾದುದಕ್ಕಿಂತ ಹೆಚ್ಚು ಆಹಾರವನ್ನು ಸೇವಿಸುವುದು ಅನಾರೋಗ್ಯಕ್ಕೆ ಕಾರಣ. ಈ ವಿಷಯದಲ್ಲಿದ್ದ ಮಹತ್ವದ ಶ್ಲೋಕವೊಂದನ್ನು ಇಲ್ಲಿ ಉದಾಹರಿಸಬಹುದು :

ಅರ್ಧಂ ಸವ್ಯಂಜನಾನ್ನಸ್ಯ ತೃತೀಯಮುದಕಸ್ಯ ತು ।
ವಾಯೋಃ ಸಂಚಾರಣಾರ್ಥಂತು ಚತುರ್ಥಮವಶೇಷಯೇತ್ ॥

ಹೊಟ್ಟೆಯ ಅರ್ಧಭಾಗವನ್ನು ಆಹಾರದಿಂದ, ಕಾಲುಭಾಗವನ್ನು ನೀರಿನಿಂದ ತುಂಬಿ ವಾಯುಸಂಚಾರಕ್ಕಾಗಿ ಇನ್ನುಳಿದ ಕಾಲುಭಾಗವನ್ನು ತೆರವಿಡಬೇಕು ಎಂದು ಹೇಳುವ ಈ ಹಿತವಚನವು ಮಿತಭೋಜನದ ಮಹತ್ವ-ವನ್ನು ತಿಳಿಯಪಡಿಸುತ್ತದೆ. ಆಕಂಠ ಊಟಮಾಡುವುದು ಅನಾರೋಗ್ಯಕ್ಕೆ ದಾರಿ ಎಂಬುದನ್ನು ಎಲ್ಲರೂ ತಿಳಿದುಕೊಳ್ಳುವುದು ಅವಶ್ಯ.

## ೨೬೧. ಪಥ್ಯಮಪಥ್ಯಮ್ ವಾ ಅಜೀರ್ಣೇನಾಶ್ನೀಯಾತ್

ಸಾಮಾನ್ಯ ಪರಿಸ್ಥಿತಿಯಲ್ಲಿ ಪಥ್ಯವೆನಿಸುವುದನ್ನೇ ಆಗಲಿ ಅಥವಾ ಅಪಥ್ಯಾಹಾರವನ್ನಾಗಲಿ ಅಜೀರ್ಣವಾಗಿದ್ದಾಗ ಎಂದೂ ಸೇವಿಸಬಾರದು ಎಂದು ಈ ಸೂತ್ರವು ತಿಳಿಯಪಡಿಸುತ್ತದೆ. ಆಯುರ್ವೇದ ಶಾಸ್ತ್ರದಲ್ಲಿ

ಪಥ್ಯಾಪಥ್ಯಕ್ಕಿದ್ದ ಮಹತ್ವವು ಅಲೋಪತೀ ಔಷಧಗಳ ಪ್ರಭಾವವಿದ್ದ ಈ ಕಾಲದಲ್ಲಿ ಉಳಿದಿಲ್ಲ. ಆದರೆ ಪಥ್ಯ ಭೋಜನವು ಯಾವಾಗಲೂ ಹಿತಕರವು. ಅತಿಯಾಗಿ ಉಪ್ಪು, ಕಾರ, ಹುಳಿ, ಎಣ್ಣೆ ಇವುಗಳನ್ನು ಸೇವಿಸುವುದು ಅನಾರೋಗ್ಯಕ್ಕೆ ಆಮಂತ್ರಣ ಕೊಟ್ಟಂತೆ. ಆದರೆ ಅಜೀರ್ಣದಿಂದ ಬಳಲುತ್ತಿರುವ ಮನುಷ್ಯರಿಗೆ ಪಥ್ಯ, ಆಹಾರವು ಕೂಡ ಹಿತಕರವಲ್ಲ. ಅರ್ಥಾತ್ ಲಂಘನವೇ ಲೇಸೆಂದು ಇಲ್ಲಿ ಸೂಚಿಸಲಾಗಿದೆ.

## ೨೬೨. ಜೀರ್ಣಭೋಜನಂ ವ್ಯಾಧಿರ್ನೋಪಸರ್ಪತಿ

ಸೇವಿಸಿದ ಆಹಾರವು ಜೀರ್ಣವಾಗುವವನಿಗೆ ಯಾವ ಬೇನೆಯೂ ಬರುವುದಿಲ್ಲ. ಆದ್ದರಿಂದ ಆರೋಗ್ಯದ ಮುಖ್ಯ ಲಕ್ಷಣವೆಂದರೆ ಉಂಡದ್ದೆಲ್ಲ ಜೀರ್ಣವಾಗುವುದು. ಇಂದಿನ ಯುಗದಲ್ಲಿ ಚಹಾ, ಕಾಫಿ, ತಂಬಾಕು ಇತ್ಯಾದಿಗಳ ಪ್ರಭಾವದಿಂದಾಗಿ ಸರಿಯಾಗಿ ಅನ್ನವನ್ನು ಜೀರ್ಣಿಸುವ ಮನುಷ್ಯರು ಅಪರೂಪಕ್ಕೆ ದೊರೆಯುತ್ತಾರೆ. ಉಂಡದ್ದನ್ನು ಜೀರ್ಣಿಸಿಕೊಳ್ಳುವವನೇ ಭಾಗ್ಯವಂತನೆಂದು ಅಲಂಕಾರಿಕವಾಗಿ ಹೇಳಿದರೂ ತಪ್ಪಾಗಲಾರದು. ಆಹಾರ ಜೀರ್ಣವಾದದ್ದರ ಲಕ್ಷಣವೆಂದರೆ, ಮಲ–ಮೂತ್ರ ವಿಸರ್ಜನೆಯು ಸರಿಯಾಗಿ ಆಗುತ್ತಿರುವುದು. ಬೇನೆ ಬರಬಾರದೆಂದು ಬಯಸುವವರು ತಿಂದ ಆಹಾರವು ಜೀರ್ಣವಾಗುವುದಕ್ಕೆ ಮುಂಚೆ ಪುನಃ ಊಟಮಾಡಬಾರದು.

## ೨೬೩. ಜೀರ್ಣಶರೀರೇ ವರ್ಧಮಾನಂ ವ್ಯಾಧಿಂ ನೋಪೇಕ್ಷೇತ್

ಶರೀರವು ಜೀರ್ಣವಾಗಹತ್ತಿತೆಂದರೆ ಅರ್ಥಾತ್ ಅರವತ್ತು ವಯಸ್ಸಾದ ನಂತರ ಬೆಳೆಯುವ ಬೇನೆಗಳ ಬಗ್ಗೆ ಉಪೇಕ್ಷೆ ಮಾಡದೆ, ದಕ್ಷತೆ

ವಹಿಸಿ ರೋಗನಿರ್ಮೂಲನಕ್ಕಾಗಿ ಹೆಚ್ಚು ಪ್ರಯತ್ನಮಾಡಬೇಕು. ಪ್ರಾಯ-ವಿದ್ದಾಗ ರೋಗಪ್ರತಿರೋಧಕಶಕ್ತಿಯು ಸಾಕಷ್ಟು ಪ್ರಮಾಣದಲ್ಲಿ ಇರುವುದ-ರಿಂದ ರೋಗವುತ್ಪನ್ನವಾದರೂ ಹೆಚ್ಚು ಭಯವಿರುವುದಿಲ್ಲ. ಆದರೆ ಮುಪ್ಪಿನ ಕಾಲದಲ್ಲಿ ಉದ್ಭವಿಸಿದ ರೋಗವು ಗಂಡಾಂತರಕಾರಿಯಾದ್ದರಿಂದ ಆ ವಿಷ-ಯಕ್ಕೆ ಅಲಕ್ಷ್ಯ ಮಾಡುವುದು ಮರಣಕ್ಕೆ ಆಮಂತ್ರಣ ಕೊಟ್ಟಂತೆಯೇ.

## ೨೬೪. ಅಜೀರ್ಣೇ ಭೋಜನಂ ದುಃಖಮ್

ಅಜೀರ್ಣವಾದಾಗ ಊಟಮಾಡುವುದು ದುಃಖಕ್ಕೀಡುಮಾಡುತ್ತದೆ. ಇದನ್ನೇ ಪರ್ಯಾಯವಾಗಿ ಇಂಥ ಭೋಜನವು ರೋಗಗಳಿಗೆ ಅಪ್ರತ್ಯಕ್ಷ-ವಾಗಿ ಔತಣ ಕೊಟ್ಟಂತೆ ಎಂದು ಹೇಳಬಹುದು. ಈ ವಿಷಯಕ್ಕಿದ್ದ ಸುಭಾ-ಷಿತಶ್ಲೋಕವನ್ನು ಇಲ್ಲಿ ಉದಾಹರಿಸುವುದು ಸಮಂಜಸವೆನಿಸುತ್ತದೆ.

ಅನಭ್ಯಾಸೇ ವಿಷಂ ವಿದ್ಯಾ ಅಜೀರ್ಣೇ ಭೋಜನಂ ವಿಷಮ್।
ವಿಷಂ ಸಭಾ ದರಿದ್ರಸ್ಯ ವೃದ್ಧಸ್ಯ ತರುಣೀ ವಿಷಮ್ ॥

ಅಭ್ಯಾಸ ಮಾಡದವನಿಗೆ ವಿದ್ಯಾರ್ಜನೆಯು ವಿಷವಿದ್ದಂತೆ. ಅಜೀರ್ಣ-ವಾದಾಗ ಭೋಜನವೂ ವಿಷಪ್ರಾಯವಾಗುವುದು. ದರಿದ್ರನಿಗೆ ತನ್ನ ದಾರಿದ್ರ್ಯದಿಂದಾಗಿ ಎಲ್ಲರೊಂದಿಗೆ ಉತ್ಸವಪ್ರಸಂಗಗಳಲ್ಲಿ ಬೆರೆಯುವುದು ವಿಷಪ್ರಾಯವೆನಿಸಿದರೆ. ವೃದ್ಧನಿಗೆ ಶರೀರದ ಜೀರ್ಣತೆಯಿಂದಾಗಿ ಸುಂದರ ಸ್ತ್ರೀಯು ವಿಷಪ್ರಾಯವೆನಿಸುತ್ತಾಳೆ.

## ೨೬೫. ಶತ್ರೋರಪಿ ವಿಶಿಷ್ಯತೇ ವ್ಯಾಧಿಃ

ರೋಗವು ಶತ್ರುವಿಗಿಂತ ಘಾತುಕವಾದದ್ದು. ಶತ್ರುವನ್ನು ಉಪಾಯ-ದಿಂದ, ಅನ್ಯರ ಸಹಾಯದಿಂದ ಹಣ್ಣುಮಾಡಬಹುದು. ಆದರೆ ಸ್ವಲ್ಪ

ದುರ್ಲಕ್ಷವಾದರೆ ರೋಗದಿಂದ ಮರಣ ತಪ್ಪಿದ್ದಲ್ಲವೆಂಬುದೇ ಈ ಸೂತ್ರದ ಅಭಿಪ್ರಾಯ.

## ೨೬೬. ಪಟುತರೇ ತೃಷ್ಣಾಪರೇ ಸುಲಭಮತಿ ಸಂಧಾನಮ್

ಅತ್ಯಂತ ಲೋಭಿಯಾದವನನ್ನು ನಮ್ಮ ಕಡೆಗೆ ಒಲಿಸಿಕೊಳ್ಳುವುದು ತೀರಾ ಸುಲಭವಾದದ್ದು ಎಂದು ಹೇಳುವ ಈ ಸೂತ್ರವು ಭವಿಷ್ಯದಲ್ಲಿ ಭಾರತದ ಸಂಸತ್ಸದಸ್ಯರು 'ಆಯಾರಾಮ ಗಯಾರಾಮ'ರಾಗುವರೆಂಬುದನ್ನು ಊಹಿಸಿಯೇ ಬರೆದಿದೆಯೇನೋ ಎಂದೆನಿಸುತ್ತದೆ. ಹಣ ಹಾಗು ಅಧಿಕಾರದ ಲೋಭದಿಂದಾಗಿ ಪಕ್ಷಾಂತರಗೊಳ್ಳುವುದನ್ನು ಹಾಗು ಅದನ್ನೆಲ್ಲ ಯೋಗ್ಯವೆಂದು ಸಾಧಿಸಿಕೊಳ್ಳುವವರನ್ನು ದಿನಾಲೂ ನಾವು ನೋಡುತ್ತೇವೆ.

ಲೋಭಿಯಾದವನು ತತ್ಕ್ಷಣ ಸುಲಭನಾದುದರಿಂದ ಅವನನ್ನು ಆಸೆ ತೋರಿಸಿ ತಮ್ಮೆಡೆಗೆ ಎಳೆದುಕೊಳ್ಳುವುದು ಸುಲಭವೆನ್ನುವ ಸಾರ್ವಕಾಲೀನ ತತ್ವವನ್ನು ಈ ಸೂತ್ರವು ತಿಳಿಸಿಕೊಡುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ—

## ೨೬೭. ತೃಷ್ಣಯಾ ಮತಿಃ ಛಾದ್ಯತೇ

ದುರಾಸೆ ಅಥವಾ ಲೋಭದಿಂದ ಮನುಷ್ಯನ ಬುದ್ಧಿ ಅಥವಾ ವಿವೇಕಜ್ಞಾನವು ಮುಚ್ಚಲ್ಪಡುತ್ತದೆ ಅಥವಾ ಕುಂಠಿತವಾಗುತ್ತದೆ. ಅದಕ್ಕೆಂದೇ ತಾನು ಮಾಡುತ್ತಿರುವುದು ತಪ್ಪೆಂದು ತಿಳಿದರೂ ಅದು ಸರಿಯೆಂದು ಸಮರ್ಥಿಸಿಕೊಂಡು ಲೋಭಿಯು ಅಕಾರ್ಯಪ್ರವೃತ್ತನಾಗುತ್ತಾನೆ. ಭಗವದ್ಗೀತೆಯ ಹದಿನಾರನೆಯ ಅಧ್ಯಾಯದಲ್ಲಿ ಕಾಮ–ಕ್ರೋಧ ಹಾಗು ಲೋಭಗಳು ನರಕದ ಮೂರು ದ್ವಾರಗಳೆಂದು ಹೇಳಿದ್ದು ಇದರಿಂದಾಗಿಯೇ.

## ೨೧೮. ಕಾರ್ಯಬಹುತ್ವೇ ಬಹುಫಲಂ ಆಯತಿಕಂ ಕುರ್ಯಾತ್

ಏಕಕಾಲಕ್ಕೆ ಅನೇಕ ಕಾರ್ಯಗಳನ್ನು ಮಾಡಬೇಕಾದಂತಹ ಪ್ರಸಂಗ ಬಂದೊದಗಿದಲ್ಲಿ ವಿಶೇಷ ಲಾಭವು ಯಾವ ಕಾರ್ಯದಿಂದ ಸಾಧ್ಯವೆನಿಸು-ವುದೋ ಅಂತಹದನ್ನೇ ಮೊದಲು ಕೈಕೊಳ್ಳಬೇಕು ಎಂದು ಈ ಸೂತ್ರವು ಉಪದೇಶಿಸುತ್ತದೆ. ಚಾಣಕ್ಯನು ವಾಸ್ತವವಾದಿ. ಹಗಲುಗನಸುಗಳನ್ನು ಕಾಣುವ ಆದರ್ಶವಾದಿಯಲ್ಲ. ಆದ್ದರಿಂದ ವಿಘ್ನಗಳು ಕಡಿಮೆ ಇದ್ದು, ಖಚಿತವೂ, ವಿಶೇಷ ಲಾಭದಾಯಕವೂ ಆದ ಕಾರ್ಯವನ್ನು ಆರಿಸಿಕೊಳ್ಳ-ಬೇಕೆಂದು ಸಲಹೆ ನೀಡಿದ್ದು ಯಥಾರ್ಥವೇ. ಸುಮ್ಮನೇ ಆದರ್ಶದ ಬೆನ್ನು ಹತ್ತಿ ಹಾನಿಗೀಡಾಗುವುದು ಜಾಣತನವಲ್ಲ.

## ೨೧೯. ಸ್ವಯಮೇವಾವಸ್ಕನ್ದಂ ಕಾರ್ಯಂ ನಿರೀಕ್ಷೇತ

ಶತ್ರುವಿನ ಮೇಲೆ ದಂಡೆತ್ತಿ ಹೋದಾಗ ಆ ವಿಷಯಕ್ಕೆ ಸಂಬಂಧಪಟ್ಟ ಯಾವತ್ತೂ ಕಾರ್ಯಗಳನ್ನು ರಾಜನು ಸ್ವತಃ ಪರಿಶೀಲಿಸುತ್ತಿರಬೇಕು. ಮಂತ್ರಿ ಹಾಗು ಸೇನಾನಿಗಳು ಎಷ್ಟೇ ನಿಷ್ಠಾವಂತರಿದ್ದರೂ ಶತ್ರುಗಳ ಕುತಂ-ತ್ರಕ್ಕೆ ಎಲ್ಲಿಯೂ ಆಸ್ಪದ ದೊರೆಯಬಾರದೆಂಬ ಕಾರಣದಿಂದ ರಾಜನು ಸ್ವತಃ ಜಾಗ್ರತನಾಗಿರುವುದು ಅವಶ್ಯವೆನ್ನುವುದೇ ತಾತ್ಪರ್ಯ.

## ೨೨೦. ಮೂರ್ಖೇಷು ಸಾಹಸಂ ನಿಯತಮ್

ಇಲ್ಲಿ ಸಾಹಸ ಶಬ್ದವು ಅಧಿಕಪ್ರಸಂಗತನ ಎಂಬ ಅರ್ಥದಲ್ಲಿ ಉಪ-

ಯೋಗಿಸಲ್ಪಟ್ಟಿದೆ. ಧೈರ್ಯದಿಂದ ನೆರವೇರಿಸಿದ ಪೂರಕೃತ್ಯ ಎಂಬರ್ಥ-ದಲ್ಲಿಯೂ ಸಾಹಸ ಶಬ್ದವನ್ನು ವಿಶೇಷವಾಗಿ ಉಪಯೋಗಿಸುವ ರೂಢಿ ಇದೆ. ಅಂಥ ಸಾಹಸದಿಂದ ಐಶ್ವರ್ಯಲಾಭವಾಗುತ್ತದೆಂಬ ಒಂದು ನಾಣ್ಣು-ಡಿಯೂ ಇದೆ. ( ಸಾಹಸೇ ಪ್ರತಿವಸತಿ ಶ್ರೀಃ ) ಆದರೆ ಪ್ರಕೃತ ಸೂತ್ರದಲ್ಲಿ ಮೂರ್ಖನು ಯಾವಾಗಲೂ ಸಾಹಸ ಕೃತ್ಯಗಳಲ್ಲಿ ಧುಮುಕುತ್ತಾನೆಂದು ಹೇಳಿರುವುದರಿಂದ ಅವಿವೇಕದಿಂದ ಪ್ರೇರಿತನಾಗಿ, ಅಧಿಕಪ್ರಸಂಗಿಯಂತೆ ವರ್ತಿಸುತ್ತಾನೆಂದು ಅರ್ಥಮಾಡುವುದು ಯೋಗ್ಯ.

## ೨೭೧. ಮೂರ್ಖೇಷು ವಿವಾದೋ ನ ಕರ್ತವ್ಯಃ

ಮೂರ್ಖರೊಂದಿಗೆ ಯಾವಾಗಲೂ ವಾದಕ್ಕಿಳಿಯಬಾರದು. ಅವರಿಗೆ ತಿಳಿವಳಿಕೆ ಇರದ್ದರಿಂದ ತಮ್ಮ ಮಾನಾಪಮಾನಗಳ ಪರಿವೆಯಿರುವುದಿಲ್ಲ. ಹೀಗಾಗಿ ಅವರೊಂದಿಗೆ ವಾದಕ್ಕಿಳಿಯುವವರು ತಮ್ಮ ಮರ್ಯಾದೆಯನ್ನು ಕಳೆದುಕೊಳ್ಳಬೇಕಾಗುತ್ತದೆ. ಮೂರ್ಖನ ಅವಯವಗಳು ಮಾತ್ರ ಬೆಳ-ವಣಿಗೆ ಹೊಂದುತ್ತವೆ. ಆದರೆ ಬುದ್ಧಿಯಲ್ಲಿ ಸುಧಾರಣೆಯಾಗುವುದಿಲ್ಲ ಎಂಬ ಲೋಕೋಕ್ತಿಯನ್ನು ಇಲ್ಲಿ ಸ್ಮರಿಸಬಹುದು. ( ಮೂರ್ಖಸ್ಯ ಗಾತ್ರಾಣಿ ವರ್ಧಂತೇ ನ ತು ಬುದ್ಧಿಃ ).

## ೨೭೨. ಮೂರ್ಖೇಷು ಮೂರ್ಖವತ್ ಕಥಯೇತ್

ಮೂರ್ಖರೊಂದಿಗೆ ವ್ಯವಹಾರ ಮಾಡುವಾಗ ಅವರಂತೆಯೇ ಮಾತಾಡ ಬೇಕು, ಬುದ್ಧಿ ಹೇಳಿದರೆ ಅವರಿಗೆ ತಿಳಿಯುವುದಿಲ್ಲ. ಕೇವಲ ಜಗಳಕ್ಕೆ ಕಾರಣ-ವಾಗುತ್ತದೆ. ಆದ್ದರಿಂದ ಅವರೊಂದಿಗೆ ಮಾತು–ಕತೆಯಾಡುವ ಪ್ರಸಂಗವು ಅನಿವಾರ್ಯವಾಗಿ ಒದಗಿಬಂದರೆ ಅವರಂತೆಯೇ ವರ್ತಿಸಬೇಕು. ಈ ವಿಷಯ ದಲ್ಲಿ ಪ್ರಸಿದ್ಧ ಸುಭಾಷಿತವೊಂದಿದೆ

ಲುಬ್ಧಮರ್ಥೇನ ಗೃಹ್ಣೀಯಾತ್ ಕ್ರುದ್ಧಮಂಜಲಿ ಕರ್ಮಣಾ ।
ಮೂರ್ಖಂ ಛಂಧೋನುವೃತ್ತ್ಯಾ ಚ ತತ್ವಾರ್ಥೇನ ಚ ಪಂಡಿತಮ್॥

ಲೋಭಿಯನ್ನು ಹಣದಾಸೆ ತೋರಿಸಿ, ಸಿಟ್ಟಿಗೆದ್ದವನಿಗೆ ವಿನಯದಿಂದ ತಲೆಬಾಗಿ, ಪಂಡಿತನನ್ನು ವಿವೇಕದ ಮಾತುಗಳಿಂದ ಒಲಿಸಿಕೊಳ್ಳುವಂತೆ, ಮೂರ್ಖನನ್ನು ಅವನಂತೆಯೇ ಮಾತಾಡಿ ಒಲಿಸಿಕೊಳ್ಳಬೇಕು ಎಂದು ಈ ಶ್ಲೋಕವು ಉಪದೇಶಿಸುತ್ತದೆ.

## ೨೭೩. ಆಯಸೈರಾಯಸಂ ಛೇದ್ಯಮ್

ಮೇಲಿನ ಸೂತ್ರಕ್ಕೆ ದೃಷ್ಟಾಂತರೂಪವಾಗಿ ಇಲ್ಲಿ ಕಬ್ಬಿಣವನ್ನು ಕಬ್ಬಿಣದಿಂದಲೇ ಕತ್ತರಿಸಲಾಗುತ್ತದೆ ಎಂದು ಬಹು ಮಾರ್ಮಿಕವಾಗಿ ಹೇಳಲ್ಪಟ್ಟಿದೆ. ಹಾಗೆಯೇ ಮೂರ್ಖನನ್ನು ಅವನಂತೆ ಮಾತನಾಡಿ ಒಲಿಸಿಕೊಳ್ಳಬೇಕೆಂಬುದೇ ತಾತ್ಪರ್ಯ.

## ೨೭೪. ನಾಸ್ತ್ಯಧೀಮತಃ ಸಖಾ

ಬುದ್ಧಿಹೀನನೊಂದಿಗೆ ಯಾರೂ ಮೈತ್ರಿಯನ್ನು ಬಯಸುವುದಿಲ್ಲ. ಅಂಥ ಮೈತ್ರಿಯು ಮೂರ್ಖನಲ್ಲದವನನ್ನು ಮೂರ್ಖನಾಗಿಸುವುದಷ್ಟೇ ಅಲ್ಲ, ಒಂದು ವೇಳೆ ಮೂರ್ಖನಿಗೆ ಅದರಿಂದ ಸಮಾಧಾನ ಒದಗೀತು ಎಂಬ ಸದ್ಭಾವನೆಯಿಂದ ಯಾರಾದರೂ ಮೈತ್ರೀಭಾವವನ್ನು ತೋರಿಸಿದರೆ ಅದು ಕಾಲ ಹಾಗು ಶಕ್ತಿಯ ಅಪವ್ಯಯವಾಗುತ್ತದೆ ಮಾತ್ರ.

## ೨೭೫. ಪಿಶುನ ವಾದಿನೊ ನ ರಹಸ್ಯಮ್

ಚಾಡಿಕೋರನಲ್ಲಿ ಯಾವ ವಿಷಯವೂ ರಹಸ್ಯವಾಗಿ ಉಳಿಯಲಾರದು, ಏಕೆಂದರೆ ಇವನೂ ಮೂರ್ಖರ ಗುಂಪಿಗೆ ಸೇರಿದವನೇ. ಆದರೆ ಮೂರ್ಖ-ತನದೊಂದಿಗೆ ದುಷ್ಟತನವೂ ಸೇರಿದ್ದರಿಂದ ಚಾಡಿಕೋರನಾಗುತ್ತಾನೆ. ಇವ-ನಿಗೆ ಸ್ವಾಭಿಮಾನವಿರುವುದಿಲ್ಲ. ವಿವೇಕವಂತೂ ಸಮೀಪಕ್ಕೆ ಹಾಯುವುದಿಲ್ಲ, ತೃಪ್ತಿಯ ಅರ್ಥವೂ ಇವನಿಗೆ ತಿಳಿಯದು. ದುಷ್ಟತನದ ಪರಿಣಾಮವಾಗಿ ಇನ್ನೊಬ್ಬರ ಚಾರಿತ್ರ್ಯದ ವಧಮಾಡಿ, ತನ್ನ ಬೇಳೆ ಬೇಯಿಸಿಕೊಳ್ಳಬೇಕೆಂಬ ಪ್ರಯತ್ನದಲ್ಲಿದ್ದು ಸಮಾಜದಿಂದ ತಿರಸ್ಕೃತನಾಗುತ್ತಾನೆ. ಅವಶ್ಯಬಿದ್ದಾಗ ಸ್ವಾರ್ಥಿಗಳು ಇವನ ದುರುಪಯೋಗವನ್ನು ಮಾತ್ರ ಪಡೆಯುತ್ತಾರೆ.

## ೨೭೬, ಪರರಹಸ್ಯಂ ನೈವ ಶ್ರೋತವ್ಯಮ್

ಇನ್ನೊಬ್ಬರ ರಹಸ್ಯವನ್ನು ತಿಳಿದುಕೊಳ್ಳಲು ಪ್ರಯತ್ನಿಸಬಾರದು ಎಂದು ಹೇಳಿದ ಈ ಉಪದೇಶದ ಮಾತು ರಾಜಕಾರಣಕ್ಕೆ ಸಂಬಂಧಪಟ್ಟದ್ದಲ್ಲ ಎಂಬುದನ್ನು ಮರೆಯಕೂಡದು. ಏಕೆಂದರೆ ಶತ್ರುರಾಜರ ಚಟುವಟಿಕೆ-ಗಳನ್ನು ಗುಪ್ತಚಾರರ ಮುಖಾಂತರವಾಗಿ ತಿಳಿದುಕೊಳ್ಳುವುದು ರಾಜರ ಕರ್ತವ್ಯ. ಸಾಮಾನ್ಯ ಮನುಷ್ಯಧರ್ಮ ಎಂಬ ಅರ್ಥದಲ್ಲಿ ಇನ್ನೊಬ್ಬರ ರಹಸ್ಯದ ವಿಷಯಗಳನ್ನು ತಿಳಿದುಕೊಳ್ಳುವುದು ಸಭ್ಯತನವಲ್ಲ ಎಂದು ಈ ಸೂತ್ರವು ತಿಳಿಸುತ್ತದೆ. ಇನ್ನೊಬ್ಬರ ಓಲೆಗಳನ್ನು ಓದಬಾರದು ಎಂದು ಹೇಳುವುದನ್ನು ಇಲ್ಲಿ ಸ್ಮರಿಸಬಹುದು.

## ೨೭೭. ವಲ್ಲಭಸ್ಯ ಕಾರಕತ್ವಮಧರ್ಮಯುಕ್ತಮ್

ತನಗೆ ಬೇಕಾದವರಿಗೆ ಮಾತ್ರ ಎಲ್ಲಿಯಾದರೂ ಅನುಕೂಲ ಮಾಡಿ-

ಕೊಡುವುದೂ ಅಧರ್ಮವೇ ಎಂದೂ ಹೇಳುವ ಈ ಸೂತ್ರದ ಅರ್ಥವು ಉದಾ-
ಹರಣೆಗಳಿಲ್ಲದೆ ಸ್ಪಷ್ಟವಾಗಲಾರದು. ' ವಲ್ಲಭಕಾರಕತ್ವ ' ಎಂಬ ಶಬ್ದ-
ಪ್ರಯೋಗದಲ್ಲಿ Favouritism ಇಲ್ಲವೆ Nepotism ಎಂಬ ಇಂಗ್ಲಿಷ್
ಶಬ್ದಗಳಲ್ಲಿಯ ಅರ್ಥವು ಧ್ವನಿತವಾಗುತ್ತದೆ. ತಮ್ಮ ಗುರುತಿನವರಿಗೆ ಹಾಗು
ಬಳಗದವರಿಗೆ ಅನ್ಯಾಯದಿಂದ ಸಹಾಯ ಮಾಡುವುದು ಅಧರ್ಮವೇ.
ಇದಕ್ಕೆ ದೃಷ್ಟಾಂತವೆಂದು—ಬಸ್ ಕಂಡಕ್ಟರರು ತಮ್ಮವರಿಗೆ ಪರಭಾರೆ
ತಿಕೀಟು ಕೊಡುವುದು, ರೇಶನ್ ಅಂಗಡಿಗಳಲ್ಲಿ ಬಳಗದವರಿಗೆ ಅನುಕೂಲ
ಮಾಡಿಕೊಟ್ಟು, ಜನಸಾಮಾನ್ಯರಿಗೆ ಅನಾನುಕೂಲವಾಗುವಂತೆ ವರ್ತಿಸು-
ವುದು; ವಿದ್ಯಾಸಂಸ್ಥೆಗಳಲ್ಲಿ ಪ್ರವೇಶಕೊಡುವಾಗ ತನ್ನವರಿಗೆ ಅನ್ಯಾಯದಿಂದ
ಸೀಟು ಕೊಡಿಸುವುದು—ಇವೆನ್ನೆಲ್ಲ ಉದಾಹರಿಸಬಹುದು.

## ೨೭೮. ಸ್ವಜನೇಷ್ವತಿಕ್ರಮೋ ನ ಕರ್ತವ್ಯಃ

ತಮ್ಮವರೆನಿಸಿಕೊಳ್ಳುವಂಥ ಬಳಗದವರು, ಮಿತ್ರರು, ಪರಿಚಯ-
ಸ್ಥರು ಇವರೊಂದಿಗೆ ಅತಿಕ್ರಮ ಎಂದರೆ ಒಂದು ಹದ್ದು ಅಥವಾ ಮರ್ಯಾದೆ
ಯನ್ನು ಮೀರಿ ವ್ಯವಹಾರ ಮಾಡಬಾರದು ಎಂದು ಉಪದೇಶಿಸುವ ಈ
ಸೂತ್ರವು ' ಅತಿ ಸರ್ವತ್ರ ವರ್ಜಯೇತ್ ' ಎಂಬುದನ್ನೇ ಬೇರೆ ಶಬ್ದಗಳಲ್ಲಿ
ಹೇಳಿದಂತಿದೆ. ಮರ್ಯಾದೆಯನ್ನು ಮೀರಿದ ಯಾವುದೇ ಕೃತಿಯು ಒಂದೆ-
ರಡು ಸಲ ಕ್ಷಮ್ಯವಾಗಬಹುದು, ಆದರೆ ಕೊನೆಗೆ ಅಸಹ್ಯವೆನಿಸುತ್ತದೆ. ಅದ್ದ-
ರಿಂದ ಬುದ್ಧಿವಂತರಾದವರು ತಮ್ಮ ವ್ಯವಹಾರಗಳಲ್ಲಿ ಒಂದು ರೀತಿಯ
ಕಟ್ಟು-ನಿಟ್ಟುಗಳನ್ನಿಟ್ಟುಕೊಳ್ಳಬೇಕು. ಅತಿಯಾಗಿ ಪದೇ-ಪದೇ ಸಾಲ
ಬೇಡುವುದು, ಬಾಂಧವರಾಗಿದ್ದರೂ ಪ್ರಾಯದ ಹೆಣ್ಣುಮಕ್ಕಳೊಂದಿಗೆ ಅತಿ-
ಯಾಗಿ ಸಲಿಗೆಯಿಂದ ವರ್ತಿಸುವುದು, ಬಳಗದವರಿಂದ ಮಿತಿಮೀರಿ ಉಪ-
ಕಾರ ಅಥವಾ ಸಹಕಾರವನ್ನು ಬಯಸುವುದು—ಇತ್ಯಾದಿಗಳನ್ನು ವರ್ಜಿಸ-
ಬೇಕು.

## ೨೭೯. ಮಾತಾಪಿ ದುಷ್ಟಾ ತ್ಯಾಜ್ಯಾ

ಸ್ವಜನರೊಂದಿಗೆ ವ್ಯವಹರಿಸುವ ರೀತಿಯನ್ನು ತಿಳಿಸಿ, ಬಂಧುಗಳಲ್ಲೇ ಅತ್ಯಂತ ಶ್ರೇಷ್ಠಳೆನಿಸುವ ತಾಯಿಯು ಕೂಡ ದುಷ್ಟಸ್ವಭಾವದವಳಾಗಿದ್ದರೆ, ಅವಳನ್ನು ತ್ಯಜಿಸಬೇಕು ಎಂದು ಈ ಸೂತ್ರವು ತಿಳಿಸುತ್ತದೆ. 'ನ ಮಾತುಃ ಪರದೈವತಮ್' ಎಂದರೆ ತಾಯಿಗಿಂತ ಹೆಚ್ಚಿನ ದೇವತೆಯಿಲ್ಲ ಎಂದು ನಮ್ಮ ಧರ್ಮವು ಬೋಧಿಸುತ್ತಿರುವಾಗ, ಮೇಲಿನ ಉಪದೇಶವು ಅಸಮಂಜಸ-ವೆಂದೆನಿಸಬಹುದು. ಆದರೆ ಇವೆಲ್ಲ ಅಪವಾದಾತ್ಮಕ ಪ್ರಸಂಗಗಳು—ತನ್ನ ಅತಿಯಾದ ದುಷ್ಟ ಸ್ವಭಾವದಿಂದ ಎಲ್ಲರಿಗೂ ಅಪ್ರಿಯಳಾದ, ಮಕ್ಕಳನ್ನು ಕೂಡ ಲೆಕ್ಕಿಸದ ದುಷ್ಟ ತಾಯಂದಿರು ಎಲ್ಲಿಯೋ ದೊರೆಯಬಹುದು. ಅಂಥವರ ವಿಷಯದಲ್ಲಿ ನಿಷ್ಪಕ್ಷಪಾತ ದೃಷ್ಟಿಯಿಂದ ಚಾಣಕ್ಯನು ಈ ನಿರ್ಣಯವನ್ನು ಕೊಟ್ಟಿದ್ದಾನೆ. ಇದು ತಾಯಿಗೆ ತೋರಿದ ಅವಮರ್ಯಾದೆಯಲ್ಲ. ಆದರೆ ದುಷ್ಟಸ್ವಭಾವಕ್ಕೆ ಸೂಚಿಸಿದ ಪ್ರತೀಕಾರ.

## ೨೮೦. ಸ್ವಹಸ್ತೋಽಪಿ ವಿಷದಿಗ್ಧಃ ಛೇದ್ಯಃ

ಮೇಲಿನ ಸೂತ್ರಕ್ಕೆ ದೃಷ್ಟಾಂತವೆಂದು. ನಮ್ಮ ಬೆರಳಿಗೆ ಹಾವು ಕಚ್ಚಿ ವಿಷವೇರುವಾಗ, ಅದನ್ನು ಕತ್ತರಿಸಿಹಾಕಿ ಜೀವವನ್ನುಳಿಸುವಂತೆ: ತಾಯಿಯ ಸ್ವಭಾವವು ಮಕ್ಕಳನ್ನೇ ನಾಶಮಾಡುವ ಮಟ್ಟಕ್ಕೆ ಹೋಗುವಷ್ಟು ಕ್ರೂರ-ವಾಗಿದ್ದಲ್ಲಿ, ಅವಳನ್ನು ತ್ಯಜಿಸಬೇಕು ಎಂದು ಇಲ್ಲಿ ಸ್ಪಷ್ಟಪಡಿಸಲಾಗಿದೆ. ಆದರೆ ಅಪವಾದಾತ್ಮಕವಾಗಿ ತಾಯಿಯ ವಿಷಯದಲ್ಲಿ. ಹೀಗೆ ಹೇಳಿದ್ದರೂ ಅವಳು ಎಲ್ಲರಿಗಿಂತಲೂ ಪೂಜ್ಯಳೆಂಬುದನ್ನು ಮುಂದಿನ ಸೂತ್ರದಲ್ಲಿ ಚಾಣ-ಕ್ಯನು ವಿವರಿಸುತ್ತಾನೆ :

## ೨೮೧. ಗುರೂಣಾಂ ಮಾತಾ ಗರೀಯಸೀ

ನಮ್ಮ ಶಾಸ್ತ್ರಗಳು. ಗುರುವಿಗಿಂತ ಹೆಚ್ಚಿನವರು ಯಾರೂ ಇಲ್ಲ ಎಂದು ಸಾರುತ್ತವೆ. ' ನ ಗುರೋರಧಿಕಮ್ '. ' ನಾಸ್ತಿ ತತ್ತ್ವಂ ಗುರೋಃ ಪರಮ್ '. ' ಹರ ಮುನಿವರೂ ಗುರು ಮುನಿಯಲಾರ ' ಎಂಬ ವಚನಗಳೇ ಇದಕ್ಕೆ ಸಾಕ್ಷಿ. ಹೀಗಿದ್ದರೂ ಚಾಣಕ್ಯನು ಗುರುವಿಗಿಂತಲೂ ತಾಯಿಯು ಹೆಚ್ಚಿನವ-ಳೆಂದು ಹೇಳುತ್ತಾನೆ. ಇದು. ಅಪವಾದಾತ್ಮಕವಾದ ಹಲವು ದುಷ್ಟ ತಾಯಂದಿರನ್ನು ಬಿಟ್ಟರೆ. ಸಾರ್ವತ್ರಿಕವಾಗಿ ಸ್ವೀಕಾರಾರ್ಹವಾದ ನಿಯಮ. ಎಲ್ಲರ ಉಪಕಾರವನ್ನು ತೀರಿಸಬಹುದು. ಆದರೆ ತಾಯಿಯ ಉಪಕಾರವನ್ನು ತೀರಿ-ಸಲು ಸಾಧ್ಯವಿಲ್ಲವೆಂಬುವನ್ನು ಶಾಸ್ತ್ರಗಳು ಸಾರಿಹೇಳುತ್ತವೆ. ಒಂದು ಪ್ರಸಂಗ-ದಲ್ಲಿ, ಗುರುವು ನಮಗೆ ದೇವರನ್ನು ಕಾಣುವ ಮಾರ್ಗವನ್ನು ತೋರಿಸುವುದ-ರಿಂದ, ಅವನು ದೇವರಿಗಿಂತ ಹೆಚ್ಚಿನವನು ಎಂದು ಸಂತ ಕಬೀರದಾಸರು ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು. ಆದರೆ ಇಂಥ ಗುರುವಿಗಿಂತ ತಾಯಿಯು ಹೆಚ್ಚಿನವಳೆಂದ ಮೇಲೆ ಅವಳಿಗೆ ಸಮಾನ ಯಾರೂ ಇಲ್ಲವೆಂದೇ ಸ್ಪಷ್ಟ-ವಾಗುತ್ತದೆ. ಪರಿವ್ರಾಜಕ ಸನ್ಯಾಸಿಗಳಾಗಿ ಶಂಕರ ಭಗವತ್ಪಾದರು ಸಂನ್ಯಾಸ-ಸ್ವೀಕಾರಕ್ಕೆ ಒಪ್ಪಿಗೆ ಕೊಟ್ಟ ತಾಯಿಯ ಅಂತ್ಯಕಾಲಕ್ಕೆ ಧಾವಿಸಿಬಂದು. ಅವಳ ದೇಹಕ್ಕೆ ಸಂಸ್ಕಾರ ಮಾಡಿದ್ದು. ತಾಯಿಯ ಹಿರಿಮೆಗೆ ದೃಷ್ಟಾಂತ. ಅದಕ್ಕೆಂದೇ ಮುಂದಿನ ಸೂತ್ರದಲ್ಲಿ—

## ೨೮೨. ಸರ್ವಾಸ್ವವಸ್ಥಾಸು ಮಾತಾ ಭರ್ತವ್ಯಾ

ಎಂತಹ ಪರಿಸ್ಥಿತಿಯಲ್ಲಿಯೂ ತಾಯಿಯ ಯೋಗಕ್ಷೇಮವನ್ನು ನೋಡಿ-ಕೊಳ್ಳಬೇಕೆಂದು ಉಪದೇಶಿಸಲ್ಪಟ್ಟಿದೆ. ಒಂದು ವೇಳೆ ದುಷ್ಟತನಕ್ಕಾಗಿ ದೂರವಿಟ್ಟರೆ. ಗ್ರಾಸಾಚ್ಛಾದನಕ್ಕಾಗಿ ವ್ಯವಸ್ಥೆ ಮಾಡಬೇಕಾದದ್ದು ಅವಶ್ಯ ಕರ್ತವ್ಯವೆಂದೇ ಇದರ ತಾತ್ಪರ್ಯ.

## ೨೮೩. ಪರೋಽಪಿ ಚ ಹಿತೋ ಬಂಧುಃ

ತಾಯಿಯನ್ನೊಳಗೊಂಡು ದುಷ್ಟರಾದ ಸ್ವಜನರನ್ನು ತ್ಯಾಗಮಾಡಬಹುದೆಂದು ಹೇಳಿದ ಸೂತ್ರಕಾರನು. ಇಲ್ಲಿ ಯಾವುದೇ ಸಂಬಂಧವಿಲ್ಲದ ವ್ಯಕ್ತಿಯೊಬ್ಬನು ನಮ್ಮ ಹಿತವನ್ನು ಬಯಸಿ, ಹಾಗೆ ನಡೆದುಕೊಂಡರೆ, ಅವನನ್ನು ನಮ್ಮ ಬಂಧುವೆಂದು ತಿಳಿದುಕೊಳ್ಳಬೇಕೆಂದು ಹೇಳುತ್ತಾನೆ. ಇಲ್ಲಿ ಕಾಳಿದಾಸನು ಹೇಳಿದ ದಿಲೀಪರಾಜನ ಸ್ವಭಾವ ವರ್ಣನೆಯು ನೆನಪಾಗುತ್ತದೆ :

ದ್ವೇಷ್ಯೋಽಪಿ ಸಮ್ಮತಃ ಶಿಷ್ಟಃ ತಸ್ಯಾರ್ತಸ್ಯ ಯಥೌಷಧಮ್ ।
ತ್ಯಾಜ್ಯಂ ದುಷ್ಟಃ ಪ್ರಿಯೋಽಪ್ಯಾಸೀತ್ ಅಂಗುಲೀವುರಗಕ್ಷತಾ ॥

ದಿಲೀಪರಾಜನಿಗೆ, ಶತ್ರುವು ಕೂಡ ಒಳ್ಳೆಯವನಾಗಿದ್ದರೆ, ಆದರಣೀಯನೆನಿಸುತ್ತಿದ್ದನು. ಹಾಗೆಯೇ ಸ್ವಜನರು ದುಷ್ಟರಾಗಿದ್ದರೆ, ಹಾವು ಕಚ್ಚಿದ ಬೆರಳಿನಂತೆ ಅವರನ್ನು ತ್ಯಜಿಸುತ್ತಿದ್ದನು.

## ೨೮೪. ಕಕ್ಷಾದಪ್ಯೌಷಧಂ ಗೃಹ್ಯತೇ

ಒಣಗಿದ ಗಿಡಗಳೇ ಇದ್ದ ಅರಣ್ಯದಲ್ಲಿ ಕೂಡ ಔಷಧಿಯು ( ವನಸ್ಪತಿ ) ದೊರೆತರೆ ಅದನ್ನು ತಂದು ಉಪಯೋಗಿಸುವಂತೆ, ಪರಕೀಯನಾದರೂ ನಮ್ಮ ಹಿತವನ್ನು ಬಯಸುವವನು ಬಂಧುವೇ ಎಂದು ಮೇಲಿನ ಸೂತ್ರಕ್ಕೆ ಇಲ್ಲಿ ದೃಷ್ಟಾಂತವನ್ನು ಕೊಡಲಾಗಿದೆ.

## ೨೮೫. ನಾಸ್ತಿ ಚೋರೇಷು ವಿಶ್ವಾಸಃ

ಕಳ್ಳರ ಮೇಲೆ ವಿಶ್ವಾಸವಿಡಬಾರದೆಂದು ಹೇಳುವ ಈ ಸೂತ್ರವು

ಮನುಷ್ಯನ ಸ್ವಭಾವವು ಬದಲಾಗದು ಎಂಬ ಸತ್ಯವನ್ನು ಅಪ್ರತ್ಯಕ್ಷವಾಗಿ ಸೂಚಿಸುತ್ತದೆ. ಕಳ್ಳನು ಯಾವಾಗಲೂ ಕಳ್ಳನೇ. ಅವನಿಗೆ ಯಾರಾದರೂ ಒಳ್ಳೆಯ ಭಾವನೆಯಿಂದ ತಮ್ಮಲ್ಲಿ ಇಟ್ಟುಕೊಂಡು, ಸತ್ಕರಿಸಿ, ಚೆನ್ನಾಗಿ ಆತಿಥ್ಯವನ್ನು ಮಾಡಿದರೂ ಮರಳಿ ಹೋಗುವಾಗ ಯಾರಿಗೂ ಗೊತ್ತಾಗದಂತೆ, ಏನನ್ನಾದರೂ ಕದ್ದುಕೊಂಡು ಹೋಗುತ್ತಾನೆ ಎನ್ನುವುದು ಅನುಭವಗಮ್ಯವಾದ ಮಾತು. ಆದ್ದರಿಂದ ಕಳ್ಳರು ಹಾಗು ಕಳ್ಳರೆನಿಸಿಕೊಳ್ಳದಿದ್ದರೂ ಕಳ್ಳರಂತೆ ವ್ಯವಹರಿಸುವರೆಂದು ಚಾಣಕ್ಯನು ಉದಾಹರಿಸಿದ್ದಾನೆ. ವ್ಯಾಪಾರಿ ಹಾಗು ಉದ್ಯಮವರ್ಗದವರು, ಲಂಚವೇ ಸರ್ವಸ್ವವೆಂದು ತಿಳಿದ ಸರಕಾರಿ ಅಧಿಕಾರಿಗಳು ವಿಶ್ವಾಸಕ್ಕೆ ಪಾತ್ರರಲ್ಲ. ತಮ್ಮ ಸ್ವಾರ್ಥದ ಸ್ವಭಾವವನ್ನು ಅವರು ಎಂದೂ ಬಿಡಲಾರರು.

## ೨೮೬. ಅಪ್ರತೀಕಾರೇಷ್ವನಾದರೋ ನ ಕರ್ತವ್ಯಃ

ವಿಘ್ನಗಳು ಅಥವಾ ಪ್ರತೀಕಾರವು ಉಂಟಾಗದಿದ್ದ ಮಾತ್ರಕ್ಕೆ ಕೈಕೊಂಡ ಕಾರ್ಯವು ಇನ್ನೇನು ಅನಾಯಾಸವಾಗಿ ಸಾಗುತ್ತದೆ ಎಂದು ಆ ವಿಷಯದಲ್ಲಿ ಅಲಕ್ಷ್ಯ ಮಾಡಕೂಡದು. ಕಾರ್ಯತತ್ಪರತೆ ಹಾಗು ಆ ವಿಷಯದಲ್ಲಿ ಜಾಗರೂಕತೆ ( Seriousness & Sincerity ) ಇಲ್ಲವಾದರೆ ಸುಲಭವಾಗಿ ಸಾಧಿಸಬಹುದಾದ ಕಾರ್ಯಗಳು ಕೂಡ ವಿಲಂಬಕ್ಕೆ ಬಿದ್ದು, ಅಸಾಧ್ಯವೆನಿಸುವ ಸ್ಥಿತಿಗೆ ಹೋಗಿ ಮುಟ್ಟುತ್ತವೆ. ಆದ್ದರಿಂದ ಎಂತಹ ಕಾರ್ಯವಿದ್ದರೂ ಅವನ್ನು ಹಗುರಾಗಿ ತೆಗೆದುಕೊಳ್ಳಬಾರದೆಂಬುದೇ ಈ ಸೂತ್ರದ ತಾತ್ಪರ್ಯ.

## ೨೮೭. ವ್ಯಸನಂ ಮನಾಗಪಿ ಬಾಧತೇ

ಕಾಲ ಗತಿಸಿದಂತೆ ಮನಸ್ಸಿಗಾದ ಕ್ಲೇಶವು ಮಾಯವಾಗುವುದೆಂದು

ಈ ಹಿಂದೆ ಹೇಳಿದ್ದರೂ. ತತ್ಕಾಲದಲ್ಲಿ ಮಾತ್ರ. ಎಷ್ಟೇ ಕ್ಷುಲ್ಲಕವಿದ್ದರೂ ಕೂಡ ದುಃಖವು ಮನಸ್ಸಿನ ನೆಮ್ಮದಿಯನ್ನು ಕಳೆಯುವುದರಿಂದ ಕೈಕೊಂಡ ಕಾರ್ಯಗಳು ಸುಗಮವಾಗಿ ಸಾಗುವುದಿಲ್ಲ. ಅರ್ಥಾತ್ ಅಡೆತಡೆಗಳು ಉಂಟಾಗುತ್ತವೆ. ಆದ್ದರಿಂದ ಇಂಥ ಪ್ರಸಂಗದಲ್ಲಿ ವಿವೇಕದಿಂದ ನಡೆದುಕೊಂಡು ಜೀವನವನ್ನು ಸಾಗಿಸಬೇಕು. ಮನುಷ್ಯಸ್ವಭಾವಕ್ಕೆ ದುಃಖವನ್ನು ಸಹಿಸಿಕೊಳ್ಳುವ ಸಾಮರ್ಥ್ಯವಿರುವುದು ಅಪರೂಪ. ಎಂತಹ ತಿಳಿದವರೂ ಕೂಡ ದುಃಖದಿಂದ ಕರಗಿಹೋಗುವುದೇ ಇದಕ್ಕೆ ಸಾಕ್ಷಿ.

## ೨೮೮. ನಾಸ್ತ್ಯವಮಾನಭಯಂ ಅನಾರ್ಯಸ್ಯ

ಅನಾರ್ಯನಿಗೆ ಅವಮಾನದ ಅಂಜಿಕೆ ಇಲ್ಲ ಎಂದು ಹೇಳುವ ಈ ಸೂತ್ರದಲ್ಲಿ ' ಆರ್ಯ ' ಶಬ್ದಕ್ಕೆ. ಮಧ್ಯ ಏಷಿಯಾದಿಂದ ಬಂದು ಉತ್ತರ-ಹಿಂದುಸ್ತಾನದಲ್ಲಿ ನೆಲೆಸಿದವರು ಎಂಬರ್ಥವಲ್ಲ. ಆರ್ಯ–ದ್ರಾವಿಡ ಭೇದವನ್ನು ಬೆಳೆಸಿ, ಭಾರತದಲ್ಲಿ ಭಾವೈಕ್ಯತೆ ಉಳಿಯಬಾರದೆಂದು ಸೃಷ್ಟಿಸಿದ ಪಾಶ್ಚಿಮಾತ್ಯರ ಸ್ವಕಪೋಲಕಲ್ಪಿತ ಸಿದ್ಧಾಂತದ ಪ್ರಕಾರ ಆರ್ಯರು ಭಾರತದ ಮೂಲನಿವಾಸಿಗಳಲ್ಲ, ಎಂಬ ತಪ್ಪು ಕಲ್ಪನೆ ಹಲವರಲ್ಲಿ ಬೇರೂರಿದೆ. ಆರ್ಯರು ಸರಸ್ವತೀ ನದಿಯ ದಂಡೆಯ ಮೇಲೆ ಬೆಳೆದ ಸಂಸ್ಕೃತಿಗೆ ಸೇರಿದವರು. ಈ ಸಂಸ್ಕೃತಿಯು ದ್ರಾವಿಡ ಸಂಸ್ಕೃತಿಯಲ್ಲ. ಆರ್ಯರು ಇಲ್ಲಿಯ ಮೂಲನಿವಾಸಿಗಳು ಎಂದು ಇತ್ತೀಚೆಗೆ ಪಾಶ್ಚಿಮಾತ್ಯ ಸಂಶೋಧಕರೊಬ್ಬರು ನಿರ್ಣಯಕೊಟ್ಟಿದ್ದಾರೆ. ಏನೇ ಇರಲಿ, ಇಲ್ಲಿ ಆರ್ಯ ಶಬ್ದಕ್ಕೆ —

ಕರ್ತವ್ಯಮಾಚರನ್ ಕರ್ಮ ಅಕರ್ತವ್ಯಮನಾಚರನ್ ।
ತಿಷ್ಠತಿ ಪ್ರಕೃತಾಚಾರೇ ಸತು ಆರ್ಯ ಇತಿ ಸ್ಮೃತಃ॥

ಎಂಬ ಉಕ್ತಿಯಂತೆ ಅಕಾರ್ಯ ಪ್ರವೃತ್ತನಾಗದೆ, ಶಾಸ್ತ್ರವಿಹಿತವಾದ ಮಾರ್ಗದಿಂದ ನಡೆದು. ತನ್ನ ಕರ್ತವ್ಯವನ್ನು ನಿರ್ವಹಿಸುವ ಎಲ್ಲರೂ

ಆರ್ಯರೇ. ಅವರು ದಕ್ಷಿಣದವರು ಇರಬಹುದು ಅಥವಾ ಉತ್ತರದವರಿರ-ಬಹುದು. ಆದ್ದರಿಂದ ' ಆರ್ಯ ' ಶಬ್ದಕ್ಕೆ ಸಾಂಸ್ಕೃತಿಕ ಪರಂಪರೆ ಇದೆಯೇ ವಿನಃ ಭೌಗೋಲಿಕ ಪರಂಪರೆ ಇಲ್ಲ.

ಶಾಕುಂತಲ ನಾಟಕದಲ್ಲಿ ದುಷ್ಯಂತನು ಶಕುಂತಲೆಯೊಂದಿಗೆ ತನ್ನ ವಿವಾಹವಾಗಿಲ್ಲ ಎಂದು ಹೇಳಿ, ಅವಳ ಮೇಲೆ ಸ್ವೇಚ್ಛಾಚಾರದ ತಪ್ಪು ಹೊರಿಸಿದಾಗ, ಅವಳು ಅವನನ್ನು ಅನಾರ್ಯ ಎಂದು ತೆಗಳುತ್ತಾಳೆ. ಇಬ್ಬರೂ ಉತ್ತರದವರೇ ಆಗಿದ್ದರೂ ಅವನಿಗೆ ಅನಾರ್ಯನೆಂದುದಕ್ಕೆ ಅವನ ಅಸಂಸ್ಕೃತ ವ್ಯವಹಾರವೇ ಕಾರಣ. ಆದ್ದರಿಂದ ಪ್ರಕೃತ ಸೂತ್ರವು ಅಕಾರ್ಯತತ್ಪರ-ನಾದ ನರಾಧಮನಿಗೆ ಅವಮಾನವೆಂಬುದಿಲ್ಲ. ಅವನು ಕೀಳುಮಟ್ಟದವ-ನಾದುದರಿಂದ ಸುಸಂಸ್ಕೃತ ವ್ಯವಹಾರವು ಅವನಲ್ಲಿ ಇರಲಾರದು. ಸ್ವಾರ್ಥ-ಕ್ಕಾಗಿ ಏನೆಲ್ಲವನ್ನೂ ಮಾಡುವುದೇ ಅವನ ಧರ್ಮ ಎಂದು ವಿವರಿಸು-ತ್ತದೆ.

## ೨೮೯. ಅಯಶೋ ಭಯಂ ಭಯೇಷು

ಅಸಂಸ್ಕೃತನಿಗೆ ಅವಮಾನದ ಭಯವಿಲ್ಲ ಎಂದು ಮೇಲಿನ ಸೂತ್ರದಲ್ಲಿ ವಿವರಿಸಿದ್ದರೂ ಮರ್ಯಾದಸ್ಥರಿಗೆ ಮಾತ್ರ ಎಲ್ಲ ಭಯಗಳಲ್ಲಿಯೂ ಅಪ-ಕೀರ್ತಿಯ ಭಯವೇ ಅತಿ ದಾರುಣವಾದದ್ದು ಎಂದು ಹೇಳಿ ಮನುಷ್ಯನು ಚರಿತ್ರಹೀನನಾಗಿ ಅಪಕೀರ್ತಿಗೆ ಗುರಿಯಾಗಬಾರದೆಂದು ಈ ಸೂತ್ರವು ಪರ್ಯಾಯವಾಗಿ ಸೂಚಿಸುತ್ತದೆ.

## ೨೯೦, ನ ಚೇತನವತಾಂ ವೃತ್ತಿಭಯಮ್

ಚೇತನ ಶಬ್ದವು ಉದ್ಯೋಗಿಯಾದ ಪುರುಷ ಎಂಬ ಅರ್ಥದಲ್ಲಿ ಇಲ್ಲಿ ಉಪಯೋಗಿಸಲ್ಪಟ್ಟಿದೆ. ಕೇವಲ ಜೀವಂತವಿರುವವನ ವಿಷಯಕ್ಕೆ ಚೈತನ್ಯ

ಶಬ್ದವನ್ನು ಪ್ರಯೋಗಿಸಿದರೆ, ಇಲ್ಲಿ ಸರಿಯಾದ ಅರ್ಥವು ದೊರೆಯಲಾರದು. ಪ್ರಕೃತ ಸೂತ್ರದ ತಾತ್ಪರ್ಯವೆಂದರೆ, ಉದ್ಯೋಗಿ ಪುರುಷನಿಗೆ ವೃತ್ತಿ-ಎಂದರೆ ಜೀವನೋಪಾಯದ ಭಯವಿಲ್ಲ. ಎಲ್ಲಿಯಾಗಲಿ ದೇವರು ತನಗೆ ದಯಪಾಲಿಸಿದ ಬುದ್ಧಿ ಹಾಗು ಬಲದಿಂದ ವೃತ್ತಿಯನ್ನು ಸಂಪಾದಿಸಿಕೊಂಡು ಜೀವನವನ್ನು ಸಾಗಿಸುತ್ತಾನೆ. ಅಲಂಕಾರಿಕವಾಗಿ ಹೇಳುವುದಾದರೆ ಸಂಪತ್ತು ಅವನನ್ನು ಹುಡುಕಿಕೊಂಡು ಬರುತ್ತದೆ. ( ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀ ) ಬುದ್ಧಿವಂತರಾದ ಉದ್ಯೋಗಶೀಲರಿಗೆ ಸರಕಾರವು ನೌಕರಿ ಕೊಡಬಾರದೆಂದು ಕಾನೂನು ಮಾಡಿದರೂ, ಅವರು ಉಪವಾಸ ಬೀಳುವುದಿಲ್ಲ ಎಂದು ಈ ಸೂತ್ರದ ಆಧಾರದ ಮೇಲಿಂದ ಹೇಳಬಹುದು.

## ೨೯೧. ನ ಜಿತೇಂದ್ರಿಯಾಣಾಂ ವಿಷಯಭಯಮ್

ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಂಡವನಿಗೆ, ವಿಷಯಗಳಿಂದ ಭಯವಿಲ್ಲ. ರೂಪ, ರಸ, ಗಂಧ, ಸ್ಪರ್ಶ ಹಾಗು ಶಬ್ದ ಈ ಐದು ವಿಷಯಗಳು ಕಣ್ಣು, ನಾಲಗೆ, ಮೂಗು, ತ್ವಚೆ, ಕಿವಿ ಈ ಪಂಚೇಂದ್ರಿಯಗಳನ್ನು ಯಾವಾಗಲೂ ತಮ್ಮೆಡೆಗೆ ಎಳೆಯುತ್ತಿರುತ್ತವೆ. ಆದರೆ ಅವುಗಳನ್ನು ಜಯಿಸಿದಂಥ ಯೋಗಿಗೆ ಯಾವ ಭಯವೂ ಇಲ್ಲ. ರಾಮಕೃಷ್ಣ ಪರಮಹಂಸ, ವಿವೇಕಾನಂದ, ಭಗವಾನ್ ಬುದ್ಧ, ಅರವಿಂದರಂಥ ಮಹಾ ಯೋಗಿಗಳ ಜೀವನವನ್ನು, ಹಾಗೆಯೇ ಇತಿಹಾಸ, ಪುರಾಣಗಳಲ್ಲಿ ಬರುವ ಇನ್ನೂ ಅನೇಕ ಜಿತೇಂದ್ರಿಯರ ಚರಿತ್ರೆಗಳನ್ನು ಅಭ್ಯಸಿಸಿದಾಗ ಈ ಸೂತ್ರದ ಸತ್ಯಾರ್ಥವು ನಮಗೆ ಹೊಳೆಯುತ್ತದೆ. ಕಾಮಿನಿ, ಕಾಂಚನ ಹಾಗು ಕೀರ್ತಿಗಳಿಗೆ ಮರುಳಾಗುವುದು ಇಂಥ ಯೋಗಿಗಳ ಸ್ವಭಾವವಲ್ಲ.

## ೨೯೨. ನ ಕೃತಾರ್ಥಾನಾಂ ಮರಣಭಯಮ್

ಕೃತಾರ್ಥರು ಎಂದರೆ ಸತ್ಕಾರ್ಯಗಳಿಂದ ತಮ್ಮ ಜೀವನವನ್ನು ಸಾರ್ಥಕಗೊಳಿಸಿದವರು. ಜೀವನದಲ್ಲಿ ಸಾಧಿಸಲು ಯೋಗ್ಯವಾದ ಒಳ್ಳೆಯದೆಲ್ಲವನ್ನೂ ಸಾಧಿಸಿದವರು ಎಂಬರ್ಥ. ಮಹಾತ್ಮಾ ಗಾಂಧಿ, ಅಬ್ರಹಾಂ ಲಿಂಕನ್,ಸುಭಾಸಚಂದ್ರ ಬೋಸರಂಥವರೆಲ್ಲ ನಿಃಸ್ವಾರ್ಥಬುದ್ಧಿಯಿಂದ ಕಾರ್ಯತತ್ಪರರಾಗಿ ತಮ್ಮ ಜೀವನವನ್ನು ಸಾರ್ಥಕಗೊಳಿಸಿದವರು. ಅದ್ದರಿಂದಲೇ ಅವರ ದೇಹಗಳು ನಶಿಸಿಹೋಗಿದ್ದರೂ, ಕೀರ್ತಿಶೇಷರಾಗಿದ್ದಾರೆ. ಹಾಗೆಯೇ ಸಾಮಾನ್ಯರೂ ಕೂಡ ತಮ್ಮ ಜೀವನದಲ್ಲಿ ಕೇವಲ ಸ್ವಾರ್ಥಕ್ಕಾಗಿ ಹವಣಿಸದೆ. ಕರ್ತವ್ಯಬುದ್ಧಿಯಿಂದ ಕಾರ್ಯಮಾಡಿ, ಬದುಕನ್ನು ಬಾಳಿದರೆ ಅವರಿಗೂ ಮರಣಭಯವಿಲ್ಲ—ಎಂದು ಈ ಸೂತ್ರವು ತಿಳಿಸುತ್ತದೆ. ಕರ್ತವ್ಯವನ್ನು ನಿರ್ವಹಿಸಿದ ತೃಪ್ತಜೀವನವು ಮರಣದ ಭಯವನ್ನು ತರಲಾರದು ಎಂಬುದೇ ತಾತ್ಪರ್ಯ.

## ೨೯೩. ಕಸ್ಯಚಿದರ್ಥಂ ಸ್ವಮಿವಮನ್ಯತೇ ಸಾಧುಃ

ಸಜ್ಜನರು ಇನ್ನೊಬ್ಬರಿಗೆ ಸಹಕಾರ ನೀಡಬೇಕಾದಾಗ, ಸ್ವಕಾರ್ಯಕ್ಕೆ ಕೊಡುವಷ್ಟೇ ಮಹತ್ವವನ್ನು ಅವರ ಕಾರ್ಯಕ್ಕೂ ಕೊಡುತ್ತಾರೆ ಎಂದಾಗಲಿ ಅಥವಾ ತಮ್ಮ ಸಂಪತ್ತಿಗೆ ಕೊಡುವಷ್ಟು ಮಹತ್ವವನ್ನು ಪರರ ವಿಷಯದಲ್ಲಿಯೂ ತೋರಿ, ಪರಧನ ಹರಣ ವಿಷಯದಲ್ಲಿ ಆಸಕ್ತರಾಗಿರುವುದಿಲ್ಲ ಎಂದು ಪ್ರಕೃತ ಸೂತ್ರವು ಸಜ್ಜನರ ಸ್ವಭಾವವನ್ನು ಪರಿಚಯಿಸುತ್ತದೆ. ಈ ತತ್ವವು ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಹಾಗು ಅಪರಿಗ್ರಹ ಎಂದು ಹೇಳುವ ಪಂಚಸದ್ಗುಣಗಳಲ್ಲಿ ಅಸ್ತೇಯ ಎಂಬುದರ ಕಕ್ಷೆಯಲ್ಲಿ ಬರುತ್ತದೆ. ತನ್ನ ಸಂಪತ್ತಿಗೆ ಇರುವಷ್ಟೇ ಮಹತ್ವ ಬೇರೊಬ್ಬರದಕ್ಕೂ ಇದೆ ಎಂದು ತಿಳಿದುಕೊಂಡವನು ಎಂದೂ ಕದಿಯಲಾರ. ತನ್ನಂತೆ ಪರರ

ಬಗೆದೊಡೆ ಕೈಲಾಸ ಬಿನ್ನಾಣವಕ್ಕು ' ಎಂದು ಹೇಳಿದ ಸರ್ವಜ್ಞನ ಮಾತಿನ ಮರ್ಮವೂ ಇದೇ.

## ೨೯೪. ಪಲಾಲಮಪಿ ಪರದ್ರವ್ಯಂ ನ ಹರ್ತವ್ಯಮ್

ಸಂಪತ್ತನ್ನಷ್ಟೇ ಅಲ್ಲ, ಇನ್ನೊಬ್ಬರದೆಂದೆನಿಸುವ ಒಂದು ಹುಲ್ಲುಕಡ್ಡಿ-ಯನ್ನು ಕೂಡ ನಾವು ಹರಣಮಾಡಬಾರದು ಎಂದು ಹೇಳುವ ಈ ಸೂತ್ರವು ಪರಧನ ಹರಣದಲ್ಲಿ ಅಡಕವಾಗಿರುವ ಘೋರ ಪಾಪದ ಕಲ್ಪನೆಯನ್ನು ಆಲಂಕಾರಿಕವಾಗಿ ಕೊಡುತ್ತದೆ.

## ೨೯೫. ಪರವಿಭವೇಷ್ವಾದರೋ ನ ಕರ್ತವ್ಯಃ, ನಾಶಮೂಲತ್ವಾತ್

ಪರರ ಸಂಪತ್ತಿನ ಬಗ್ಗೆ ಆಸೆ ಆಕಾಂಕ್ಷೆಗಳನ್ನಿಟ್ಟುಕೊಳ್ಳುವುದು ಮುಂದೆ ನಮಗಾಗಿ ಕಾದಿರುವ ನಾಶಕ್ಕೆ ನಾಂದಿಯಾಗುತ್ತದೆ. ಅದರಿಂದ ದೂರ-ವಿರುವುದೇ ಹಿತಕಾರಕವು.

## ೨೯೬. ಪರದ್ರವ್ಯಾಪಹರಣಮಾತ್ಮದ್ರವ್ಯನಾಶಹೇತುಃ

ಪರಧನವನ್ನು ಹರಣಮಾಡುವುದು ಇಂದಿಲ್ಲ, ನಾಳೆ ನಮ್ಮ ಸಂಪತ್ತು ನಾಶವಾಗಲಿಕ್ಕೆ ಕಾರಣವಾಗುತ್ತದೆ ಎಂದು ಮೇಲಿನ ಸೂತ್ರದಲ್ಲಿಯ ವಿಚಾರ-ವನ್ನು ಪರ್ಯಾಯವಾಗಿ ಇಲ್ಲಿ ಹೇಳಲಾಗಿದೆ.

## ೨೯೭ ನ ಚೌರ್ಯಾತ್ಪರಂ ಮೃತ್ಯುಪಾಶಃ

ಪರಧನ ಹರಣವು ಕಳ್ಳತನದಲ್ಲಿಯ ಒಂದು ಪ್ರಕಾರ ಮಾತ್ರ. ಕಳ್ಳತನಕ್ಕಿಂತ ಕಠೋರವಾದ ಮೃತ್ಯುಪಾಶವು ಬೇರೊಂದಿಲ್ಲ ಎಂದು ಹೇಳುವ ಈ ಸೂತ್ರವು ಪರಧನ ಹರಣದ ವಿಷಯಕ್ಕೆ ಮನುಷ್ಯರು ಎಂದೂ ಪ್ರವೃತ್ತರಾಗಬಾರದೆಂದು ಮೇಲಿನ ಸೂತ್ರಗಳಲ್ಲಿ ಪದೇ–ಪದೇ ಹೇಳಿದ್ದನ್ನೇ ನಿರ್ಣಯರೂಪವಾಗಿ ಇಲ್ಲಿ ಸಮಾರೋಪ ಮಾಡಲ್ಪಟ್ಟಿದೆ.

## ೨೯೮. ಯವಾಗೂರಪಿ ಪ್ರಾಣಧಾರಣಂ ಕರೋತಿ ಕಾಲೇ

ದ್ರವ್ಯಾರ್ಜನೆಯು ಮನುಷ್ಯಜೀವನದ ಗುರಿಯಾಗಬಾರದು. ಅದು ಚರಿತಾರ್ಥಕ್ಕೆ ಒಂದು ಸಾಧನ ಮಾತ್ರ. ಅಂಬಲಿ ( ಯವಾಗೂ ) ಕುಡಿದು. ಮನುಷ್ಯನು ಬದುಕಿರುವುದು ಸಾಧ್ಯವಿದ್ದಾಗ, ಈ ಹಾಳುಹೊಟ್ಟೆಗಾಗಿ ಪಾಪಕಾರ್ಯಗಳಲ್ಲಿ ಪ್ರವೃತ್ತರಾಗುವುದು ಮೂರ್ಖತನದ ಪರಮಾವಧಿ ಎಂದು ಈ ಸೂತ್ರವು ಅಪ್ರತ್ಯಕ್ಷವಾಗಿ ತಿಳಿಸುತ್ತದೆ.

## ೨೯೯. ನ ಮೃತಸ್ಯ ಔಷಧಂ ಪ್ರಯೋಜನಮ್

ಸತ್ತವರನ್ನು ಔಷಧವು ಬದುಕಿಸಲಾರದು ಎಂದು ಹೇಳುವ ದೃಷ್ಟಾಂತರೂಪವಾದ ಈ ಸೂತ್ರವು ಪರಧನ ಹರಣ ಮಾಡಿದ ಮನುಷ್ಯನು ಚರಿತ್ರಹೀನನಾದುದರಿಂದ ಅಪಕೀರ್ತಿಗೆ ಪಾತ್ರನಾಗಿ, ಬದುಕಿದ್ದರೂ ಸತ್ತಂತೆಯೇ. ಹೀಗಿರುವಾಗ ಅಪಹರಿಸಿದ ಹಣವು ಅವನಿಗೆ ಏನೂ ಪ್ರಯೋಜನವಾಗಲಾರದು. ಅರ್ಥಾತ್ ಅಪಕೀರ್ತಿಯನ್ನು ಕಳೆಯಲಾರದು ಎಂಬ ಆದರ್ಶವಾದವನ್ನು ಈ ಸೂತ್ರವು ಬೋಧಿಸುತ್ತದೆ.

## ೩೦೦. ಸಮಕಾಲೇ ಸ್ವಯಮಪಿ ಪ್ರಭುತ್ವಸ್ಯ ಪ್ರಯೋಜನಂ ಭವತಿ

ವಿಷಮಕಾಲವೆಂದರೆ ಗಂಡಾಂತರಗಳ ಕಾಲ. ತದ್ವಿರುದ್ಧವಾಗಿ ಸಮ-ಕಾಲ ಶಬ್ದವು ಶಾಂತಪರಿಸ್ಥಿತಿಯನ್ನು ಸೂಚಿಸುತ್ತದೆ. ಇಂಥ ಕಾಲದಲ್ಲಿ ಕೇವಲ ಪ್ರಭುತ್ವ ಎಂದರೆ ರಾಜಪದವನ್ನು ಭೂಷಿಸಿದ್ದರೆ ಸಾಕು, ತತ್ಪರಿಣಾಮವಾಗಿ ಎಲ್ಲವೂ ಸುಗಮವಾಗಿ ಸಾಗುತ್ತದೆ ಎಂಬ ತಾತ್ಪರ್ಯದಲ್ಲಿ ಈ ಸೂತ್ರವಿದೆ. ಅರ್ಥವು ಇಲ್ಲಿ ಹೆಚ್ಚು ಸ್ಪಷ್ಟವಾಗಿಲ್ಲ. ಹಾಗೆಯೇ ಪೂರ್ವಾಪರ ಸೂತ್ರಗಳೊಂದಿಗ ಸಂಬಂಧವೂ ತೋರುವುದಿಲ್ಲ.

## ೩೦೧. ನೀಚಸ್ಯ ವಿದ್ಯಾಃ ಪಾಪ ಕರ್ಮಣಿ ಯೋಜಯಂತಿ

ನೀಚನು ಎಷ್ಟೇ ವಿದ್ಯಾವಂತನಾಗಿದ್ದರೂ ಕೂಡ ಅವನ ಸ್ವಭಾವ ಅರ್ಥಾತ್ ಮನಃಪ್ರವೃತ್ತಿಯು ಒಳ್ಳೆಯದಾಗಿರದ್ದರಿಂದ ಯಾವಾಗಲೂ ಅವನು ಪಾಪಕರ್ಮಗಳ ಕಡೆಗೇ ಒಲವನ್ನು ಇಟ್ಟಿರುತ್ತಾನೆ. ವಿದ್ಯಾ, ಬುದ್ಧಿ ಹಾಗು ಸಂಸ್ಕೃತಿ ಈ ಶಬ್ದಗಳಲ್ಲಿ ಸೂಕ್ಷ್ಮ ಭೇದವಿದೆ. ಗ್ರಂಥಗಳ ಅಭ್ಯಾಸಬಲದಿಂದ ಮನುಷ್ಯನು ಎಷ್ಟೇ ವಿದ್ಯಾವಂತನಾಗಿದ್ದರೂ ಅವನ ದೃಷ್ಟಿಕೋನವು ಕ್ಷುದ್ರವಾಗಿದ್ದರೆ. ಅದು ಅವನ ಪ್ರತಿಯೊಂದು ಕೃತಿಯಲ್ಲಿ ಎದ್ದುಕಾಣುತ್ತದೆ. ಹಾಗೆಯೇ ಅವನ ಸಂಸ್ಕೃತಿ ಎಂದರೆ ಮನೆತನದ ಪರಂಪರೆ, ಪರಿಸರದ ಪ್ರಭಾವ ಹಾಗು ಸಮಾಜದೊಂದಿಗೆ ಇಟ್ಟುಕೊಂಡ ಸಂಬಂಧ— ಇವುಗಳಿಂದಾಗಿ ತನ್ನವೇ ಆದ ಜೀವನಮೌಲ್ಯಗಳನ್ನು ಕಲ್ಪಿಸಿಕೊಂಡು ಅದರಂತೆ ನಡೆದುಕೊಳ್ಳುತ್ತಾನೆ.

ವಿದ್ಯಾವಂತರೆನಿಸಿಕೊಳ್ಳುವ ಅದೆಷ್ಟೋ ಪ್ರೊಫೆಸರರು, ಡಾಕ್ಟರರು, ಎಂಜಿನಿಯರುಗಳು. ವಿಜ್ಞಾನಿಗಳು ಹಾಗು ಲಾಯರುಗಳು ತಮ್ಮ ವಿದ್ಯೆಗೆ

ತಕ್ಕಂತೆ ಉದಾತ್ತ ಧ್ಯೇಯಗಳನ್ನಿಟ್ಟುಕೊಂಡು ನಡೆಯದೆ ಹೀನವಾಗಿ ವರ್ತಿ-ಸುತ್ತಾರೆ. ಇದೆಲ್ಲ ಅವರ ಸ್ವಭಾವದಲ್ಲಿರುವ ಕ್ಷುದ್ರತೆಯು ವಿದ್ಯೆಯನ್ನು ಮೀರಿ ತನ್ನ ಪ್ರಭಾವವನ್ನು ಪ್ರಕಟಿಸುವುದಕ್ಕೆ ಉದಾಹರಣೆಯೆನ್ನಬಹುದು.

## ೩೦೨. ಪಯಃ ಪಾನಮಪಿ ಭುಜಂಗಸ್ಯ ವಿಷವರ್ಧನಮ್ ನಾಮೃತಂ ಸ್ಯಾತ್

ಮೇಲಿನ ಸೂತ್ರದಲ್ಲಿಯ ವಿಚಾರಗಳಿಗೆ ದೃಷ್ಟಾಂತರೂಪದಲ್ಲಿ, ಹಾವಿಗ ಹಾಲೆರೆದರೂ ಅದು ಅಮೃತವಾಗಿ ಪರಿಣಮಿಸದೆ ವಿಷವೇ ಆಗುತ್ತದೆ ಎಂದು ಹೇಳಿ, ನೀಚನ ವಿದ್ಯೆಯು ಕೂಡ ಪಾಪಕರ್ಮಗಳಿಗೆ ಪ್ರಚೋದನೆ ಕೊಡುವುದು, ಇದೇ ತರಗತಿಯಲ್ಲಿ ಬರುತ್ತದೆ ಎಂದು ಮಾರ್ಮಿಕವಾಗಿ ಈ ಸೂತ್ರದಲ್ಲಿ ಸ್ಪಷ್ಟಪಡಿಸಲಾಗಿದೆ.

## ೩೦೩. ನ ಧಾನ್ಯಸಮೋಹ್ಯರ್ಥಃ

ಅನ್ನಧಾನ್ಯಕ್ಕಿಂತ ಹೆಚ್ಚಿನ ಸಂಪತ್ತಿಲ್ಲ ಎಂದು ಹೇಳುವ ಈ ಸೂತ್ರವು ಕೌಟಿಲ್ಯನ ದೂರದೃಷ್ಟಿಗೆ ಒಂದು ನಿದರ್ಶನ. ಕೇವಲ ಕೋಟ್ಯಾವಧಿ ಹಣ-ವನ್ನು ಗಳಿಸಿದ ಮಾತ್ರಕ್ಕೆ ಅನ್ನ ದೊರೆಯದಿದ್ದಾಗ, ಆ ಹಣವನ್ನು ತಿಂದು ಮನುಷ್ಯನು ಬದುಕಲಾರನು. ಹಣವು ಆಹಾರವಲ್ಲ. ಅದನ್ನು ದೊರಕಿಸುವ ಸಾಧನ ಮಾತ್ರ. ಭಾರತದಲ್ಲಿ ಅನ್ನಧಾನ್ಯದ ಕೊರತೆಯುಂಟಾದಾಗ ಅಮೇ-ರಿಕಾ, ಕೆನಡಾ ಹಾಗು ಆಸ್ಟ್ರೇಲಿಯಾ ದೇಶಗಳಿಂದ ನಿಕೃಷ್ಟ ದರ್ಜೆಯ ಗೋದಿ-ಯನ್ನು ಆಮದು ಮಾಡಿಕೊಂಡು ರೇಶನ್ ಅಂಗಡಿಗಳ ಮುಖಾಂತರ ಹಂಚಿದ್ದು ಓದುಗರಿಗೆ ಗೊತ್ತಿರಲು ಸಾಕು. ತಮ್ಮ ದೇಶಗಳಲ್ಲಿ ಹಂದಿ-

ಗಳಿಗೆ ಹಾಕುವ ಧಾನ್ಯವನ್ನು ಪರದೇಶದವರು ನಮಗೆ ಕಳಿಸುತ್ತಾರೆಂದು ಆಗ ಜನ ಮಾತನಾಡುತ್ತಿದ್ದರು. ತಾತ್ಪರ್ಯವೆಂದರೆ—ಬಂಗಾರ, ಹಣ ಇತ್ಯಾದಿ ಸಂಪತ್ತಿಗಿಂತಲೂ ಅನ್ನಧಾನ್ಯವು ಜೀವಧಾರಣಕ್ಕೆ ಅತ್ಯವಶ್ಯವಾದ್ದರಿಂದ ಅವನ್ನು ಬೆಳೆಯುವುದನ್ನು ಬಿಟ್ಟು. ಹಣದಾಸೆಯಿಂದ ಕೇವಲ Cash-Crops ಗಳನ್ನೇ ಬೆಳೆಯಬಾರದೆಂಬ ಉಪದೇಶವು ಇಲ್ಲಿ ಅಡಕವಾಗಿದೆ. ಅನ್ನಧಾನ್ಯದ ವಿಷಯದಲ್ಲಿ ಪರಾವಲಂಬಿಯಾದರೆ. ವಿದೇಶೀಯರಿಗೆ ಅವರು ಬೇಡಿದಷ್ಟು ಹಣ ತೆತ್ತು, ಕೊಟ್ಟಂತಹ ಧಾನ್ಯಗಳನ್ನು ತಿನ್ನುವ ಪರಿಸ್ಥಿತಿ ಉದ್ಭವಿಸುತ್ತದೆ.

## ೩೦೪. ನ ಕ್ಷುಧಾ ಸಮಃ ಶತ್ರುಃ
## ೩೦೫. ನಾಸ್ತ್ಯಭಕ್ಷ್ಯಂ ಕ್ಷುಧಾರ್ತಸ್ಯ

ಹಸಿವಿಗಿಂತ ಹೆಚ್ಚಿನ ಶತ್ರುವಿಲ್ಲ ಎಂದು ತಿಳಿಯಪಡಿಸುವ ಈ ಸೂತ್ರ-ಗಳು ಹಸಿವಿನಿಂದ ಕಂಗಾಲಾದ ಮನುಷ್ಯನು ಎಂಥ ಪಾಪಕರ್ಮಗಳನ್ನು ಮಾಡಲೂ ಹಿಂಜರಿಯಲಾರ ಎಂಬ ಸಿದ್ಧಾಂತವನ್ನು ಬೋಧಿಸುತ್ತವೆ. ಈ ಸಂದರ್ಭದಲ್ಲಿ ಕೆಳಗಿನ ಶ್ಲೋಕವು ಬೋಧಪ್ರದವಾಗಿದೆ :

> ತ್ಯಜೇತ್ಕ್ಷುಧಾರ್ತಾ ಮಹಿಲಾ ಸ್ವಪುತ್ರಂ ಖಾದೇತ್ಕ್ಷುಧಾರ್ತಾ
> ಭುಜಗೀಸ್ವಮಂಡಮ್ ।
> ಕ್ಷೀಣಾ ನರಾ ನಿಷ್ಕರುಣಾ ಭವಂತಿ ಭುಭುಕ್ಷಿತಃ
> ಕಿಂ ನ ಕರೋತಿ ಪಾಪಮ್ ॥

ಹಸಿದ ತಾಯಿ ಮಕ್ಕಳನ್ನು ಮಾರಿಕೊಳ್ಳಬಹುದು. ಹಸಿದ ಹಾವು ತನ್ನ ತತ್ತಿಯನ್ನೇ ತಿನ್ನುವುದು. ಕಂಗಾಲಾದ ಮನುಷ್ಯನು ಯಾವ ಅಕಾರ್ಯ-ವನ್ನೂ ಮಾಡಲು ಹೇಸಲಾರ. ಮಹರ್ಷಿ ವಿಶ್ವಾಮಿತ್ರನು ಹಸಿವಿನಿಂದ ಕಂಗಾಲಾಗಿ ನಾಯಿಯ ಮಾಂಸವನ್ನು ಭಕ್ಷಿಸಿದನೆಂದು ಹೇಳುವ ಕತೆ-

ಯನ್ನು ನೆನೆದರೆ ಹಸಿದವನಿಗೆ ಏನೇನು ತಿನ್ನುವಂಥ ಕಾಲ ಬರುವುದೋ ಎಂಬುದನ್ನು ತರ್ಕಿಸುವುದು ಕೂಡ ಅಸಾಧ್ಯ.

## ೩೦೬. ಅಕೃತೇರ್ನಿಯತಾಕ್ಷುತ್

ದುಡಿಯದವನು ಒಂದಿಲ್ಲೊಂದು ದಿನ ಹಸಿವಿನಿಂದ ಕಂಗಾಲಾಗಿ ಬಳಲುವುದು ಅನಿವಾರ್ಯವೆಂದು ಹೇಳುವ ಈ ಸೂತ್ರವು ಅಪ್ರತ್ಯಕ್ಷವಾಗಿ ಮನುಷ್ಯನು ಉದ್ಯೋಗಶೀಲನಾಗಿರಬೇಕೆಂದು ಬೋಧಿಸುತ್ತದೆ.

## ೩೦೭. ನಾಸ್ತ್ಯಹಂಕಾರಸಮಃ ಶತ್ರುಃ

ಒಂದು ದೃಷ್ಟಿಯಲ್ಲಿ ಹಸಿವು ಮನುಷ್ಯನ ಶತ್ರುವೆಂದು ತಿಳಿಯಪಡಿಸಿದ ಸೂತ್ರಕಾರನು ಇಲ್ಲಿ ಅಹಂಕಾರಕ್ಕೆ ಸಮನಾದ ಶತ್ರುವಿಲ್ಲ ಎಂದು ಇನ್ನೊಂದು ಬಗೆಯಲ್ಲಿ ಹೇಳುತ್ತಾನೆ. ಅಹಂಕಾರಿಯಾದ ಮನುಷ್ಯನಲ್ಲಿ ಪ್ರಾಮುಖ್ಯ-ವಾಗಿ ವಿನಯವಿರುವುದಿಲ್ಲ. ಇನ್ನೊಬ್ಬರನ್ನು ಹೀನಾಯವಾಗಿ ಕಾಣುವುದು ಅಥವಾ ಅಪಮಾನಗೊಳಿಸುವುದು ಅಹಂಕಾರಿಯ ಸ್ವಭಾವ.

ಸ್ವಾಭಿಮಾನ ಶಬ್ದದಲ್ಲಿ ಇನ್ನೊಬ್ಬರು ನಮಗೆ ಮಾಡಬಹುದಾದ ಅಪ-ಮಾನವನ್ನು ಸಹಿಸಬಾರದೆಂಬ ಬೋಧೆಯು ಅಡಕವಾಗಿದೆ. ತದ್ವಿರುದ್ಧ-ವಾಗಿ ಅಹಂಕಾರದಲ್ಲಿ ಇನ್ನೊಬ್ಬರನ್ನು ನಿಷ್ಕಾರಣವಾಗಿ ಹೀಯಾಳಿಸುವ ಪ್ರವೃತ್ತಿಯು ಪ್ರಕಟವಾಗುತ್ತದೆ. ಇದರಿಂದಾಗಿ ಅವನು ಎಲ್ಲರಿಗೂ ಶತ್ರು-ಪ್ರಾಯನಾಗಿ ಸಮಾಜದಲ್ಲಿ ಗೌರವವನ್ನು ಕಳೆದುಕೊಳ್ಳುತ್ತಾನೆ.

## ೩೦೮. ಸಂಸದಿ ಶತ್ರುಂ ನ ಪರಿಕ್ರೋಶೇತ್

ಯಾವಾಗಲೂ ಅಹಂಕಾರವಿರಬಾರದೆಂಬುದನ್ನು ಹೆಚ್ಚು ಸ್ಪಷ್ಟ-ಪಡಿಸುವುದಕ್ಕಾಗಿ ಈ ಸೂತ್ರದಲ್ಲಿ ಸಭೆಯಲ್ಲಿ ಕೂಡ ಶತ್ರುವಿನ ಮೇಲ

...ಹೋಗಿ ಅಪಮಾನಗೊಳಿಸಬಾರದು. ಅದೂ ಒಂದು ರೀತಿಯಿಂದ ನಮ್ಮ ...ಹಂಕಾರವನ್ನೇ ಎತ್ತಿತೋರಿಸುತ್ತದೆ. ಶತ್ರುವಿನ ತಪ್ಪನ್ನು ವಿನಯದಿಂದ ...ವನಿಗೆ ತೋರಿಸಿಕೊಡಬೇಕೇ ಹೊರತು ಅದಕ್ಕಾಗಿ ಆಕ್ರೋಶವು ತರವಲ್ಲ.

## ೩೦೯. ಶತ್ರುವ್ಯಸನಂ ಶ್ರವಣಸುಖಮ್

ಹೇಗಾದರೂ ಮಾಡಿ ವೈರಿಯನ್ನು ಅವಮಾನಗೊಳಿಸಬೇಕೆಂಬುದು ಸಾಮಾನ್ಯ ಮನುಷ್ಯರ ಸ್ವಭಾವ. ಆದ್ದರಿಂದ ಶತ್ರುವು ಕಷ್ಟದಲ್ಲಿದ್ದಾನೆಂದು ...ಳಿದರೆ ಅಂಥವರಿಗೆ ತುಂಬಾ ಸಂತೋಷವಾಗದಿರಲಾರದು. ಆದರೆ ಶತ್ರುವು ತನ್ನ ಕರ್ಮಕ್ಕೆ ತಕ್ಕ ಪ್ರತಿಫಲವನ್ನು ಪಡೆಯುವಾಗ, ಅದರಲ್ಲಿ ನಾವು ಸಂತೋಷಪಡುವ ಆವಶ್ಯಕತೆ ಇರುವುದಿಲ್ಲ ಎಂಬ ಧ್ವನಿಯೂ ಇದರಲ್ಲಿದೆ.

## ೩೧೦. ಪುರುಷಸ್ಯ ಮೈಥುನಂ ಜರಾ

ಅತಿಯಾದ ಸ್ತ್ರೀಸಮಾಗಮದಿಂದ ಪುರುಷನಿಗೆ ಅಕಾಲದಲ್ಲಿ ಮುಪ್ಪು ...ರುತ್ತದೆ. 'ಬ್ರಹ್ಮಚರ್ಯವೇ ಜೀವನ, ವೀರ್ಯನಾಶವೇ ಮೃತ್ಯು' ...ಂಬ ಪ್ರಸಿದ್ಧ ಲೋಕೋಕ್ತಿಯನ್ನು ನೆನೆದಾಗ, ಲೈಂಗಿಕ ಸುಖಕ್ಕೆ ಮರು-...ಗಿ ಅದರ ಬಲೆಗೆ ಸಿಲುಕಿ ತಮ್ಮ ಜೀವನವನ್ನು ಹಾಳುಮಾಡಿಕೊಳ್ಳ-...ಾರದು ಎಂದು ವಿವೇಕಿಗೆ ಅರಿವಾಗದಿರದು. ನಮ್ಮ ಭಾರತೀಯ ಪರಂಪರ-...ಯಲ್ಲಿ ವಿವಾಹದ ಪ್ರಯೋಜನವು ಪ್ರಜೋತ್ಪಾದನೆಯೇ ಹೊರತು ಲೈಂಗಿಕ ...ಸುಖವಲ್ಲ ಎಂಬುದು ಎತ್ತಿಹಿಡಿಯಲ್ಪಟ್ಟಿದೆ. ರಘುವಂಶದ ರಾಜರ ವಿಷಯಕ್ಕೆ ...ರ್ಣಿಸುವಾಗ ಅವರು ಕೇವಲ ಸಂತಾನಲಾಭಕ್ಕಾಗಿ ವಿವಾಹವಾಗುತ್ತಿದ್ದರು ...ಂದು ಕಾಳಿದಾಸನು ಹೇಳುತ್ತಾನೆ. ( ಪ್ರಜಾಯೈಗೃಹಮೇಧಿನಾಮ್ ).

' ಸದ್ಯಃ ಶುಕ್ರಹರಾ ನಾರೀ ಸದ್ಯಃ ಶುಕ್ರಕರಂ ಪಯಃ ' ಎಂಬ ಸುಭಾಷಿತವು ಸ್ತ್ರೀಸಮಾಗಮದಿಂದಾಗಿ ತತ್ಕಾಲದಲ್ಲಿ ವೀರ್ಯನಾಶವಾದರೆ ಹಾಲು ಸೇವಿಸುವುದು ತತ್ಕಾಲದಲ್ಲಿ ಶುಕ್ರವೃದ್ಧಿಗೆ ಕಾರಣವಾಗುತ್ತದೆ ಎಂದು ಶಾಸ್ತ್ರವು ಹೇಳುತ್ತದೆ. ಭರ್ತೃಹರಿಯು ಸ್ತ್ರೀಯ ವಿಷಯವಾಗಿ ಅತ್ಯಂತ ಮಾರ್ಮಿಕವಾದ ಶ್ಲೋಕವೊಂದನ್ನು ಹೇಳಿದ್ದಾನೆ :

ಸ್ಮೃತಾಭವತಿ ಪಾಪಯ ದೃಷ್ಟಾ ಚೋನ್ಮಾದಕಾರಿಣೀ ।
ಸ್ಪೃಷ್ಟಾ ಭವತಿ ಮೋಹಾಯ ಸಾನಾಮದಯಿತಾ ಕಥಮ್ ॥

ಸ್ತ್ರೀಯ ಸ್ಮರಣವು ಪಾಪಕ್ಕೆ ಕಾರಣವಾದರೆ, ದರ್ಶನವು ಚಿತ್ತೋನ್ಮಾದವನ್ನು ತರುತ್ತದೆ. ಸ್ಪರ್ಶದಿಂದ ಮೋಹಿತನಾದ ಪುರುಷನು ಇಂದ್ರಿಯಗಳ ಮೇಲಿನ ಸಂಯಮವನ್ನು ಕಳೆದುಕೊಳ್ಳುವುದರಿಂದ, ಸ್ತ್ರೀಗೆ ಕಾರುಣ್ಯಮಯಿಯಾದ ಪ್ರಿಯತಮೆ ಎಂದು ಕರೆಯುವುದು ಉಚಿತವೇ ಎಂದು ಪ್ರಶ್ನಿಸುತ್ತಾನೆ. ಒಟ್ಟಿನ ಮೇಲೆ ಪುರುಷನು ಮಿತಿಯಿಂದ ಸ್ತ್ರೀಸಂಗ ಮಾಡಬೇಕೆಂಬುದೇ ತಾತ್ಪರ್ಯ.

## ೩೧೧. ಸ್ತ್ರೀಣಾಂ ಅಮೈಥುನಂ ಜರಾ

ಪುರುಷರಿಗೆ ಸ್ತ್ರೀಸಮಾಗಮವು ವೀರ್ಯನಾಶದ ಮುಖಾಂತರ ಮುಪ್ಪನ್ನು ತಂದರೆ, ತದ್ವಿರುದ್ಧವಾಗಿ ಪುರುಷಸಮಾಗಮವಿಲ್ಲದ ಸ್ತ್ರೀಗೆ ಮುಪ್ಪುಬರುತ್ತದೆ ಎಂದು ಪ್ರಕೃತ ಸೂತ್ರವು ತಿಳಿಸುತ್ತದೆ. ಅರ್ಥಾತ್ ಪುರುಷಸಂಯೋಗದಿಂದಾಗಿ ಸ್ತ್ರೀಶರೀರವು ಪುಷ್ಟಿಗೊಳ್ಳುತ್ತದೆ ಎಂಬರ್ಥ. ಪ್ರಾಯಶಃ ಸ್ತ್ರೀಯರು ಲಗ್ನಮಾಡಿಕೊಳ್ಳದೆ ಉಳಿಯಬಾರದು ಎಂಬುದಕ್ಕೆ ಇದೇ ಕಾರಣವಿರಬಹುದು. ಚಾಣಕ್ಯನು ಸರ್ವಶಾಸ್ತ್ರವಿಶಾರದನೆಂಬುದಕ್ಕೆ ಈ ಸೂತ್ರಗಳೇ ಸಾಕ್ಷಿ. ಅವನು ಹೇಳಿದ್ದು ತ್ರಿಕಾಲಾಬಾಧಿತ ಸತ್ಯವೆಂದೇ, He is the fountainhead of all knowledge ' ಎಂದು ಹೇಳಿದ್ದಾರೆ.

## ೩೧೨. ಇಂದ್ರಿಯಾಣಿ ಜರಾ ವಶಂ ಕುರ್ವಂತಿ

ಇಂದ್ರಿಯ ಸುಖಕ್ಕೆ ಮರುಳಾಗಿ, ಭೋಗವಿಲಾಸಗಳ ಕಡೆಗೆ ಜೀವನ-ವನ್ನು ಹೊರಳಿಸಿದ ವ್ಯಕ್ತಿಗೆ ಮುಪ್ಪು ಬೇಗನೆ ಬರುತ್ತದೆ. ಸದ್ಯದ ಪರಿ-ಸ್ಥಿತಿಯ ಬಗ್ಗೆ, ಚಿಕ್ಕ ವಯಸ್ಸಿನಲ್ಲಿಯೇ ನಾನಾ ದುರಭ್ಯಾಸಗಳಿಗೀಡಾದ ಮಕ್ಕಳ ವಿಷಯಕ್ಕೆ ಬಲ್ಲವರೊಬ್ಬರು, ಈಗಿನವರಿಗೆ ಯೌವನೋದಯ-ವಾಗುವುದಕ್ಕೆ ಮೊದಲೇ ವೃದ್ಧಾಪ್ಯ ಬರುತ್ತದೆಂದು ಅಲಂಕಾರಿಕವಾಗಿ ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು. ಭಗವದ್ಗೀತೆಯಲ್ಲಿಯೂ ಕೂಡ ಇಂದ್ರಿಯ ವಶನಾದ ಮನುಷ್ಯನಿಗೆ—

> ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।
> ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥

ಎಂಬ ಶ್ಲೋಕದಲ್ಲಿ ಭೋಗವು ದುಃಖಕ್ಕೆ ಮೂಲವಾದ್ದರಿಂದ ವಿವೇ-ಕಿಯು ಅದಕ್ಕಾಗಿ ಹಾತೊರೆದು ಜೀವನವನ್ನು ಹಾಳುಮಾಡಿಕೊಳ್ಳಬಾರದು. ಭೋಗಸುಖವು ಶಾಶ್ವತವಲ್ಲ. ಅದಕ್ಕೆ ಆರಂಭ, ಅಂತ್ಯ ಎರಡೂ ಉಂಟು ಎಂದು ಹೇಳಿದೆ.

## ೩೧೩. ಅಗಮ್ಯಗಮನಾದಾಯುರ್ಯಶಃ ಪುಣ್ಯಾನಿಕ್ಷೀಯಂತೇ

ಯಾವ ಸ್ತ್ರೀಯೊಂದಿಗೆ ಸಮಾಗಮ ಮಾಡುವುದು ಶಾಸ್ತ್ರದಿಂದ ಪ್ರತಿ-ಷೇಧಿಸಲ್ಪಟ್ಟಿದೆಯೋ ಅಂತಹ ಅಕಾರ್ಯಕ್ಕೆ ಬಲಿಯಾದವರ ಆಯುಷ್ಯ, ಕೀರ್ತಿ, ಪುಣ್ಯ ಎಲ್ಲವೂ ಕ್ಷಯವಾಗಿಹೋಗುತ್ತದೆ—ಎಂದು ಉಪದೇಶಿಸುವ ಈ ಸೂತ್ರವು, ಶಾಶ್ವತ ಸತ್ಯವನ್ನೇ ಸಾರುತ್ತದೆ. ಅಕಾಲಮುಪ್ಪಿನಿಂದಾಗಿ ಆಯುಷ್ಯ ಹಾನಿ. ಅಗಮ್ಯಗಮನವು ಅನೈತಿಕವಾದುದರಿಂದ ಅಪಕೀರ್ತಿ, ಪಾಪಕಾರ್ಯವೆನಿಸುವುದರಿಂದ ಪುಣ್ಯಕ್ಷಯ ತರುವುದು ನಿಸ್ಸಂದಿಗ್ಧವೇ.

ಅಗಮ್ಯ ಶಬ್ದಕ್ಕೆ ಹಿರಿಯರು ಶಾಸ್ತ್ರನಿಯಮಗಳ ಪ್ರಕಾರ ಪ್ರತಿಷಿದ್ಧರು. ರೋಗಗ್ರಸ್ತರು, ಪೂಜ್ಯವರ್ಗಕ್ಕೆ ಸೇರಿದವರು ಎಂದು ಅರ್ಥಮಾಡಬಹುದು.

## ೩೧೪. ನ ನೀಚೋತ್ತಮಯೋಃ ವಿವಾಹಃ

ಮೇಲಿನ ಸೂತ್ರದಲ್ಲಿಯ ಉಪದೇಶಕ್ಕೆ ಸಮರ್ಥನೆಯೆಂದು ಪ್ರಸ್ತುತ ಸೂತ್ರದಲ್ಲಿ ನೀಚರು ಹಾಗು ಉತ್ತಮರಲ್ಲಿ ಪರಸ್ಪರ ವಿವಾಹಸಂಬಂಧವಾಗಬಾರದು ಎಂದು ಬೋಧಿಸಲಾಗಿದೆ.

ಶಾರೀರಿಕ ಹಾಗು ಮಾನಸಿಕವಾಗಿ ನೀಚರು ಹಾಗು ಉತ್ತಮರಲ್ಲಿ ಸಾಮ್ಯಕ್ಕಿಂತ ವೈಷಮ್ಯವೇ ಹೆಚ್ಚಾಗಿ ಇರುವುದರಿಂದ ಅದರ ಪರಿಣಾಮವು ಅನಾರೋಗ್ಯ, ಮಾನಸಿಕ ಉದ್ವೇಗ, ಅಶಾಂತಿ ಹೀಗೆಲ್ಲ ಆಗುತ್ತದೆ. ಅಂತೆಯೇ—

> ಯಯೋರೇವ ಸಮಂ ವಿತ್ತಂ ಯಯೋರೈವ ಸಮಂ ಬಲಮ್ ।
> ತಯೋರ್ವಿವಾದೋ ಮೈತ್ರೀ ವಾ ನೋತ್ತಮಾಧಮಯೋಃ
> ಕ್ವಚಿತ್ ॥

ಯಾವ ಎರಡು ಕುಟುಂಬಗಳಲ್ಲಿ ಸಾಂಪತ್ತಿಕ, ಸಾಂಸ್ಕೃತಿಕ, ಬೌದ್ಧಿಕ ಹಾಗು ಶಾರೀರಿಕವಾಗಿ ಸಮಾನತೆ ಇರುತ್ತದೆಯೋ ಅಂಥವರಲ್ಲಿಯೇ ವಿವಾಹ ಅಥವಾ ಮೈತ್ರಿಯು ಶ್ರೇಯಸ್ಕರವೆನಿಸಿಕೊಳ್ಳುತ್ತದೆ ಎಂದು ಹೇಳುವ ಸುಭಾಷಿತವನ್ನು ಸ್ಮರಿಸುವುದು ಒಳ್ಳೆಯದು.

## ೩೧೫. ವಿಶೇಷಜ್ಞಂ ಸ್ವಾಮಿನಮಾಶ್ರಯೇತ್

ಇನ್ನೊಬ್ಬರ ಆಶ್ರಯವನ್ನು ನಾವು ಪಡೆಯಬೇಕಾದಾಗ ಯಾವಾ-

ಗಲೂ ಬಲ್ಲವರಲ್ಲಿಯೆ ಅಂಥ ಆಶ್ರಯವನ್ನು ದೊರಕಿಸಬೇಕು. ವ್ಯವಹಾರ-ತಾರತಮ್ಯ ಹಾಗು ವಿವೇಕಜ್ಞಾನ ಇವುಗಳಿಂದಾಗಿ ಬಲ್ಲವರು ಅನ್ಯಾಯದಿಂದ ದೂರವಿರಲು ಪ್ರಯತ್ನಿಸುತ್ತಾರೆ. ಆದ್ದರಿಂದ ಅಂಥವರ ಆಶ್ರಯ ಪಡೆ-ಯುವುದರಿಂದಾಗಿ ನಮ್ಮ ಕಾರ್ಯವು ಸಿದ್ಧಿಸುತ್ತದೆ. ವಿಶ್ವಾಸಘಾತದ ಹೆದ-ರಿಕೆಯೂ ಕಡಿಮೆ. ಹೀಗಾಗಿ ಚಾಣಕ್ಯನು ರಾಜಕೀಯದಲ್ಲಾಗಲಿ, ಲೌಕಿಕ-ದಲ್ಲಾಗಲಿ ಆಶ್ರಯ ಕೊಡಬಹುದಾದ ಸ್ವಾಮಿಯು ವ್ಯವಹಾರಜ್ಞನಿದ್ದು ವಿವೇಕಿಯಾಗಿರಬೇಕೆಂದು ಬೋಧಿಸುತ್ತಾನೆ.

## ೩೧೬. ಸಾನುಕ್ರೋಶಂ ಭರ್ತಾರಮಾಜೀವೇತ್

ಮೇಲಿನ ಸೂತ್ರದಲ್ಲಿಯ ವಿಚಾರಗಳ ಮೇಲೆ ಇನ್ನೊಂದು ವಿಶೇಷ-ವನ್ನು ಇಲ್ಲಿ ಹೇಳಲಾಗಿದೆ. ಬಲ್ಲವರಲ್ಲಿ ಆಶ್ರಯ ಪಡೆಯುವುದಂತೂ ಸರಿಯೇ. ಆದರೆ ಇಂಥ ಆಶ್ರಯದಾತನು ದಯಾವಂತನಾಗಿರುವುದು ಅವಶ್ಯ-ವೆಂದು ಈ ಸೂತ್ರವು ಪ್ರತಿಪಾದಿಸುತ್ತದೆ. ಬಲ್ಲವನಲ್ಲಿ Qualities of head ಮಾತ್ರ ಇರುತ್ತವೆ. ಆದರೆ Qualities of heart ( ದಯೆ ) ಕೂಡ ಆತ್ಯವಶ್ಯವೇ. ಆದ್ದರಿಂದ ' ಸಾನುಕ್ರೋಶ ' ಎಂದರೆ ದಯಾವಂತ-ನನ್ನೇ ಸ್ವಾಮಿಯನ್ನಾಗಿ ಆರಿಸಿಕೊಳ್ಳಬೇಕೆಂದು ಅತಿ ಸಮಂಜಸವಾದ ಸಲಹೆ-ಯನ್ನು ಇಲ್ಲಿ ಕೊಡಲಾಗಿದೆ.

## ೩೧೭. ಲುಬ್ಧಸೇವೀ ಪಾವಕೇಚ್ಛಯಾ ಖದ್ಯೋತಂ ಧಮತಿ

ಮೇಲಿನ ಎರಡೂ ಸೂತ್ರಗಳಲ್ಲಿ ವಿವರಿಸಿದ ವಿಚಾರಗಳಿಗೆ ವಿರುದ್ಧವಾಗಿ ಯಾರಾದರೂ ಲೋಭಿಯ ಆಶ್ರಯವನ್ನು ಪಡೆದರೆ. ಅವನಿಂದ ಕಲ್ಯಾಣ-

ವನ್ನು ಬಯಸುವುದು ಮೂರ್ಖತನ. ದೀಪದ ಹುಳವು ಬೆಂಕಿಯಂತೆ ಕತ್ತಲೆ-ಯಲ್ಲಿ ಕಂಡರೂ, ಅವಕ್ಕೆ ಗಾಳಿ ಬೀಸಿದರೆ ಹೇಗೆ ಉರಿಯಲಾರದೋ, ಹಾಗೆಯೇ ಲೋಭಿಯಾದ ಜಿಪುಣನ ಸೇವೆಯನ್ನು ಪರಿಪರಿಯಿಂದ ಮಾಡಿ-ದರೂ, ಅವನಲ್ಲಿ ದಯೆ ಮೂಡಲಾರದು. ಅವನ ಕೃತಿಗಳಲ್ಲಿ ಔದಾರ್ಯವು ಕಂಡುಬರಲಾರದು. ದೀಪದ ಹುಳಕ್ಕೆ ಗಾಳಿಹಾಗುವುದು ಹೇಗೆ ವ್ಯರ್ಥವೋ, ಹಾಗೆಯೇ ಅವನ ಸೇವೆಯೂ ನಿಷ್ಫಲವೇ.

## ೩೧೮. ಯಃ ಪರಾರ್ಥಮುಪಸರ್ಪತಿ ಸ ಸತ್ಪುರುಷಃ

ಸತ್ಪುರುಷನ ಮುಖ್ಯ ಲಕ್ಷಣವೆಂದರೆ, ಸ್ವಾರ್ಥವನ್ನು ಬದಿಗಿಟ್ಟು ಪರಾರ್ಥಕ್ಕಾಗಿ ಯಾವಾಗಲೂ ಹೆಣಗಾಡುವುದು. ಈ ಮಾತನ್ನು ಭರ್ತೃ-ಹರಿಯು 'ಏತೇ ಸತ್ಪುರುಷಾಃ ಪರಾರ್ಥ ಘಟಕಾಃ ಸ್ವಾರ್ಥಾನ್ ಪರಿ-ತ್ಯಜ್ಯಯೇ' ಎಂದು ಬಹು ಸುಂದರವಾಗಿ ವರ್ಣಿಸಿದ್ದಾನೆ. ಸ್ವಾರ್ಥಮಯ-ವಾದ ಈ ಜಗತ್ತಿನಲ್ಲಿ ಸತ್ಪುರುಷರು ವಿರಳವೆಂದು ಬೇರೆ ಹೇಳಬೇಕಾಗಿಲ್ಲ. ಇಂತಹರಿಂದ ತ್ರಿಕಾಲವಲ್ಲಿಯೂ ಲೋಕಕ್ಕೆ ಕಲ್ಯಾಣವಲ್ಲದೆ, ಇವರು ಸ್ವಪ್ನ-ದಲ್ಲಿಯೂ ಕೂಡ ಭಯಕ್ಕೆ ಕಾರಣರಾಗಲಾರರು.

## ೩೧೯. ಇಂದ್ರಿಯಾಣಾಂ ಪ್ರಶಮಂ ಶಾಸ್ತ್ರಮ್

ಇಂದ್ರಿಯನಿಗ್ರಹಕ್ಕೆ ಪ್ರವರ್ತಿಸುವುದೇ ಶಾಸ್ತ್ರವು. ಕೇವಲ ಪಾಂಡಿತ್ಯ ಪ್ರದರ್ಶನವೇ ಆಗಲಿ ಅಥವಾ ಉದರಭರಣವೇ ಆಗಲಿ ಶಾಸ್ತ್ರದ ಪ್ರಯೋ-ಜನವಲ್ಲ. ಶಾಸ್ತ್ರಜ್ಞನು ಪ್ರಪ್ರಥಮವಾಗಿ ಸಂಪಾದಿಸಿದ ಜ್ಞಾನವನ್ನು ಆಚರಣೆ-ಯಲ್ಲಿ ತಂದು, ದುಷ್ಪ್ರವೃತ್ತಿಗಳನ್ನು ಕಿತ್ತೆಸೆಯಬೇಕು. ಇದು ಇಂದ್ರಿಯ-ನಿಗ್ರಹದಿಂದ ಮಾತ್ರ ಸಾಧ್ಯ. ಅದಕ್ಕೆಂದೇ ಈ ಸೂತ್ರವು ಇಂದ್ರಿಯ-

ನಿಗ್ರಹದತ್ತ ಮನುಷ್ಯನನ್ನು ಹೊರಳಿಸುವುದೇ ಶಾಸ್ತ್ರವು ಎಂದು ಪ್ರತಿಪಾದಿಸುತ್ತದೆ.

## ೩೨೦. ಅಶಾಸ್ತ್ರಕಾರ್ಯಪ್ರವೃತ್ತೌ ಶಾಸ್ತ್ರಾಂಕುಶಂ ನಿವಾರಯತಿ

ಮೇಲಿನ ಸೂತ್ರದಲ್ಲಿಯ ವಿಚಾರವನ್ನು ಇನ್ನುಷ್ಟು ಸ್ಪಷ್ಟಗೊಳಿಸುವ ದೃಷ್ಟಿಯಿಂದ ಅಶಾಸ್ತ್ರೀಯವಾದ ಕಾರ್ಯಮಾಡಲಿಕ್ಕೆ ಮನೋವಿಕಾರಗಳು ಪುಷ್ಟಿಕೊಡುತ್ತಿರುವಾಗ. ಶಾಸ್ತ್ರಜ್ಞಾನರೂಪದ ಅಂಕುಶವು ಅಂಥ ಪ್ರವೃತ್ತಿರೂಪಿಯಾದ ಆನೆಗೆ ಅಂಕುಶವಾಗಿ ಪರಿಣಮಿಸಿ. ದುಷ್ಪ್ರವೃತ್ತಿಯನ್ನು ನಿಗ್ರಹಿಸುತ್ತದೆ ಎಂದು ಇಲ್ಲಿ ಸ್ಪಷ್ಟಪಡಿಸಲಾಗಿದೆ.

## ೩೨೧. ನೀಚಸ್ಯ ವಿದ್ಯಾ ನೋಪೇತವ್ಯಾ

ನೀಚ ಜನರಿಂದ ವಿದ್ಯೆಯನ್ನು ಸಂಪಾದಿಸಬಾರದು ಎಂದು ಬೋಧಿಸುವ ಈ ಸೂತ್ರವು 'ನೀಚಾದಪ್ಯುತ್ತಮಾ ವಿದ್ಯಾ ಗ್ರಾಹ್ಯಾ' ಎಂಬ ಬೇರೊಂದು ಲೋಕೋಕ್ತಿಗೆ ವಿರುದ್ಧವಾಗುತ ದೆ. ಏಕೆಂದರೆ. ಸದ್ವಿದ್ಯೆಯು ಯಾರಿಂದಲೇ ದೊರೆತರೂ ಅದಕ್ಕೆ ದೋಷವಿಲ್ಲ. ಪುರುಷಸಂಪರ್ಕದಿಂದ ಅದಕ್ಕೆ ಬಾಧೆ ಬರಲಾರದು. ಗಂಗೆಯಲ್ಲಿ ಪಾಪಿಗಳು ಸ್ನಾನಮಾಡಿದರೆ. ಗಂಗಾಪ್ರವಾಹದ ಪಾವಿತ್ರ್ಯವು ಹೇಗೆ ನಾಶವಾಗಲಾರದೋ. ಹಾಗೆಯೇ ನೀಚನ ವಿದ್ಯೆಯು ದೂಷಿತವಾಗಲಾರದು ಎಂದು ಪ್ರತಿಪಾದಿಸಲ್ಪಟ್ಟಿದೆ. ಆದರೆ ಪ್ರಸ್ತುತ ಸೂತ್ರದಲ್ಲಿಯ ವಿಚಾರವು ಈ ಮಾತಿಗೆ ನಿಜವಾದ ಅರ್ಥದಲ್ಲಿ ವಿರುದ್ಧವಾಗಿಲ್ಲ. ಇಲ್ಲಿ ನೀಚಸ್ಯ ವಿದ್ಯಾ ಎಂಬ ಶಬ್ದಕ್ಕೆ 'ನೀಚನಲ್ಲಿರುವ ನೀಚ

ಪ್ರವೃತ್ತಿಯಿಂದ ಪ್ರೇರಿತವಾದ ನಿಷಿದ್ಧ ಕಾರ್ಯಕ್ಕೆ ಸಂಬಂಧಪಟ್ಟ ಚಾತುರ್ಯ 'ವೆಂದು ಅರ್ಥಮಾಡಬೇಕಾಗುತ್ತದೆ. ಜೇಬುಗಳ್ಳತನ, ಮೋಸ, ಕೊಲೆ, ಸುಲಿಗೆ ಇತ್ಯಾದಿ ಕಲೆಗಳು ನೀಚರಲ್ಲಿ ಇರುವಾಗ, ಅವನ್ನು ನಾವು ಅನುಕರಿಸಲು ಹವಣಿಸಬಾರದು ಎಂಬುದೇ ತಾತ್ಪರ್ಯ.

## ೩೨೨. ಮ್ಲೇಚ್ಛಭಾಷಣಂ ನ ಶಿಕ್ಷೇತ್

ಮ್ಲೇಚ್ಛರ ಭಾಷೆಯನ್ನು ಕಲಿಯಬಾರದೆಂದು ಬೋಧಿಸುವ ಈ ಸೂತ್ರವು ಈಗಿನ ಕಾಲಕ್ಕಂತೂ ವಿಚಿತ್ರವೆನಿಸದಿರಲಾರದು. ಮ್ಲೇಚ್ಛ ಶಬ್ದಕ್ಕೆ ಸಾಮಾನ್ಯವಾಗಿ ಅಸಂಸ್ಕೃತರು ಎಂದು ಅರ್ಥಮಾಡಲಾಗುತ್ತದೆ.

ಭಾರತದಲ್ಲಿ ಮೊಟ್ಟಮೊದಲು ಗ್ರೀಕರಿಗೆ ಯವನರೆಂದು ಕರೆಯಲಾಗುತ್ತಿತ್ತು. ನಂತರ ಮುಸ್ಲಿಮರಿಗೆ ಯವನರೆಂದು ಸಂಬೋಧಿಸಹತ್ತಿದರು, ಕಾಲಾಂತರದಲ್ಲಿ ಕ್ರಿಸ್ತಿಯನ್ನರಿಗೆ ಮೊದಮೊದಲು ಯವನರೆಂದು ಕರೆದರೂ, ನಂತರ ಮ್ಲೇಚ್ಛ ಎಂಬ ಶಬ್ದಪ್ರಯೋಗವು ರೂಢವಾಯಿತು. ವರ್ಣಾಶ್ರಮ ಧರ್ಮವಿಲ್ಲದ ದೇಶವು ಮ್ಲೇಚ್ಛ ದೇಶವೆಂದು ಪ್ರಾಚೀನ ಕಾಲದಲ್ಲಿ ಕರೆಯಲ್ಪಡುತ್ತಿತ್ತು. ವಿಶೇಷವಾಗಿ ಎಲ್ಲ ಅಕ್ಷರಗಳನ್ನೂ ಸ್ಪಷ್ಟವಾಗಿ ಉಚ್ಚರಿಸಲು ಅಸಮರ್ಥರು ಮ್ಲೇಚ್ಛರೆಂದು ಪಂಡಿತರ ಅಭಿಪ್ರಾಯ. ಈ ಅರ್ಥದಲ್ಲಿ ಎಲ್ಲ ಪಾಶ್ಚಾತ್ಯ ಭಾಷೆಗಳು ( ಇಂಗ್ಲೀಷ್, ಫ್ರೆಂಚ್, ಜರ್ಮನ್, ಸ್ಪ್ಯಾನಿಶ್ ) ಮ್ಲೇಚ್ಛ ಭಾಷೆಗಳೇ. ಅವುಗಳನ್ನು ಕಲಿತರೆ ಅದರ ಪ್ರಭಾವದಿಂದಾಗಿ ನಮ್ಮ ಸಂಸ್ಕೃತಿಯು ಹಾಳಾಗುತ್ತದೆಂದು ಈ ಸೂತ್ರವು ಮ್ಲೇಚ್ಛ ಭಾಷೆಯಲ್ಲಿ ಮಾತಾಡುವುದನ್ನು ಕಲಿಯಬಾರದು ಎಂದು ಬೋಧಿಸುತ್ತದೆ. ಹೀಗೆಯೇ ಯವನರ ಭಾಷೆಯ ವಿಷಯಕ್ಕೂ ( ಉರ್ದು, ಪರ್ಶಿಯನ್, ಟರ್ಕಿಶ್ ) ' ನ ವದೇತ್ ಯಾವನೀಂ ಭಾಷಾಂ ಪ್ರಾಣೈಃ ಕಂಠಗತೈರಪಿ ' ಎಂದು ಬೇರೊಂದೆಡೆ ಹೇಳಲ್ಪಟ್ಟಿದೆ. ಪ್ರಾಣ ಹೋದರೂ ಯವನರ ಭಾಷೆಯನ್ನಾಡಬಾರದು ಎಂಬುದೇ ತಾತ್ಪರ್ಯ.

ಈಗಿನ ಕಾಲದಲ್ಲಿ ಮೇಲಿನ ವಿಚಾರಸರಣಿಗೆ ಸಂಪೂರ್ಣ ವಿರುದ್ಧವಾಗಿ ಆಖಾತ ದೇಶಗಳಲ್ಲಿ ( Gulf countries ) ನೌಕರಿ ಸಿಗಬೇಕೆಂದು ಅರಬ್ಬಿ ಭಾಷೆಯನ್ನು ಕಲಿಯುವುದು. ಹಾಗೆಯೇ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಮಕ್ಕಳನ್ನು ಸೇರಿಸುವುದು. ಇಂಗ್ಲೀಷ್ ಭಾಷೆಯಲ್ಲಿ ಮಾತನಾಡುವುದೇ ಸಭ್ಯತೆಯ ಲಕ್ಷಣವೆಂದು ತಿಳಿಯುವುದು ರೂಢಿಯಾಗಿಬಿಟ್ಟಿವೆ. ಸಂಸ್ಕೃತ ಭಾಷೆಯು ಬ್ರಾಹ್ಮಣ ಜಾತಿಗೆ ಸಂಬಂಧಪಟ್ಟಿದ್ದೆಂದು ಕ್ರಮೇಣ ಬಹಿಷ್ಕೃತ-ವಾಗಹತ್ತಿದೆ. ಇದೆಲ್ಲ ಕಾಲಮಹಿಮೆ.

ಭಾರತದ ಐಕ್ಯತೆ ನಿಜವಾಗಿಯೂ ಸಾಧ್ಯವಾಗಬೇಕಾದರೆ ಅವಕ್ಕೆ ಸಂಸ್ಕೃತ ಭಾಷೆಯ ಅಭ್ಯಾಸಕ್ಕಿಂತ ಬೇರೊಂದು ಸಾಧನವಿಲ್ಲ. ಹಿಮಾಲಯ-ದಿಂದ ಕನ್ಯಾಕುಮಾರಿ. ದ್ವಾರಕೆಯಿಂದ ಆಸಾಮ ಪ್ರದೇಶದಲ್ಲಿ ಎಲ್ಲರಿಗೂ ಅವರ ಪ್ರಾಚೀನ ಸಂಸ್ಕೃತಿಯನ್ನು ಅರಿವು ಮಾಡಿಕೊಡುವ ಭಾಷೆಯೆಂದರೆ, ಸಂಸ್ಕೃತವೇ. ಆದರೆ ಮತಗಳೇ ಸರ್ವಸ್ವವೆಂದು ತಿಳಿದ ನಮ್ಮ ಸರಕಾರಕ್ಕೆ ಈ ಮಾತು ರುಚಿಸುವುದಿಲ್ಲ. `ವಿನಾ ಸಂಸ್ಕೃತಂ ನೈವ ಸಂಸ್ಕೃತಿಃ` ಎಂಬ ಮಾತು ಅಪ್ಪಟ ಸತ್ಯವಾಗಿದ್ದರೂ, ಅದನ್ನು ಮನ್ನಿಸಲು ಯಾರೂ ಸಿದ್ಧ-ರಿಲ್ಲ. ಕೇವಲ ಸಂಕುಚಿತ ಭಾವನೆಯಿಂದ ಎಲ್ಲವೂ ಸಾಗಿದೆ. ಆದರೆ ಮ್ಲೇಚ್ಛ ಭಾಷೆಯನ್ನು ಕಲಿಯಬಾರದು ಎಂದು ಉಪದೇಶಿಸಿದ ಚಾಣಕ್ಯನು ಇಷ್ಟು ಸಂಕುಚಿತ ಮನೋವೃತ್ತಿಯವನಿರಲಿಲ್ಲವೆಂಬುದಕ್ಕೆ ಮುಂದಿನ ಸೂತ್ರದಲ್ಲಿ—

## ೩೨೩. ಮ್ಲೇಚ್ಛಾನಾಂ ಅಪಿ ಸುವೃತ್ತಂ ಗ್ರಾಹ್ಯಮ್

ಮ್ಲೇಚ್ಛರ ಭಾಷೆಯು ನಿಷಿದ್ಧವಾಗಿದ್ದರೂ, ಅವರಲ್ಲಿದ್ದ ಒಳ್ಳೆಯ ಗುಣಗಳನ್ನು ನಾವು ಸ್ವೀಕರಿಸಬೇಕು ಎಂದು ಹೇಳಲಿಕ್ಕೆ ಹಿಂಜರಿಯಲಿಲ್ಲ. ಈಗ ನಾವು ಪಾಶ್ಚಾತ್ಯರಲ್ಲಿರುವ ಒಳ್ಳೆಯ ಗುಣಗಳಾದ ಶಿಸ್ತು, ಸಮಯ ಪರಿಪಾಲನೆ ಇತ್ಯಾದಿಗಳನ್ನು ಬಿಟ್ಟು ಕೇವಲ ವೇಷ-ಭೂಷಣಗಳನ್ನಷ್ಟೇ

ಅನುಸರಿಸುತ್ತೇವೆ. ಚಾಣಕ್ಯನಲ್ಲಿದ್ದ ದೂರದೃಷ್ಟಿ, ಗುಣಗ್ರಹಣತೆ ನಮ್ಮ-ಲ್ಲಿಲ್ಲ. ಅಂಧಾನುಕರಣ ಮಾತ್ರವಿದೆ.

## ೩೨೪. ಗುಣೇ ನ ಮತ್ಸರಃ ಕರ್ತವ್ಯಃ

ಸದ್ಗುಣಗಳ ವಿಷಯಕ್ಕೆ ಎಂದೂ ಮಾತ್ಸರ್ಯವಿರಬಾರದು. ಅವು ಯಾರಲ್ಲಿದ್ದರೂ ಅನುಕರಣೀಯವಾದವು—ಎಂದು ಹೇಳುವ ಈ ಸೂತ್ರವು ಹಿಂದಿನ ಸೂತ್ರದಲ್ಲಿಯ ವಿಚಾರಗಳನ್ನು ಸಾಧಾರಣೀಕರಿಸುತ್ತದೆ ( Generalize ) ಇದನ್ನೇ ಇನ್ನಷ್ಟು ಸ್ಪಷ್ಟಪಡಿಸುವ ಉದ್ದೇಶದಿಂದ ಮುಂದಿನ ಸೂತ್ರದಲ್ಲಿ—

## ೩೨೫. ಶತ್ರೋರಪಿ ಸುಗುಣೋ ಗ್ರಾಹ್ಯಃ

ಶತ್ರುವಿನಲ್ಲಿದ್ದ ಸದ್ಗುಣಗಳು ಕೂಡ ಅನುಕರಣೀಯವಾದವುಗಳಾದ್ದ-ರಿಂದ ಅವನ್ನು ಗೌರವಿಸಬೇಕು ಎಂದು ಉಪದೇಶಿಸಲಾಗಿದೆ. ಪುನಃ ಇದಕ್ಕೆ ದೃಷ್ಟಾಂತವೆಂದು ಮುಂದಿನ ಸೂತ್ರದಲ್ಲಿ—

## ೩೨೬. ವಿಷಾದಪ್ಯಮೃತಂ ಗ್ರಾಹ್ಯಮ್

ವಿಷದಲ್ಲಿ ಕೂಡ ಅಮೃತ ದೊರೆಯುವಂತಿದ್ದರೆ ಅದನ್ನು ಸ್ವೀಕರಿಸ-ಬೇಕು ಎಂದು ಉಪದೇಶಿಸಲಾಗಿದೆ. ಆಯುರ್ವೇದ ಶಾಸ್ತ್ರದಲ್ಲಿ ಅದೆಷ್ಟೋ ವಿಷಗಳನ್ನು ಶುದ್ಧೀಕರಿಸಿ, ಔಷಧರೂಪದಲ್ಲಿ ಉಪಯೋಗಿಸುವ ವಿಧಾನವು

ಹೇಳಲ್ಪಟ್ಟಿದೆ. ಕುಚಲಾ ಹಾಗು ಪಾದರಸ ಇತ್ಯಾದಿಗಳನ್ನು ಶುದ್ಧೀಕರಿಸುವ ವಿಧಾನಗಳೇ ಇದಕ್ಕೆ ಸಾಕ್ಷಿ. ಹೋಮಿಯೋಪಥಿ ಸಿದ್ಧಾಂತದ ಪ್ರಕಾರ ವಿಷರೂಪಿಯಾದ ಕುಚಲಾದಿಂದಲೇ ಶುದ್ಧೀಕರಣ ಪದ್ಧತಿಯಿಂದ Nuxvomica ಎಂಬ ಅತಿ ಮಹತ್ವದ ಔಷಧವು ತಯಾರಿಸಲ್ಪಡುತ್ತದೆ.

## ೩೨೭. ಅವಸ್ಥಯಾ ಪುರುಷಃ ಸಮ್ಮಾನ್ಯತೇ

ಮನುಷ್ಯನು ಯಾವ ಅವಸ್ಥೆಯಲ್ಲಿ ಇರುವನೋ ಅದಕ್ಕೆ ತಕ್ಕಂತೆ ಅವನಿಗೆ ಗೌರವವು ದೊರೆಯುತ್ತದೆ ಎಂಬುದು ಈ ಸೂತ್ರದ ತಾತ್ಪರ್ಯ.

ವಿತ್ತಂ ಬಂಧುಃ ವಯಃ ಕರ್ಮ ವಿದ್ಯಾ ಭವತಿ ಪಂಚಮೀ ।
ಏತಾನಿ ಮಾನ್ಯಸ್ಥಾನಾನಿ ಗರೀಯೋ ಯದ್ಯದುತ್ತರಮ್ ॥

ಎಂದು ಹೇಳುವ ಈ ಶ್ಲೋಕವು ಹಣ, ಬಾಂಧವ್ಯ, ವಯಸ್ಸು, ಕೃತಿ ಹಾಗು ವಿದ್ಯೆ ಈ ಐದು ಗೌರವಕ್ಕೆ ಕಾರಣಗಳು. ಅವುಗಳ ತಾರತಮ್ಯ ಉತ್ತರೋತ್ತರವಾಗಿ ಹೆಚ್ಚಾಗುತ್ತದೆ. ಅರ್ಥಾತ್ ಸಂಪತ್ತಿಗಿಂತ ಬಾಂಧವ್ಯ, ಅದಕ್ಕಿಂತ ವಯಸ್ಸು ಹೀಗೆ ಎಲ್ಲದಕ್ಕೂ ಹೆಚ್ಚಿನ ಗೌರವವು ವಿದ್ಯಾವಂತರಿಗೆ ದೊರೆಯುತ್ತದೆ ಎಂದು ಸ್ಪಷ್ಟಪಡಿಸಲಾಗಿದೆ. ವಿದ್ಯಾವಂತನು ತನ್ನ ಜ್ಞಾನಬಲದಿಂದ ಗೌರವಕ್ಕೆ ಪಾತ್ರನಾದರೆ, ಸಿರಿವಂತನಿಗೆ ಅವನ ಧನವೇ ಬಲ.

ಹಲವರಿಗೆ ಪ್ರಾಮುಖ್ಯವಾಗಿ ಅವರ ಅಧಿಕಾರಸ್ಥಾನದಿಂದಾಗಿ ಗೌರವ ದೊರೆಯುತ್ತದೆ. ಸರಕಾರಿ ಅಮಲ್ದಾರರು, ಮಂತ್ರಿಗಳು, ರಾಷ್ಟ್ರಾಧ್ಯಕ್ಷ, ಪ್ರಧಾನಮಂತ್ರಿ—ಇವರೆಲ್ಲರಿಗೆ ಪ್ರಾಮುಖ್ಯವಾಗಿ ಅವರವರ ಅಧಿಕಾರಸ್ಥಾನದಿಂದ ಮಾತ್ರ ಗೌರವ. ಅದಿಲ್ಲದಾಗ ನೀರಿನಿಂದ ಹೊರಗೆಳೆದ ಮೊಸಳೆಯಂತೆ ಅವರ ಗತಿಯಾಗುತ್ತದೆ. ಇದಕ್ಕೆ ಅಪವಾದಾತ್ಮಕವಾಗಿ ಹಲವರು ತಾವಿರುವ ಸ್ಥಾನಕ್ಕೆ ತಮ್ಮ ಚಾರಿತ್ರ್ಯ ಹಾಗು ಜ್ಞಾನಬಲದಿಂದ ಗೌರವವನ್ನು ತಂದುಕೊಡುತ್ತಾರೆ. ಡಾ. ರಾಧಾಕೃಷ್ಣನ್‌ರಂಥ ಅದ್ವಿತೀಯ ವಿದ್ವಾಂಸರು

ರಾಷ್ಟ್ರಾಧ್ಯಕ್ಷರಾಗಿ ಆ ಸ್ಥಾನಕ್ಕೆ ತಮ್ಮಿಂದ ಹೆಚ್ಚು ಗೌರವವನ್ನು ತಂದು-ಕೊಟ್ಟರು.

ಒಟ್ಟಿನಮೇಲೆ ಈ ಸೂತ್ರವು ಲೌಕಿಕ ದೃಷ್ಟಿಯಿಂದ ಅವನ ಅವಸ್ಥೆಗಳಿಗನುಗುಣವಾಗಿ ( ಸಿರಿವಂತಿಕೆ, ದೊಡ್ಡವರ ಸಂಬಂಧ, ವಯಸ್ಸು, ಮಾಡಿದ ಸತ್ಕಾರ್ಯ, ವಿದ್ವತ್ತು, ) ಮರ್ಯಾದೆ ದೊರೆಯುತ್ತದೆ ಎಂದು ಹೇಳಿದ್ದರಲ್ಲಿ ಸತ್ಯಾಂಶವಿದೆ.

## ೩೨೮. ಸ್ಥಾನೇ ಏವ ನರಾಃ ಪೂಜ್ಯಂತೇ

ಹಿಂದಿನ ಸೂತ್ರದ ವಿಷಯವನ್ನೇ ಸೈದ್ಧಾಂತಿಕವಾಗಿ ಇಲ್ಲಿ ಜನರು ಸ್ಥಾನದಿಂದಾಗಿ ಗೌರವಿಸಲ್ಪಡುತ್ತಾರೆ ಎಂದು ನಿರ್ಣಯಾತ್ಮಕವಾಗಿ ಹೇಳ-ಲ್ಪಟ್ಟಿದೆ.

## ೩೨೯. ಆರ್ಯವೃತ್ತಮನುತಿಷ್ಠೇತ್

ಕರ್ತವ್ಯವನ್ನು ನಿರ್ವಹಿಸುತ್ತ, ಅಕಾರ್ಯದಿಂದ ದೂರವಿರುವುದು ಆರ್ಯನ ಲಕ್ಷಣ ಎಂದು ಈ ಹಿಂದೆ ವಿವರಿಸಲಾಗಿದೆ. ಆದ್ದರಿಂದ ಯಾರೇ ಆಗಲಿ ಗೌರವಕ್ಕೆ ಪಾತ್ರರಾಗಬೇಕೆಂದು ಬಯಸಿದರೆ, ಆರ್ಯವೃತ್ತಿಯಿಂದ ನಡೆದುಕೊಳ್ಳಬೇಕು. ಅದಕ್ಕೆ ಸಚ್ಚರಿತ್ರವೇ ಪ್ರಾಧಾನ್ಯವಾದದ್ದು. ವಿವೇಕಿ-ಯಾದವನು ಮಾತ್ರ ಸುಸಂಸ್ಕೃತನೆನಿಸಿಕೊಂಡು ಸಚ್ಚರಿತ್ರನಾಗಬಲ್ಲನು ಎಂದೂ ಈ ಸೂತ್ರದಲ್ಲಿ ಸೂಚಿಸಲಾಗಿದೆ.

## ೩೩೦. ಕದಾಪಿ ಮರ್ಯಾದಾಂ ನಾತಿಕ್ರಮೇತ್

ಎಂದಿಗೂ ಶಾಸ್ತ್ರ ಅಥವಾ ಧರ್ಮದ ಮರ್ಯಾದೆಯನ್ನು ಮೀರ

ನಡೆದುಕೊಳ್ಳಬಾರದು. ಇಡೀ ಆಯುಷ್ಯದಲ್ಲಿ ಗಳಿಸಿದ ಕೀರ್ತಿಯೆಲ್ಲವೂ ಒಂದೇ ಒಂದು ದುಷ್ಕೃತ್ಯದ ಪರಿಣಾಮವಾಗಿ ಅಳಿಸಿಹೋಗುತ್ತದೆ ಎಂದು ಹೇಳಿ, ಮನುಷ್ಯನು ಯಾವಾಗಲೂ ಜಾಗ್ರತೆಯಿಂದ ಚಾರಿತ್ರರಕ್ಷಣೆ ಮಾಡಿ-ಕೊಳ್ಳಲು ಈ ಸೂತ್ರವು ಆಗ್ರಹಿಸುತ್ತದೆ.

## ೩೩೧. ನಾಸ್ತ್ಯರ್ಘಃ ಪುರುಷರತ್ನಸ್ಯ

ಏಕೇಕೆಂದರೂ, ಚಾರಿತ್ರ್ಯವಂತನ ಆದ ಮನುಷ್ಯನು ರತ್ನಪ್ರಾಯನು. 'ಜಾತೌ ಜಾತೌ ಯದುತ್ಕೃಷ್ಟಂ ತದ್ರತ್ನಮಿತಿ ಕಥ್ಯತೆ' ಎಂಬ ಸುಭಾಷಿತದಂತೆ ಮನುಷ್ಯನು ತನ್ನ ಸ್ವಭಾವದಿಂದಾಗಿ ಉತ್ಕೃಷ್ಟತೆಯನ್ನು ಸಂಪಾದಿಸಿ ಪುರುಷ-ರತ್ನನೆನಿಸಿಕೊಳ್ಳುತ್ತಾನೆ. ಇಂಥವನ ಯೋಗ್ಯತೆಯನ್ನು ಅಳೆಯುವುದು ಸಾಧ್ಯವಿಲ್ಲ. ಅವನಿಗೆ ಶರಣಾಗುವುದೊಂದೇ ಸಾಮಾನ್ಯರ ಕರ್ತವ್ಯವೆಂದು ಅಪ್ರತ್ಯಕ್ಷವಾಗಿ ಇಲ್ಲಿ ಸೂಚಿಸಲಾಗಿದೆ.

## ೩೩೨. ಸುದುರ್ಲಭಂ ರತ್ನಂ

ರತ್ನವು ಎಲ್ಲಿ ಬೇಕಾದಲ್ಲಿ ದೊರೆಯುವ ವಸ್ತುವಲ್ಲ. ಅದು ಅತಿ ದುರ್ಲಭವಾದದ್ದು. ಅಂತೆಯೇ ಬೆಳ್ಳಿ, ಬಂಗಾರಗಳಿಗಿಂತಲೂ ರತ್ನವು ದೊರೆಯುವುದು ಹೆಚ್ಚು ಕಠಿಣ. ಅದೇನೇ ಇರಲಿ, ಕೇವಲ ಮುತ್ತು-ರತ್ನಗಳ ವಿಷಯಕ್ಕಷ್ಟೇ ಅಲ್ಲ, ಯಾವುದೇ ವರ್ಗದಲ್ಲಿ ರತ್ನಪ್ರಾಯವಾದ ವ್ಯಕ್ತಿ ಅಥವಾ ವಸ್ತುವು ದೊರೆಯುವುದು ದುರ್ಲಭವೆಂಬುದನ್ನು ಖಚಿತ-ಪಡಿಸುವುದಕ್ಕಾಗಿ ಈ ಸೂತ್ರವು ಹೇಳಲ್ಪಟ್ಟಿದೆ. ಕೇವಲ ಪುರುಷರಿಗಷ್ಟೇ ರತ್ನತ್ವವು ಮೀಸಲಲ್ಲ ಎಂಬುವನ್ನು ಸ್ಪಷ್ಟಪಡಿಸಲು ಮುಂದಿನ ಸೂತ್ರದಲ್ಲಿ—

## ೩೩೩. ನ ಸ್ತ್ರೀರತ್ನ ಸಮಂ ರತ್ನಮ್

ಎಲ್ಲ ರತ್ನಗಳಲ್ಲಿಯೂ ಸ್ತ್ರೀರತ್ನವು ಅತಿ ಶ್ರೇಷ್ಠವಾದದ್ದು. ಅರ್ಥಾತ್ ಅನ್ಯರತ್ನಗಳ ಜೊತೆಗೆ ಹೋಲಿಸಿದಾಗ, ಸ್ತ್ರೀರತ್ನವು ಹೆಚ್ಚು ದುರ್ಮಿಳ-ವಾದದ್ದು ಎಂದು ಈ ಸೂತ್ರವು ತಿಳಿಯಪಡಿಸುತ್ತದೆ. ಚಾಣಕ್ಯನು ಸ್ತ್ರೀಯರ ವಿಷಯವಾಗಿ ಅನೇಕ ಸೂತ್ರಗಳನ್ನು ಮೀಸಲಾಗಿಸಿದ್ದಾನೆ. ಅವುಗಳಲ್ಲಿ ಹಲವೊಂದು, ಸ್ತ್ರೀಜಾತಿಯ ನಿಂದಾಪರವಾಗಿದ್ದರೂ. ಉಳಿದವುಗಳು ಸ್ತ್ರೀಯ ಘನತೆಯನ್ನು ಸೂಚಿಸುತ್ತವೆ. ಆದ್ದರಿಂದ ಒಂದೇ ಸೂತ್ರವನ್ನು ಓದಿ ಚಾಣಕ್ಯನ ಅಭಿಪ್ರಾಯವನ್ನು ನಿರ್ಧರಿಸದೇ. ಸಮಗ್ರವಾದ ಚರ್ಚೆಯನ್ನು ಕೈಕೊಳ್ಳುವುದು ಅವಶ್ಯ. ಚರ್ಚೆಯ ಆರಂಭವು ಮಾತ್ರ ಸ್ತ್ರೀವರ್ಗದಲ್ಲಿ ರತ್ನಪ್ರಾಯವಾದ ವ್ಯಕ್ತಿಗಳು ದುರ್ಮಿಳವಷ್ಟೇ ಅಲ್ಲ. ಅನ್ಯರತ್ನಗಳು ಸ್ತ್ರೀ-ರತ್ನಕ್ಕೆ ಸಮಾನವೆನಿಸಲಾರವು ಎಂದು ಆಗುತ್ತದೆ.

## ೩೩೪. ನ ಸಮಾಧಿಃ ಸ್ತ್ರೀಷು ಲೋಕಜ್ಞತಾ ಚ

ಸ್ತ್ರೀಯರಲ್ಲಿ ತಿಳಿವಳಿಕೆಯಿಂದ ಬರಬಹುದಾದ ಸಮಾಧಾನಗುಣ ಹಾಗು ಲೋಕವ್ಯವಹಾರಗಳ ಅಭಾವವಿರುತ್ತದೆ. ಮನುಷ್ಯನಲ್ಲಿ ಬುದ್ಧಿಗುಣ, ಕಾರ್ಯಗುಣ ಹಾಗು ಮನೋಗುಣ ಎಂದು ಮೂರುಪ್ರಕಾರದ ಗುಣಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಇವಕ್ಕೆ ಇಂಗ್ಲೀಷ್‌ನಲ್ಲಿ Qualities of head, heart & hands ಎನ್ನುತ್ತಾರೆ. ಸ್ತ್ರೀಯರಲ್ಲಿ ಬುದ್ಧಿಗುಣಕ್ಕಿಂತಲೂ ಮನೋಗುಣಗಳ ಪ್ರಭಾವ ಹೆಚ್ಚಾಗಿರುವುದರಿಂದ, ಅವರು ಹೆಚ್ಚು ಭಾವನಾ-ಪರವಶರಾಗಿ. ತಿಳಿವಳಿಕೆ ಕಡಿಮೆ ಇದ್ದವರಂತೆ ವ್ಯವಹರಿಸುತ್ತಾರೆ. ಇದ-ರಿಂದಾಗಿ ಅವರಲ್ಲಿ ಲೋಕವ್ಯವಹಾರದ ಅಭಾವವಿರುತ್ತದೆ ಎಂದು ಒಂದು ಸಾಮಾನ್ಯ ನಂಬಿಕೆಯುಂಟಾಗಿದೆ. ಇದಕ್ಕೆ ಸಾಕಷ್ಟು ಅಪವಾದಗಳು ದೊರೆಯ್ಬ ಬಹುದು.

## ೩೩೫. ಸ್ತ್ರೀನಾಮಸರ್ವ ಅಶುಭಾನಾಂ ಕ್ಷೇತ್ರಮ್

ಸ್ತ್ರೀಯು ಎಲ್ಲ ಅಶುಭಕ್ಕೂ ಆಗರವೆಂದು ಹೇಳುವ ಈ ಸೂತ್ರವು ಪ್ರಾಯಶಃ—

> ಸಂಭವೇ ಸ್ವಜನ ದುಃಖಕಾರಿಕಾ ಸಂಪ್ರದಾನ
> ಸಮಯೇಽರ್ಥಹಾರಿಕಾ ।
> ಯೌವನೇಽಪಿ ಬಹುದೋಷಕಾರಿಕಾ ದಾರಿಕಾ
> ಹೃದಯದಾರಿಕಾ ಪಿತುಃ ॥

ಎಂಬ ಶ್ಲೋಕದಲ್ಲಿಯ ವಿಚಾರವನ್ನು ಆಧರಿಸಿದಂತೆ ತೋರುತ್ತದೆ. ಹೆಣ್ಣುಕೂಸು ಹುಟ್ಟಿದೊಡನೆ ಬಳಗಕ್ಕೆಲ್ಲ, ಗಂಡು ಹುಟ್ಟಿದಷ್ಟು ಆನಂದವಾಗುವುದಿಲ್ಲ. ವಿವಾಹದ ವೇಳೆಯಲ್ಲಿ ಇದ್ದ-ಬಿದ್ದ ಹಣವನ್ನೆಲ್ಲ ಕಲೆಹಾಕಿ ಅಥವಾ ಸಾಲತಂದು, ಅವಳನ್ನು ಪತಿಗೃಹಕ್ಕೆ ಕಳಿಸಿ, ತಂದೆಯು ದಾರಿದ್ರ್ಯವನ್ನು ಅಪ್ಪುವ ಪ್ರಸಂಗ ಬಂದೊದಗುತ್ತದೆ. ಯೌವನದಲ್ಲಿ ಅವಳಿಂದ ಪಾಪಕರ್ಮಗಳು ಘಟಿಸಿದಲ್ಲಿ, ಸಮಾಜದಲ್ಲಿ ಅಪಮಾನ, ಕುಲಕ್ಕೆ ಅಪಕೀರ್ತಿ ಹೀಗೆಲ್ಲ ಆಗುತ್ತದೆ. ಆದ್ದರಿಂದ 'ದಾರಿಕಾ' ಎಂದರೆ ಮಗಳು ತಂದೆಯ ಹೃದಯವನ್ನು ಸೀಳಿಹಾಕುತ್ತಾಳೆ ಎಂದು ಈ ಶ್ಲೋಕವು ವಿವರಿಸುತ್ತದೆ. ಇದು ಸ್ತ್ರೀಯ ಒಂದು ಮುಖ ಮಾತ್ರವಾಗಿರಬಹುದು. ಇಂಥ ಅಭಿಪ್ರಾಯಕ್ಕೆ ಅಂದಿನ ಸಾಮಾಜಿಕ ಪರಿಸ್ಥಿತಿಯು ಕಾರಣವಾಗಿರಬಹುದು. ಅಥವಾ ಸ್ತ್ರೀಯರಲ್ಲಿ ರತ್ನಪ್ರಾಯರಾದವರು ಅಪರೂಪಕ್ಕಾಗಿ ದೊರೆಯುತ್ತಾರೆಂದು ಹಿಂದಿನ ಸೂತ್ರದಲ್ಲಿ ಹೇಳಿದ್ದರಿಂದ ಬಹ್ವಂಶ ಸ್ತ್ರೀಯರಲ್ಲಿ ಈ ಗುಣಗಳಿರುತ್ತವೆ ಎಂಬ ತಿಳಿವಳಿಕೆಯ ಮೇಲೆ ಸಮಾನೀಕರಣ ಮಾಡಿರಲು ಸಾಕು.

## ೩೩೬. ನ ಚ ಸ್ತ್ರೀಣಾಂ ಪುರುಷ ಪರೀಕ್ಷಾ

ಸ್ತ್ರೀಯರಿಗೆ ಪುರುಷರ ನಿಜವಾದ ಪರೀಕ್ಷೆ ಮಾಡುವಷ್ಟು ಬುದ್ಧಿಶಕ್ತಿ

ಪ್ರಬಲವಾಗಿರುವುದಿಲ್ಲ. ಮಾನಸಿಕ ಉದ್ವೇಗಕ್ಕೆ ಹೆಚ್ಚಾಗಿ ಬಲಿಯಾಗು-
ವವರು ಸ್ತ್ರೀಯರೇ. ಆದ್ದರಿಂದ ಆ ಕ್ಷಣದಲ್ಲಿ ಬಂದ ವಿಚಾರಗಳಿಗೆ ಬಲಿ-
ಯಾಗಿ, ದೂರದೃಷ್ಟಿ ಇಲ್ಲದೆ ಅಪ್ರಿಯವಾಗಿ ವ್ಯವಹರಿಸಿ, ಆತ್ಮಹತ್ಯೆ-
ಗೀಡಾಗುತ್ತಾರೆ. ಇಲ್ಲವೆ ಸಂಯಮವಿಲ್ಲದ ವಾಕ್ಪ್ರಹಾರದಿಂದ ವಾತಾವರಣ-
ವನ್ನು ಕಲುಷಿತಗೊಳಿಸುತ್ತಾರೆ. ಸಹನೆಯ ಮೂರ್ತಿ ಎನಿಸಿಕೊಳ್ಳುವ
ಸ್ತ್ರೀಯರು ದೊರೆಯುವುದು ದುರ್ಲಭವೆಂದೇ ಈ ಸೂತ್ರದ ಅಭಿಪ್ರಾಯ.

## ೩೩೭. ಸ್ತ್ರೀಣಾಂ ಮನಃ ಕ್ಷಣಿಕಮ್

ಮನೋಗುಣಗಳ ಪ್ರಾಬಲ್ಯದಿಂದಾಗಿ ಉದ್ವೇಗದ ಭರದಲ್ಲಿ, ಕಾಲ-
ಕಾಲಕ್ಕೆ ವಿಭಿನ್ನ ರೀತಿಯಲ್ಲಿ ವ್ಯವಹರಿಸುವುದರಿಂದಾಗಿ ಸ್ತ್ರೀಯರ ಮನಸ್ಸು
ಕ್ಷಣಿಕ ಎಂದರೆ ಚಂಚಲವಾದದ್ದೆಂದು ಹೇಳಲ್ಪಡುತ್ತದೆ. ದೃಢನಿರ್ಧಾರದ
ಅಭಾವವು ಇಲ್ಲಿ ಸೂಚಿಸಲ್ಪಟ್ಟಿದೆ. ಆದರೆ ಝಾಂಸೀರಾಣಿ ಲಕ್ಷ್ಮೀಬಾಯಿ,
ಕಿತ್ತೂರ ಚೆನ್ನಮ್ಮ, ಇಂದಿರಾ ಗಾಂಧಿ—ಇತ್ಯಾದಿ ರಾಜಕಾರಣಿಗಳಲ್ಲಿ ದೃಢ-
ನಿರ್ಧಾರವಿದ್ದುದರ ಅನುಭವ ನಮಗೆಲ್ಲ ಇದೆ. ಆದ್ದರಿಂದ ಮೇಲಿನ ಸೂತ್ರವು
ಅಂಶತಃ ಸ್ತ್ರೀಜಾತಿಗೆ ಸಂಬಂಧಪಟ್ಟದ್ದೆಂದು ಅರ್ಥೈಸಬಹುದು.

## ೩೩೮. ಸ್ತ್ರೀಷು ಕಿಂಚಿದಪಿ ನ ವಿಶ್ವಸೇತ್

ಸ್ತ್ರೀಯರಲ್ಲಿ ಎಂದಿಗೂ ಪೂರ್ಣ ವಿಶ್ವಾಸವನ್ನಿಡಬಾರದು. ಇದಕ್ಕೆ
ಮೂಲಕಾರಣ, ಅವರ ಮನಃಚಾಂಚಲ್ಯ, ಸ್ವಭಾವದ ಉದ್ವಿಗ್ನತೆ, ಯಾವುದೇ
ವಿಷಯವನ್ನು ರಹಸ್ಯವಾಗಿಡುವಲ್ಲಿ ಅಸಾಮರ್ಥ್ಯ ಎಂದು ಸೂತ್ರಕಾರನ
ಅಭಿಪ್ರಾಯವಿದ್ದಂತೆ ತೋರುತ್ತದೆ.

## ೩೪೯. ಅಲೌಹಮಯಂ ನಿಗಡಂ ಕಲತ್ರಮ್

ಸ್ತ್ರೀಯು ಕಬ್ಬಿಣದ ಸಂಕೋಲೆಯಾಗಿರದಿದ್ದರೂ, ಅದಕ್ಕೂ ಹೆಚ್ಚಾಗಿ ಮನುಷ್ಯನನ್ನು ಬಂಧನದಲ್ಲಿಡಲು ಸಮರ್ಥಳಾಗಿರುತ್ತಾಳೆ ಎಂದು ಇಲ್ಲಿ ಹೇಳಲ್ಪಟ್ಟಿದೆ. ಸ್ತ್ರೀಯರ ಬಲೆಗೆ ಬಿದ್ದ ಮನುಷ್ಯನು ಪಾರಾಗುವುದು ಕಠಿಣವೆನ್ನುವುದಕ್ಕೆ ವಿಶ್ವಾಮಿತ್ರರ ಉದಾಹರಣೆಯೇ ಸಾಕ್ಷಿ. 'ಸಾವಿರ ಮಂದಿಯ ಸರದಾರ, ಮನೆಯ ಹೆಂಡತಿಯ ಪಿಂಜಾರ' ಎಂಬ ಲೋಕೋಕ್ತಿಯು ಈ ವಿಚಾರವನ್ನು ಸಮರ್ಥಿಸುತ್ತದೆ.

## ೩೫೦. ದುಷ್ಕಲತ್ರಂ ಮನಸ್ವಿನಾಂ ಶರೀರಕರ್ಶನಮ್

ದುಷ್ಟ ಹೆಂಡತಿಯು ಒಳ್ಳೆಯ ಗಂಡನ ಪ್ರಾಣಹಿಂಡುತ್ತಾಳೆ ಎಂಬಲ್ಲಿ ಒಳ್ಳೆಯ ಹೆಂಡತಿಯು ದುರ್ಲಭವೆಂಬ ಅಭಿಪ್ರಾಯವು ಸೂಚ್ಯವಾಗಿದೆ—ಏನೋ ಎಂದೆನಿಸುತ್ತದೆ. ಏಕೆಂದರೆ ಚಾಣಕ್ಯನು ಹಿಂದಿನ ಸೂತ್ರದಲ್ಲಿ ಸ್ತ್ರೀಯರ ಸಾಮಾನ್ಯ ಗುಣಗಳನ್ನು ವಿವರಿಸಿದ್ದರಿಂದ, ಒಳ್ಳೆಯ ಸ್ವಭಾವವುಳ್ಳ ಸಾಧ್ವೀ ಸ್ತ್ರೀ (ಸೀತಾ, ಸಾವಿತ್ರಿ, ದಮಯಂತಿಯಂಥವರು) ಅಪರೂಪಕ್ಕಾಗಿ ಹುಟ್ಟಿರುತ್ತಾರೆನ್ನುವುದು ಅವನ ಅಭಿಪ್ರಾಯವಿದ್ದಂತೆ ತೋರುತ್ತದೆ, ಒಂದು ಶ್ಲೋಕದಲ್ಲಿ 'ಕಿಂ ಸೌಖ್ಯಮ್' ಎಂಬ ಪ್ರಶ್ನೆಗೆ 'ಸುಕಲತ್ರಮ್' ಎಂದು ಉತ್ತರ ಕೊಡಲಾಗಿದೆ. ಇದರ ಪ್ರಕಾರ ಮನುಷ್ಯನಿಗೆ ನಿಜವಾದ ಸುಖ ದೊರೆಯಬೇಕಾದರೆ, ಹೆಂಡತಿ ಒಳ್ಳೆಯವಳಾಗಿದ್ದರೆ ಮಾತ್ರ ಅದು ಸಾಧ್ಯ. ಇಲ್ಲವಾದಲ್ಲಿ ಸಂಸಾರವು ಕಹಿಯಾಗಿಬಿಡುತ್ತದೆ. ಇನ್ನೊಂದೆಡೆಗೆ ಇದನ್ನೇ ಬಹು ಮಾರ್ಮಿಕವಾಗಿ—

> ಲೋಕೇಷು ನಿರ್ಧನೋ ದುಃಖೀ ಋಣಗ್ರಸ್ತಸ್ತತೋಽಧಿಕಮ್ ।
> ತಾಭ್ಯಾಂ ರೋಗಯುತೋ ದುಃಖೀ ತತೋ ದುಃಖೀ
> ಕುಭಾರ್ಯಕಃ ॥

ಎಂದು ಇನ್ನೊಂದು ಶ್ಲೋಕದಲ್ಲಿ ಹೇಳಲಾಗಿದೆ. ಲೋಕದಲ್ಲಿ ದುಃಖಿ ಎಂದರೆ ಹಣವಿಲ್ಲದವನಂತೆ. ಅವನಿಗಿಂತಲೂ ದುರ್ದೈವಿಯು ಋಣಗ್ರಸ್ತ, ಎಂದರೆ ಸಾಲಗಾರನು. ಏಕೆಂದರೆ ಅವನಿಗೆ ಯಾವಾಗಲೂ ಸಾಹುಕಾರನ ಹಂಗಿನಲ್ಲಿರಬೇಕಾಗುತ್ತದೆ. ಇಬ್ಬರಿಗಿಂತಲೂ ದುಃಖಿಯು ರೋಗಗ್ರಸ್ತನು. ಏಕೆಂದರೆ ಅವನಿಗೆ ಹಣವಿದ್ದರೂ, ಅದರ ಭೋಗದ ಭಾಗ್ಯವಿರುವುದಿಲ್ಲ. ಆದರೆ ಎಲ್ಲಕ್ಕಿಂತಲೂ ದುಃಖಿಯಾದ ದುರ್ದೈವಿಯೆಂದರೆ, ದುಷ್ಟ ಹೆಂಡತಿಯಿದ್ದವನು. ಏಕೆಂದರೆ ಅವನಿಗೆ ಮನೆಯು ನರಕಪ್ರಾಯವಾಗಿಬಿಡುತ್ತದೆ. ಏನೇ ಇರಲಿ, ಒಳ್ಳೆಯ ಹೆಂಡತಿ ದೊರೆಯುವುದು ಭಾಗ್ಯವಂತರ ಲಕ್ಷಣವೆಂದು ಸೂಚಿಸುವ ಈ ಸೂತ್ರವು ಸ್ತ್ರೀವರ್ಗದಲ್ಲಿ ಅಂತಹ ವ್ಯಕ್ತಿಗಳು ಇರುತ್ತಾರೆಂದು ನಂಬುತ್ತದೆ.

ಒಂದು ಸೀರೆಯನ್ನು ಕೊಡಿಸಲಿಲ್ಲವೆಂದು ಗಂಡನೊಂದಿಗೆ ಜಗಳವಾಡುವ ಈ ಕಾಲದಲ್ಲಿ ವಿವಾಹವಾಗಿದ್ದರೂ, ಸಂನ್ಯಾಸಿ ಜೀವನವನ್ನು ನಡೆಸಲಿಕ್ಕೆ ರಾಮಕೃಷ್ಣ ಪರಮಹಂಸರಿಗೆ ಅನುಮತಿ ನೀಡಿದ ಶಾರದಾಮಣಿದೇವಿಯವರಂತಹ ಸಾಧ್ವಿಯರು ಜನ್ಮತಾಳಿದ್ದಾರೆ. ಈ ಪವಿತ್ರ ಮಾತೆಯಲ್ಲಿ ಇದ್ದುದು ಅದೆಂತಹ ದಿವ್ಯಶಕ್ತಿ ! ಇಡೀ ಸ್ತ್ರೀಜಾತಿಯೇ ನಿಂದ್ಯವೆಂದು ನಂಬಲಾಗದೆನ್ನುವುದಕ್ಕೆ ಇಂತಹ ಪವಿತ್ರ ವ್ಯಕ್ತಿತ್ವಗಳೇ ಸಾಕ್ಷಿ. ಸಾಮಾನ್ಯ ಕುಟುಂಬಗಳಲ್ಲಿಯೂ ಇಂತಹ ವ್ಯಕ್ತಿಗಳಿದ್ದಿರಲು ಸಾಕು. ಆದರೆ ಅವರ ಹೆಸರು ಬೆಳಕಿಗೆ ಬರಲು ಅವಕಾಶವಿರುವುದಿಲ್ಲ.

## ೩೪೧. ದುರ್ಲಭಃ ಸ್ತ್ರೀಬಂಧನಾತ್ ಮೋಕ್ಷಃ

ಈ ಹಿಂದೆ ೩೩೯ ನೆಯ ಸೂತ್ರದಲ್ಲಿಯ ವಿಚಾರವನ್ನೇ ಇಲ್ಲಿ ಸಿದ್ಧಾಂತರೂಪದಲ್ಲಿ ಹೇಳಲಾಗಿದೆ. ಸ್ತ್ರೀಬಂಧನದಿಂದ ಬಿಡುಗಡೆಯಾಗುವುದು ಕಠಿಣವೆಂಬುದೇ ಈ ಸೂತ್ರದ ಅಭಿಪ್ರಾಯ.

## ೩೪೨. ಅಪ್ರಮತ್ತೋ ದಾರಾನ್ನಿರೀಕ್ಷೇತ್

ಸ್ತ್ರೀಯರಲ್ಲಿ ಜನ್ಮತಃ ಅದೆಷ್ಟೋ ದೋಷಗಳು ಬಂದಿದ್ದರೂ, ಪುರುಷನು ಯಾವಾಗಲೂ ಅವರನ್ನು ವಿವೇಕಬುದ್ಧಿಯಿಂದ, ಹೊಣೆಗಾರಿಕೆಯನ್ನು ಅರಿತು ಹಾಗು ಪೂರ್ಣ ಎಚ್ಚರದಿಂದ ನಡೆಸಿಕೊಳ್ಳಬೇಕು ಎಂದು ಹೇಳುವ ಈ ಸೂತ್ರವು ಜೀವನದಲ್ಲಿ ಸ್ತ್ರೀಯ ಅನಿವಾರ್ಯತೆಯನ್ನು ಹಾಗು ಇದ್ದುದರಲ್ಲಿಯೇ ಸುಖವನ್ನು ತಂದುಕೊಳ್ಳುವುದಕ್ಕಾಗಿ ಮನುಷ್ಯನು ಅನುಸರಿಸಬೇಕಾದ ಮಾರ್ಗವನ್ನು ಉಪದೇಶಿಸುತ್ತದೆ.

ಧರ್ಮಶಾಸ್ತ್ರಕಾರನಾದ ಮನುವೇ ಆಗಲಿ ಅಥವಾ ಇನ್ನಿತರರೇ ಆಗಲಿ ಸ್ತ್ರೀವರ್ಗವನ್ನು ಹೀನಾಯವಾಗಿ ಕಂಡವರೆಂದು ದೂಷಣೆಗೆ ಪಾತ್ರರಾಗಿದ್ದಾರೆ. ಆದರೆ ಸ್ತ್ರೀಗೆ ಕೊಟ್ಟಿರುವ ಮಹತ್ವವನ್ನು ಮಾತ್ರ ಯಾರೂ ತಿಳಿದುಕೊಳ್ಳಲು ಸಿದ್ಧರಿದ್ದಂತಿಲ್ಲ. ಮನುಸ್ಮೃತಿಯಲ್ಲಿ—

' ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ '—ಎಲ್ಲಿ ಸ್ತ್ರೀಯರಿಗೆ ಗೌರವವಿದೆಯೋ, ಅಲ್ಲಿ ಮಾತ್ರ ದೇವತೆಗಳು ಸಂತೋಷದಿಂದ ವಾಸಮಾಡಿರುತ್ತಾರೆ ಎಂದು ಹೇಳಿರುವುದು, ಸ್ತ್ರೀಯರನ್ನು ಅನಾದರದಿಂದ ಕಾಣಬಾರದು ಎಂದು ಎಚ್ಚರಿಸಿದಂತಲ್ಲವೇ ? ಹಾಗೆಯೇ—

> ಪ್ರಜನಾರ್ಥಂ ಮಹಾಭಾಗಾಃ ಪೂಜಾರ್ಹಾ ಗೃಹದೀಪ್ತಯಃ ।
> ಸ್ತ್ರೀಯಃ ಶ್ರಿಯಶ್ಚ ಗೇಹೇಷು ನ ವಿಶೇಷೋಽಸ್ತಿ ಕಶ್ಚನ ॥
>
> ಅಪತ್ಯಂ ಧರ್ಮಕಾರ್ಯಾಣಿ ಶುಶ್ರೂಷಾರತಿರುತ್ತಮಾ ।
> ದಾರಾಧೀನಃ ತಥಾ ಸ್ವರ್ಗಃ ಪಿತೄಣಾಂ ಆತ್ಮನಶ್ಚ ಹ ॥

ವಂಶಾಭಿವೃದ್ಧಿಗಾಗಿ ಸ್ತ್ರೀಯರ ಜನ್ಮವಿದೆ. ಅವರು ಪೂಜಾರ್ಹರು. ಮನೆಗೆ ಶೋಭೆಯನ್ನೂ ತರುವವರು. ಪ್ರತ್ಯಕ್ಷ ಲಕ್ಷ್ಮಿ ಹಾಗು ಅವರಲ್ಲಿ ಏನೂ ಭೇದವಿಲ್ಲ. ಸಂತತಿ, ಧರ್ಮಕಾರ್ಯಗಳು, ಶುಶ್ರೂಷೆ, ರತಿಸುಖ, ಪತಿ ಹಾಗು ಪಿತೃಗಳಿಗೆ ಸದ್ಗತಿ—ಇವೆಲ್ಲ ( ಒಳ್ಳೆಯ ) ಹೆಂಡತಿಯ ಆಧೀನವೆಂದು ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು.

ಒಟ್ಟಿನಲ್ಲಿ ಸ್ತ್ರೀಯರ ಯೋಗಕ್ಷೇಮವನ್ನು, ಅವರಲ್ಲಿ ಎಷ್ಟೇ ದೋಷ-ಗಳಿದ್ದರೂ, ಯಥಾಯೋಗ್ಯವಾಗಿ ನೋಡಿಕೊಂಡು ಅವರನ್ನು ಸಂರಕ್ಷಿ-ಸುವುದು ಪುರುಷರ ಧರ್ಮವೆಂದೇ ಈ ಸೂತ್ರದ ಅಭಿಪ್ರಾಯ. ಸ್ತ್ರೀರಹಿತ-ವಾದ ಲೌಕಿಕ ಜೀವನವು ನಿಷ್ಫಲವೇ. ( ನಾನಾ ನಾರೀಂ ನಿಷ್ಫಲಾ ಲೋಕ-ಯಾತ್ರಾ. )

## ೩೪೩. ಅಶುಭ ದ್ವೇಷಿಣಃ ಸ್ತ್ರೀಷು ನ ಪ್ರಸಕ್ತಃ

ಹಿಂದಿನ ಸೂತ್ರದಲ್ಲಿ ಹೇಳಿದ್ದನ್ನು ಪೂರ್ಣವಾಗಿ ತಿಳಿದುಕೊಂಡು ವ್ಯವಹರಿಸಬೇಕೆಂದು ಹೇಳುವುದಕ್ಕಾಗಿ ಈ ಸೂತ್ರದಲ್ಲಿ ಅಕಲ್ಯಾಣವನ್ನು ಬಯಸದವರು ಸ್ತ್ರೀಯರ ಗುಲಾಮರಾಗಿ ನಡೆದುಕೊಳ್ಳಬಾರದೆಂದು ಉಪ-ದೇಶಿಸಲಾಗಿದೆ. ಸ್ತ್ರೀಯನ್ನು ಆದರದಿಂದ ನೋಡಿಕೊಳ್ಳುವುದು ಬೇರೆ, ಸ್ತ್ರೀವ್ಯಾಮೋಹದಿಂದ ಅವಳ ಗುಲಾಮನಾಗಿ ನಡೆದುಕೊಳ್ಳುವುದು ಬೇರೆ. ಅಂಥವರಿಗೆ ಸ್ತ್ರೈಣರೆಂದು ಕರೆಯುತ್ತಾರೆ. ಆದ್ದರಿಂದ ವಿವೇಕಿಗಳು ಸ್ತ್ರೀಯ-ರಲ್ಲಿ ಅತಿಯಾಗಿ ಆಸಕ್ತರಾಗಿ, ವಿವೇಕಭ್ರಷ್ಟರೆಂದು ಎನಿಸಿಕೊಳ್ಳಬಾರದೆಂದು ಇಲ್ಲಿ ಎಚ್ಚರಿಸಲಾಗಿದೆ.

## ೩೪೪. ನ ಸ್ತ್ರೈಣಸ್ಯ ಸ್ವರ್ಗಪ್ರಾಪ್ತಿಃ ಧರ್ಮಕೃತ್ಯಂ ಚ

ಸ್ತ್ರೀಯ ಅಧೀನನಾದವನು ವಿವೇಕವನ್ನು ಕಳೆದುಕೊಂಡಿರುವುದ-ರಿಂದ ಧರ್ಮಕೃತ್ಯಗಳಲ್ಲಿ ಆಸಕ್ತನಾಗಿರುವುದು ಅವನಿಗೆ ಕಠಿಣ. ಕೇವಲ ವಿಷಯಸುಖವೇ ಸರ್ವಸ್ವವಾದುದರಿಂದ, ಧರ್ಮಹೀನನಾಗಿ ಸ್ವರ್ಗಸುಖ-ದಿಂದ ವಂಚಿತನಾಗುತ್ತಾನೆ ಎಂದು ಈ ಸೂತ್ರವು ಸೂಚಿಸುತ್ತದೆ. ಇದ-ಲ್ಲದೆ—

## ೩೪೫. ಸ್ತ್ರೀಯೋಪಿ ಸ್ತ್ರೈಣಮವ ಮನ್ಯಂತೇ

ತನ್ನಲ್ಲಿ ಅತಿಯಾಗಿ ಆಸಕ್ತನಾದ ಸ್ತ್ರೈಣ ಪತಿಯನ್ನು ಅವನ ಹೆಂಡ-ತಿಯು ಕೂಡ ಅವಮಾನಿಸುತ್ತಾಳೆ. ಏಕೆಂದರೆ ತನ್ನ ಪತಿಯಲ್ಲಿಯ ಘನತೆ ಹಾಗು ಉದಾತ್ತತೆಯ ಅಭಾವದಿಂದಾಗಿ ಅವನು ಕ್ಷುದ್ರಪುರುಷನಾಗಿ ಅವ-ಳಿಗೆ ಕಾಣುವುದು ಸಹಜ. ಆದ್ದರಿಂದ ಅನ್ಯ ಆದರ್ಶಪುರುಷರ ತುಲನೆಯಲ್ಲಿ ಅವನು ಹೀನನೆನಿಸುವುದರಿಂದ ಅವಳು ಅವನನ್ನು ಗೌರವಿಸದಿರುವುದು ಅಸಹಜವೇನಲ್ಲ.

## ೩೪೬. ಸ್ತ್ರೀಣಾಂ ಭೂಷಣಂ ಸೌಭಾಗ್ಯಮ್

ಪತಿಯೊಂದಿಗೆ ಇದ್ದು, ಅವನಿಗೆ ಸರ್ವವಿಧದಲ್ಲಿ ಸಂತಸವನ್ನುಂಟು-ಮಾಡಿ, ಅವನ ಪ್ರೇಮಾದರಗಳಿಗೆ ಪಾತ್ರವಾಗುವುದೇ ಸ್ತ್ರೀಗೆ ಭೂಷಣ. ಇದೇ ಸೌಭಾಗ್ಯ.

## ೩೪೭. ಸ್ತ್ರೀಣಾಂ ಭೂಷಣಂ ಲಜ್ಜಾ

ಸ್ತ್ರೀಯರು ನಿರ್ಲಜ್ಜರಾಗಿರಬಾರದು. ಅದು ಅವರಿಗೆ ಭೂಷಣವಲ್ಲ ಎಂದು ಹೇಳುವ ಈ ಸೂತ್ರವು ಮರ್ಯಾದಸ್ತ ಸ್ತ್ರೀಯರ ಲಕ್ಷಣವನ್ನು ಹೇಳುತ್ತದೆ. ಇತ್ತೀಚೆಗೆ ಸ್ತ್ರೀಸ್ವಾತಂತ್ರ್ಯದ ಹೆಸರಿನಲ್ಲಿ ಸ್ತ್ರೀಯರಲ್ಲಿ ಲಜ್ಜೆಯ ಅಭಾವವು ಕಂಡುಬರುತ್ತಿದೆ.

## ೩೪೮. ಸ್ತ್ರೀಣಾಂ ನ ಭರ್ತುಃ ಪರಂ ದೈವತಮ್

ಸ್ತ್ರೀಯರಿಗೆ ಗಂಡನಿಗಿಂತ ಹೆಚ್ಚಿನ ದೇವರಿಲ್ಲ ಎಂದು ಹೇಳುವ ಈ ಸೂತ್ರದ ಅರ್ಥವು ಈ ಹಿಂದೆ ೩೪ ನೆಯ ಸೂತ್ರದಲ್ಲಿ ಹೇಳಿದ ವಿವೇಕ

ಹಾಗು ಹೊಣೆಗಾರಿಕೆಯಿಂದ ವ್ಯವಹಾರ ಮಾಡುವ ಪತಿಯಲ್ಲಿ ಮಾತ್ರ ದೇವತ್ವವನ್ನು ಸತಿಯು ಕಾಣಬೇಕು ಎಂಬುದನ್ನು ಮಾತ್ರ ಮರೆಯು-ವಂತಿಲ್ಲ. ಏಕೆಂದರೆ ಇದೇ ಚಾಣಕ್ಯನು ಅರ್ಥಶಾಸ್ತ್ರದಲ್ಲಿ ಪ್ರಾಣಘಾತಕ-ನಾದ ಪತಿಯಿಂದ ವಿಚ್ಛೇದ ಪಡೆಯಬೇಕೆಂದು ಹೇಳಿದ್ದಾನೆ. ಅರ್ಥಾತ್ ಪುರುಷರು ಸತಿಯನ್ನು ಆದರದಿಂದ ಕಂಡರೆ, ಸತಿಯು ಪತಿಯನ್ನು ದೇವ-ರೆಂದು ತಿಳಿಯಬೇಕು ಎನ್ನುವುದೇ ತಾತ್ಪರ್ಯ. ಪತಿಯನ್ನು ತಿರಸ್ಕರಿಸಿ, ದೇವರಿಗೆ ನಡೆದುಕೊಳ್ಳುವ ಸತಿಯನ್ನು ಮೂದಲಿಸಿದ ಈ ಜಾನಪದ ಹಾಡನ್ನು ಇಲ್ಲಿ ಸ್ಮರಿಸುವುದು ಉಚಿತ—

ಪೂಜೆಮಾಡಿದರೇನು, ಪತ್ರಿ ಏರಿಸಿದರೇನು
ಪತಿಮ್ಯಾಲೆ ಭಕ್ತಿ ಇರದಿದ್ದರ,
ಪತಿಮ್ಯಾಲೆ ಭಕ್ತಿ ಇರದಿದ್ದಮೇಲವ್ವಾ
ಮಾದೇವ ಹ್ಯಾಂಗ ಒಲಿದಾನ

## ೩೪೯. ತದನುವರ್ತನಮುಭಯಸುಖಮ್

ಪತಿಯನ್ನು ಅನುಸರಿಸಿ ನಡೆಯುವುದೇ ಇಬ್ಬರಿಗೂ—ಅಂದರೆ ಸತಿ-ಪತಿಯರಿಗೆ, ಉಭಯತ್ರವೆಂದರೆ ಇಹ—ಪರಗಳಲ್ಲಿ ಕ್ಷೇಮಕಾರಕ ಎಂದು ಬೋಧಿಸುವ ಈ ಸೂತ್ರವು, ಸುಖಸಂಸಾರಕ್ಕೆ ಸಹಕಾರವೇ ಮೂಲವೆಂಬು-ದನ್ನು ತಿಳಿಯಪಡಿಸುತ್ತದೆ. ಸತಿ—ಪತಿಗಳಲ್ಲಿ ಒಬ್ಬರು ಅಯೋಗ್ಯರಿದ್ದರೂ ಸಂಸಾರ ಹಾಳಾಗುತ್ತದೆ. ಸುಖಸಂಸಾರಕ್ಕೆ ಉಭಯತರೂ ಹೊಣೆಗಾರಿಕೆ-ಯಿಂದ ನಡೆದುಕೊಳ್ಳುವುದು ಅವಶ್ಯ.

## ೩೫೦. ಭರ್ತೃವಶವರ್ತಿನೀ ಭಾರ್ಯಾ

ಹಿಂದಿನ ಸೂತ್ರಗಳಲ್ಲಿಯ ವಿಚಾರಗಳಿಗೆ ಸಿದ್ಧಾಂತರೂಪವಾಗಿ ಇಲ್ಲಿ ಭಾರ್ಯಾ ಎಂದರೆ ಭರ್ತೃವಿನ ವಶದಲ್ಲಿರುವವಳು ಮಾತ್ರ ಎಂದು ಹೇಳುವ

ಈ ಸೂತ್ರವು ಪತಿಗೆ ಅನುಕೂಲವಾಗಿರುವುದೇ ಸತಿಯ ಲಕ್ಷಣ ಎಂದು ಪುನಃ ಪ್ರತಿಪಾದಿಸುತ್ತದೆ.

## ೩೫೧. ಯಾ ಪ್ರಸೂತೇ ಸಾ ಭಾರ್ಯಾ

ಭಾರ್ಯಾ ಎಂದರೆ ಹೆಂಡತಿ. ಅವಳ ಜೀವನದ ಸಾರ್ಥಕ್ಯವು ಸಂತಾನ-ಪ್ರಾಪ್ತಿಯಲ್ಲಿಯೇ ಇದೆ ಎಂದು ಈ ಸೂತ್ರವು ಅರ್ಥೈಸುತ್ತದೆ. ವಿವಾಹ ಮಾಡಿಕೊಳ್ಳುವುದು ಕೇವಲ ಲೈಂಗಿಕ ಸುಖಕ್ಕಾಗಿಯೇ ಅಲ್ಲ, ಅದು ಆನು-ಷಂಗಿಕವಾಗಿ ದೊರೆಯತಕ್ಕದ್ದು. ಮೂಲೋದ್ದೇಶ ಮಾತ್ರ ವಂಶಾಭಿ-ವೃದ್ಧಿಯೆಂದು ಹೇಳಲಾಗುತ್ತದೆ. ಈ ವಿಷಯವನ್ನು ಮುಂದಿನ ಸೂತ್ರದಲ್ಲಿ ಚರ್ಚಿಸಲಾಗುತ್ತದೆ.

## ೩೫೨. ಪುತ್ರಾರ್ಥಾ ಹಿ ಸ್ತ್ರಿಯಃ

ಭಾರತೀಯ ಪರಂಪರೆಗನುಗುಣವಾಗಿ ವಿವಾಹದ ಮುಖ್ಯ ಪ್ರಯೋ-ಜನವು ಪ್ರಜೋತ್ಪಾದನೆ. ಮಹಾಮಹಿಮರಾದ ವ್ಯಕ್ತಿಗಳು ತಮ್ಮ ವಿದ್ಯಾ-ಬುದ್ಧಿ ಹಾಗು ಕಾರ್ಯಶಕ್ತಿಗಳ ಮೂಲಕ ಚಿರಸ್ಮರಣೀಯರಾಗಬಹುದು. ಆದರೆ ಪ್ರತಿಯೊಬ್ಬ ಸಾಮಾನ್ಯ ವ್ಯಕ್ತಿಯು ಸಮಾಜಕ್ಕಾಗಿ ಏನಾದರೂ ಮಾಡಲು ಸಾಧ್ಯವಿದ್ದರೆ ಅದು ಪ್ರಜೋತ್ಪಾದನೆಯೊಂದೇ. ಸಂತಾನವೃದ್ಧಿ-ಯಿಂದಲೇ ನಮ್ಮ ಪರಂಪರೆಯು ಚಿರಂತನವಾಗಿ ಉಳಿಯಬಲ್ಲದು. ಅದ-ರಲ್ಲಿಯೂ ಪುರುಷಸಂತತಿಯ ಮಹತ್ವ ಹೆಚ್ಚು. ಹೆಣ್ಣುಮಕ್ಕಳನ್ನು ಬೇರೊಂದು ಕುಟುಂಬಕ್ಕೆ ಲಗ್ನಮಾಡಿಕೊಡುವುದರಿಂದ ನಮ್ಮ ಕುಲಾಚಾರ ಹಾಗು ಪರಂಪರೆಯ ಸಂರಕ್ಷಣೆಯು ಅವರಿಂದ ಸಾಧ್ಯವಿಲ್ಲ. ಪುತ್ರಸಂತಾನ-ದಿಂದಲೇ ಮಾತ್ರ ಅದು ಸಾಧ್ಯ. ಅದಕ್ಕೆಂದೇ ಅದೆಷ್ಟೋ ಋಷಿಗಳು,

ಮುನಿಗಳು, ರಾಜ–ಮಹಾರಾಜರು ಪುತ್ರಸಂತಾನಪ್ರಾಪ್ತಿಗಾಗಿ ಕಠಿಣ ತಪಸ್ಸನ್ನು ಆಚರಿಸಿದ್ದನ್ನು ನಾವು ಪುರಾಣೇತಿಹಾಸಗಳ ಅಭ್ಯಾಸದಿಂದ ತಿಳಿಯಬಹುದು. ಇದೇ ಪರಂಪರೆಯಲ್ಲಿ ಹುಟ್ಟಿ ಬೆಳೆದ ಚಾಣಕ್ಯನ ದೃಷ್ಟಿಯಲ್ಲಿ ವಿವಾಹವೂ ಪುತ್ರಸಂತಾನಕ್ಕೆ ದಾರಿಮಾಡಿಕೊಡದಿದ್ದಾಗ, ಅದು ನಿಷ್ಫಲವೆನಿಸುವುದೆಂದು ಅನಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ. ಈ ವಿಷಯವನ್ನು ಅತಿ ಸ್ಪಷ್ಟವಾಗಿ ಅರ್ಥಶಾಸ್ತ್ರದಲ್ಲಿ ವಿವರಿಸಲಾಗಿದೆ.

" ವರ್ಷಾಣ್ಯಷ್ಟಾ ಅಪ್ರಜಾಯಮಾನಾಂ ವಂಧ್ಯಾಂಚಾಕಾಂಕ್ಷೇತ, ದಶನಿಂದುಂ ದ್ವಾದಶಕನ್ಯಾ ಪ್ರಸವಿನೀಂ, ತತಃ ಪುತ್ರಾರ್ಥೀ ದ್ವಿತೀಯಾಂ ವಿಂದೇತ, ಪುತ್ರಾರ್ಥಾ ಹಿ ಸ್ತ್ರಿಯಃ " ಗರ್ಭಾಧಾನದ ನಂತರ ಸ್ತ್ರೀಯು ಎಂಟು ವರ್ಷಗಳ ವರೆಗೆ ಗರ್ಭಿಣಿಯಾಗದಿದ್ದರೆ, ಅವಳನ್ನು ಬಂಜೆಯೆಂದು ತಿಳಿಯಬೇಕು. ಹುಟ್ಟಿದ ಕೂಸುಗಳೆಲ್ಲ ಸತ್ತುಹೋಗುತ್ತಿದ್ದರೆ, ಹತ್ತುವರ್ಷ ದಾರಿನೋಡಿ. ಹಾಗೆಯೇ ಬರೀ ಹೆಣ್ಣುಕೂಸುಗಳನ್ನೇ ಹಡೆಯುತ್ತಿದ್ದರೆ, ಹನ್ನೆರಡುವರ್ಷ ದಾರಿಕಾಯ್ದು, ಪುತ್ರಸಂತಾನಕ್ಕಾಗಿ ಬೇರೊಂದು ಲಗ್ನಮಾಡಿಕೊಳ್ಳಬೇಕು. ಏಕೆಂದರೆ ವಂಶಾಭಿವೃದ್ಧಿಗೆ ಅವಶ್ಯವಾದ ಪುತ್ರಸಂತಾನವನ್ನು ಪಡೆಯುವುದೇ ವಿವಾಹದ ಮೂಲೋದ್ದೇಶವೆಂದು ಸ್ಪಷ್ಟಪಡಿಸಲಾಗಿದೆ.

## ೩೫೩. ಪರದಾರಾನ್ನ ಗಚ್ಛೇತ್

ಪರಸ್ತ್ರೀ ಸಂಗವು ಸರ್ವಥಾ ನಿಷಿದ್ಧವೆಂದು ಈ ಸೂತ್ರವು ತಿಳಿಸುತ್ತದೆ. ಒಂದು ಪ್ರಸಂಗದಲ್ಲಿ ಪರಸ್ತ್ರೀ ಹಾಗು ಪರಧನಗಳನ್ನು ಮುಟ್ಟದವನು ಮಹಾತ್ಮನೆಂದು ಹೇಳಿದ್ದುಂಟು. ಉಳಿದ ಎಲ್ಲ ಸದ್ಗುಣಗಳು ಇವಕ್ಕೆ ಅಂಗವಾದವುಗಳೆಂಬುದೇ ತಾತ್ಪರ್ಯ. ಕಾಮಿನಿ, ಕಾಂಚನ ಹಾಗು ಕೀರ್ತಿ ಈ ಮೂರಕ್ಕೆ ಮೋಹಗೊಳ್ಳದ ನರರು ದೊರೆಯುವುದು ಅಪರೂಪ. ಈ ಮೂರು ' ಕ ' ಕಾರಗಳಲ್ಲಿ ಒಂದಾದ ಕಾಮಿನೀ ಮೋಹದಿಂದ ದೂರ_

ವಿರುವುದನ್ನು ಈ ಸೂತ್ರವು ವಿಧಿಸಿದೆ. ಪರಸ್ತ್ರೀಸಂಗದ ಮೊದಲನೇ ದುಷ್ಪರಿಣಾಮ ಚಾರಿತ್ರ್ಯನಾಶ, ಎರಡನೆಯದು ರೋಗಾದಿಗಳಿಗೆ ನಿಮಂತ್ರಣ ಕೊಟ್ಟಂತೆ, ಮೂರನೆಯದಾಗಿ ಸ್ವಂತ ಸಂಸಾರವು ಹದಗೆಟ್ಟುಹೋಗುವುದು. ಇದನ್ನರಿತು ವ್ಯವಹರಿಸುವುದೇ ಭೂಷಣ.

## ೩೫೪. ನ ಪರಕ್ಷೇತ್ರೇ ಬೀಜಂ ನಿಕ್ಷಿಪೇತ್

ಪರಸ್ತ್ರೀ ಸಂಗದಿಂದಾಗಿ ಪರಕ್ಷೇತ್ರದಲ್ಲಿ ತಮ್ಮ ಬೀಜವನ್ನು ಬಿತ್ತಿದಂತಾಗುತ್ತದೆ. ಇದರ ದೂರಗಾಮೀ ಪರಿಣಾಮಗಳನ್ನು ವಿಚಾರಮಾಡಿದಲ್ಲಿ ಅತಿ ಭಯಾನಕವಾದ ಚಿತ್ರವು ಗೋಚರಿಸದಿರಲಾರದು. ಮೊದಲನೆಯದಾಗಿ ತಮ್ಮ ಬೀಜವು ಹೀನ ಕ್ಷೇತ್ರದಲ್ಲಿ ಬಿದ್ದರೆ, ಆ ಸಂತಾನವು ಹೀನವರ್ಗಕ್ಕೆ ಸೇರಿ, ಅದರಿಂದುದ್ಭವಿಸಬಹುದಾದ ಪಾಪಕ್ಕೆ ತಾವೇ ಕಾರಣರಾಗುತ್ತಾರೆ. ಸ್ವ-ವರ್ಗಕ್ಕೆ ಆ ಬೀಜವು ಶತ್ರುವಾಗಿಯೂ ಪರಿಣಮಿಸಬಹುದು. ವರ್ಣಸಾಂಕರ್ಯಕ್ಕೆ ಅವಕಾಶ ದೊರೆಯುವುದು—ಇತ್ಯಾದಿ ದೋಷಗಳಿಂದಾಗಿ ಇಂಥ ಅಕಾರ್ಯವು ನಿಂದ್ಯವೆಂದು ಚಾಣಕ್ಯನ ಅಭಿಪ್ರಾಯ.

## ೩೫೫. ಸತೀರ್ಥಾಗಮನಾತ್ ಬ್ರಹ್ಮಚರ್ಯಂ ನಶ್ಯತಿ

ರಜಸ್ವಲೆಯಾದ ಸ್ತ್ರೀಯೊಂದಿಗೆ ಮೊದಲಿನ ಮೂರು ರಾತ್ರಿಗಳಲ್ಲಿ ಸಂಭೋಗವು ನಿಷಿದ್ಧವೆಂದು ಧರ್ಮಶಾಸ್ತ್ರವು ವಿಧಿಸುತ್ತದೆ. ಅಂಥ ವೇಳೆಯಲ್ಲಿ ಸಂಭೋಗ ಮಾಡಿದರೆ ಬ್ರಹ್ಮಚರ್ಯವು ನಷ್ಟವಾಗುತ್ತದೆಂದು ಈ ಸೂತ್ರವು ಬೋಧಿಸುತ್ತವೆ.

ಸಂತಾನಕ್ಕಾಗಿ ಶಾಸ್ತ್ರವಿಹಿತವಾದ ರೀತಿಯಲ್ಲಿ ಮಿತವಾಗಿ ಸ್ತ್ರೀಸಹವಾಸ ಮಾಡುವವನು ಬ್ರಹ್ಮಚಾರಿಯೆಂದೇ ಮನುಸ್ಮೃತಿಯು ಹೇಳುವುದನ್ನು ಇಲ್ಲಿ

ಸ್ಮರಿಸಬಹುದು. ಇವಲ್ಲದೆ ರಜೋಮಾಲಿನ್ಯದಿಂದ ಶರೀರದಲ್ಲಿ ದೋಷಗಳು ಉಂಟಾದಾಗ ಸ್ತ್ರೀಸಂಗವು ಅನಾರೋಗ್ಯಕ್ಕೆ ಕಾರಣವೆನಿಸುವುದು. ಈ ಸೂತ್ರ-ದಲ್ಲಿಯ ಉಪದೇಶಕ್ಕೆ ಕಾರಣವಿರಲು ಸಾಕು.

## ೩೫೬. ತೀರ್ಥಸಮವಾಯೇ ಪುತ್ರವತೀಮನುಗಚ್ಛೇತ್

ಈ ಸೂತ್ರಕ್ಕೆ ಎರಡು ರೀತಿಯಲ್ಲಿ ಅರ್ಥ ಮಾಡಬಹುದು. ಒಬ್ಬ ವ್ಯಕ್ತಿಗೆ ಅನೇಕ ಜನ ಪತ್ನಿಯರಿದ್ದು, ಅವರಲ್ಲಿ ಹಲವರಿಗೆ ಏಕಕಾಲದಲ್ಲಿ ಮಾಸಿಕ ರಜೋದರ್ಶನವಾದಾಗ, ಪುತ್ರವತಿಯೊಂದಿಗೆ ಮಾತ್ರ ಸಂಯೋಗ ಮಾಡಬಹುದು. ಏಕೆಂದರೆ ವಂಧ್ಯಾಸಂಯೋಗವು ನಿಷ್ಫಲವೆಂಬುದು ಒಂದು ಅರ್ಥ. ಮಾಸಿಕ ರಜೋದರ್ಶನದ ನಂತರ ವಿಧಿಸಿದ ಕಾಲದಲ್ಲಿ ಸ್ತ್ರೀಸಮಾ-ಗಮವು ಅವಶ್ಯ ಕರ್ತವ್ಯ ಅಥವಾ ಧರ್ಮ ಎಂದು ಶಾಸ್ತ್ರವು ಹೇಳುವುದೇ ಇದಕ್ಕೆ ಕಾರಣ. ಸಂತಾನನಿರೋಧದ ಈಗಿನ ಕಾಲದಲ್ಲಿ ಇಂಥ ಮಾತುಗಳಿಗೆ ಬೆಲೆಯಿಲ್ಲ.

ಎರಡನೆಯದಾಗಿ, ತೀರ್ಥಯಾತ್ರೆಗೆ ಹೋಗುವಾಗ ಕುಟುಂಬಸಮೇತ-ವಾಗಿ ಹೋಗುವುದು ಧರ್ಮ. ಅಂಥ ವೇಳೆಯಲ್ಲಿ ಅನೇಕ ಪತ್ನಿಯರಿದ್ದಾಗ, ಪುತ್ರವತಿಯಾದವಳನ್ನೇ ಸಂಗಡ ಕರೆದುಕೊಂಡು ಹೋಗಬೇಕೆನ್ನುವುದು ಬೇರೊಂದರ್ಥ. ಒಟ್ಟಿನ ಮೇಲೆ ಸ್ತ್ರೀಜನ್ಮದ ಸಾರ್ಥಕ್ಯವು ಸಂತಾನೋತ್ಪತ್ತಿ, ವಿಶೇಷತಃ ಪುತ್ರಸಂತಾನ ಪ್ರಾಪ್ತಿಯಲ್ಲಿದೆ ಎಂದೇ ಈ ಸೂತ್ರವು ಪರ್ಯಾಯ-ವಾಗಿ ತಿಳಿಸುತ್ತದೆ.

## ೩೫೭. ಸ್ವದಾಸೀ ಪರಿಗ್ರಹೋ ದಾಸಭಾವಃ

ಸ್ವದಾಸಿಯೊಂದಿಗೆ ಲೈಂಗಿಕ ಸಂಬಂಧವನ್ನಿಟ್ಟುವುದು ಅವಳ ದಾಸ್ಯತ್ವ-

ವನ್ನು ನಾವು ವಹಿಸಿದಂತೆಯೇ ಎಂದು ಈ ಸೂತ್ರವು ಬೋಧಿಸುತ್ತದೆ. ಅರ್ಥಶಾಸ್ತ್ರದಲ್ಲಿ ಈ ವಿಷಯವನ್ನು ಚರ್ಚಿಸುವಾಗ. ಸ್ವದಾಸಿಯಲ್ಲಿ ಸಂತಾನೋತ್ಪತ್ತಿಯನ್ನು ಮಾಡಿದರೆ, ಅವಳು ಮನೆಯ ಯಜಮಾನಿಯಾಗುವಳಲ್ಲದೆ ಅಂಥ ಸಂತಾನವು ಕುಲಕ್ಕೆ ವಾರಸುದಾರನಾಗಿ ಮನೆತನದ ಹಿರಿಮೆಯನ್ನು ಹೀನಮಟ್ಟಕ್ಕೆ ಇಳಿಸುತ್ತದೆ. ಆದ್ದರಿಂದ ಇಂಥ ಅಕಾರ್ಯವು ಸಹಜವಾಗಿಯೇ ನಿಂದ್ಯವೆನಿಸುವುದು.

## ೩೫೮. ಕುಲಂ ಪ್ರಖ್ಯಾಪಯತಿ ಪುತ್ರಃ

ಲೌಕಿಕ ದೃಷ್ಟಿಯಿಂದ ಭಾರತೀಯ ಪರಂಪರೆಯಲ್ಲಿ ಪುತ್ರಸಂತಾನಕ್ಕಿರುವಷ್ಟು ಮಹತ್ವವು ಬೇರೆ ಯಾವುದಕ್ಕೂ ಇಲ್ಲ. ಅಂತೆಯೇ ' ಅಪುತ್ರಸ್ಯ ಗತಿರ್ನಾಸ್ತಿ ' ಎಂದು ಶಾಸ್ತ್ರವು ಹೇಳುತ್ತದೆ. ಮರಣಾನಂತರ ಪಿಂಡ ದಾನಾದಿಗಳಿಂದ ಸುತನು ಪಿತೃಗಳ ಸದ್ಗತಿಗೆ ಕಾರಣನಾಗುತ್ತಾನೆ ಎಂಬ ಧರ್ಮಶಾಸ್ತ್ರ ವಚನವೇ ಇದಕ್ಕೆ ಮೂಲಾಧಾರ.

ಜೀವತೋ ವಾಕ್ಯ ಕರಣಾತ್ ಪ್ರತ್ಯಬ್ದಂ ಪಾರ್ವಣೇನ ವೈ ।
ಗಯಾಯಾಂ ಪಿಂಡದಾನಾಚ್ಚ ತಸ್ಮಾತ್ ಪುತ್ರಸ್ಯ ಪುತ್ರತಾ ॥

ಎಂಬ ಧರ್ಮಶಾಸ್ತ್ರ ವಚನವು, ಮಗನು ತಂದೆ ಜೀವಿಸಿರುವಾಗ, ಅವನಿಗೆ ಒಪ್ಪಿಗೆಯಾಗುವಂತೆ ನಡೆದುಕೊಂಡು, ಮರಣಾನಂತರ ಪ್ರತಿವರ್ಷ ಶ್ರಾದ್ಧ–ತಿಥಿಯಂದು ಪಿಂಡದಾನ ಮಾಡಿ, ಕೊನೆಗೆ ( ಬಿಹಾರ ರಾಜ್ಯದಲ್ಲಿರುವ ) ಗಯಾ ಕ್ಷೇತ್ರದಲ್ಲಿ ವಿಷ್ಣುಪಾದದ ಮೇಲೆ ಪಿಂಡದಾನ ಮಾಡುವುದರ ಮುಖಾಂತರ ಪುತ್ರತ್ವಕ್ಕೆ ಸಾರ್ಥಕ್ಯವನ್ನು ಪಡೆಯುತ್ತಾನೆ.

ಎಲ್ಲ ಸಂತೋಷಗಳಲ್ಲಿಯೂ ಪುತ್ರಜನ್ಮದಿಂದುಂಟಾಗುವ ಸಂತೋಷವು ಮಿಗಿಲಾದದ್ದು ಎಂಬ ಮಾತು ' ಅರ್ಧಮಾತ್ರಾ ಲಾಘವೇನ ಪುತ್ರೋತ್ಸವಂ ಮನ್ಯಂತೇ ವೈಯಾಕರಣಾಃ ', ' ಪುತ್ರಸ್ತೇ ಜಾತಃ ಇತ್ಯುಕ್ತೇ ಪರಮಾನಂದಂ ಸೂಚಯತಿ ಮುಖಚರ್ಯಾ ' ಎಂಬ ವಾಕ್ಯಗಳಿಂದ ಸೂಚಿತವಾಗುತ್ತದೆ.

ಇಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ವಿಶೇಷವಾಗಿ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದಾಗಿ ಪುತ್ರಜನ್ಮಕ್ಕೆ ಅಷ್ಟು ಮಹತ್ವ ಉಳಿದಿಲ್ಲ. ಸ್ತ್ರೀ-ಪುರುಷ ಸಮಾನತೆಯ ತತ್ವಕ್ಕನುಗುಣವಾಗಿ ಈಗ ಮಗ–ಮಗಳು ಸಮಾನರೆಂದು ತಿಳಿಯಲಾಗುತ್ತದೆ. ಅಷ್ಟೇ ಅಲ್ಲ, ಪಿಂಡದಾನ, ಸದ್ಗತಿ ಇತ್ಯಾದಿ ಶಾಸ್ತ್ರ–ವಚನಗಳಲ್ಲಿ ವಿಶ್ವಾಸವು ಕ್ರಮೇಣ ಅಳಿಸಿಹೋಗಹತ್ತಿದೆ. ಅಲ್ಲಲ್ಲಿ ಅಲ್ಪ–ಸ್ವಲ್ಪ ಪ್ರಮಾಣದಲ್ಲಿ ಕಂಡುಬರುತ್ತಿದ್ದರೂ, ಅದು ಯಾಂತ್ರಿಕವಾಗಿದೆಯೇ ವಿನಃ ಶ್ರದ್ಧೆಯಿಂದಲ್ಲ. ಉಚ್ಚ ಶಿಕ್ಷಣವನ್ನು ಪಡೆದು ಪರದೇಶಕ್ಕೆ ಹೋಗುವ ಹವ್ಯಾಸವನ್ನಿಟ್ಟುಕೊಂಡ ಮಕ್ಕಳು. ತಂದೆ–ತಾಯಿಗಳ ಮರಣಕಾಲಕ್ಕೆ ಕೂಡ ಅವರ ಹತ್ತಿರ ಇರುವುದು ಅಸಾಧ್ಯವಾಗಿರುವಾಗ. ಸದ್ಗತಿಯ ಮಾತು ದೂರವೇ ಉಳಿಯಿತು.

## ೩೫೯. ನಾನಪತ್ಯಸ್ಯ ಸ್ವರ್ಗಃ

ಪ್ರಾಚೀನ ಪರಂಪರೆಯ ವಿಷಯವು ಈಗಾಗಲೇ ಹಿಂದಿನ ಸೂತ್ರದಲ್ಲಿ ಚರ್ಚಿಸಲ್ಪಟ್ಟಿದ್ದು. ಅದಕ್ಕನುಗುಣವಾಗಿ ಮಕ್ಕಳಿಲ್ಲದವರಿಗೆ ಸ್ವರ್ಗವಿಲ್ಲವೆಂದು ( ಸದ್ಗತಿ ) ಈ ಸೂತ್ರವು ತಿಳಿಯಪಡಿಸುತ್ತದೆ.

## ೩೬೦. ಅತಿಲಾಭಃ ಪುತ್ರಲಾಭಃ

ಸಂಸಾರದಲ್ಲಿ ಎಲ್ಲಕ್ಕೂ ಹೆಚ್ಚಿನ ಲಾಭವೆಂದರೆ ಪುತ್ರಲಾಭವೆಂದು ಪರಂಪರೆಗನುಗುಣವಾಗಿ ಇಲ್ಲಿ ಹೇಳಲ್ಪಟ್ಟಿದೆ. ೩೫೮ನೆಯ ಸೂತ್ರದಲ್ಲಿ ಈ ವಿಷಯವು ವಿವರವಾಗಿ ಚರ್ಚಿಸಲ್ಪಟ್ಟಿರುವುದರಿಂದ ಇಲ್ಲಿ ಹೆಚ್ಚಿಗೆ ಬರೆಯುವ ಆವಶ್ಯಕತೆ ಇಲ್ಲ.

## ೩೬೧. ದುರ್ಗತೇ ಪಿತರೌ ರಕ್ಷತಿ ಸ ಪುತ್ರಃ

' ಸುತನೇ ಸದ್ಗತಿದಾತನು ' ಎಂಬುದನ್ನೇ ಬೇರೆ ಶಬ್ದಗಳಲ್ಲಿ ಈ ಸೂತ್ರದಲ್ಲಿ ದುರ್ಗತಿಯಿಂದ ಮಾತಾ-ಪಿತೃಗಳನ್ನು ರಕ್ಷಿಸುವವನೇ ಪುತ್ರನು ಎಂದು ವ್ಯಾಖ್ಯಾನಿಸಲಾಗಿದೆ. ಇದಕ್ಕೂ ಹೆಚ್ಚಿನ ವಿವರಣೆಯ ಅವಶ್ಯಕತೆ ಇಲ್ಲ.

## ೩೬೨. ಪುತ್ರೇ ಗುಣವತೀ ಕುಟುಂಬಿನಃ ಸ್ವರ್ಗಃ

ಸದ್ಗುಣಿಯಾದ ಮಗನಿದ್ದ ಕುಟುಂಬವು ಈ ಲೋಕದಲ್ಲಿ ಸ್ವರ್ಗ-ಸುಖವನ್ನು ತಂದುಕೊಡುತ್ತದೆ—ಎಂದು ಹೇಳುವ ಈ ಸೂತ್ರವು, ಪುತ್ರನು ಸದ್ಗುಣಿಯಾಗಿರಬೇಕಾದುದರ ಆವಶ್ಯಕತೆಯನ್ನು ಎತ್ತಿತೋರಿಸುತ್ತದೆ. ಸುಭಾಷಿತವೊಂದರಲ್ಲಿ—

' ವರಮೇಕೋ ಗುಣೀ ಪುತ್ರೋ ನ ಚ ಮೂರ್ಖ ಶತಾದಪಿ ' ಎಂದರೆ ಒಂದು ನೂರು ಮೂರ್ಖ ಮಕ್ಕಳಿಗಿಂತ ಒಬ್ಬ ಒಳ್ಳೆಯ ಮಗನಿದ್ದರೆ ಸಾಕು ಎಂದು ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು, ಹಾಗೆಯೇ—

ಅಜಾತ ಮೃತ ಮೂರ್ಖಾಣಾಂ ವರಮಾದ್ಯೌ ನ ಚಾಂತಿಮಃ ।
ಸಕೃದ್ದುಃಖಕರಾ ವಾದ್ಯಾ ಅಂತಿಮಸ್ತು ಪದೇ ಪದೇ ॥

ಎಂಬ ಇನ್ನೊಂದು ಶ್ಲೋಕದಲ್ಲಿ ಮಕ್ಕಳು ಹುಟ್ಟದಿದ್ದರೆ, ಅಥವಾ ಹುಟ್ಟಿ ಸತ್ತರೆ ಒಮ್ಮೆಯೇ ದುಃಖವಾಗುತ್ತದೆ. ಆದರೆ ಮೂರ್ಖ ಮಗನು ಕ್ಷಣ-ಕ್ಷಣಕ್ಕೂ ದುಃಖವನ್ನು ಕೊಡುತ್ತಾನೆ ಎಂದು ಹೇಳಿದ್ದು, ಪುತ್ರನು ಸದ್ಗುಣಿಯಾಗಿರಬೇಕಾದುದರ ಅನಿವಾರ್ಯತೆಯನ್ನು ಸೂಚಿಸುತ್ತದೆ.

## ೩೬೩. ನ ಪುತ್ರ ಸಂಸ್ಪರ್ಶಾತ್ ಪರಂ ಸುಖಮ್

ಮಗನನ್ನೆತ್ತಿ ಮುದ್ದಾಡುವುದಕ್ಕಿಂತ ಹೆಚ್ಚಿನ ಸುಖವಿಲ್ಲವೆಂದು ಹೇಳುವ ಈ ಸೂತ್ರವು ಪುತ್ರಜನ್ಮದ ಶ್ರೇಷ್ಠತೆಯನ್ನು ಸಾರುತ್ತದೆ, ಐತರೇಯ

ಬ್ರಾಹ್ಮಣದಲ್ಲಿ ಈ ವಿಷಯವಾಗಿ ಬರುವ ಒಂದೆರಡು ಗಾಥೆ ( ಶ್ಲೋಕ ) ಗಳನ್ನು ಇಲ್ಲಿ ಸ್ಮರಿಸಬಹುದು.

೧. ಯಾವಂತಃ ಪೃಥಿವ್ಯಾಂ ಭೋಗಾ ಯಾವಂತೋ ಜಾತವೇದಸಿ ।
ಯಾವಂತೋ ಅಪ್ಸು ಪ್ರಾಣಿನಾಂ ಭೂಯಾನ್ ಪುತ್ರೇ ಪಿತುಸ್ತತಃ

೨. ಅನ್ನಂ ಹ ಪ್ರಾಣಃ ಶರಣಂ ಹ ವಾಸಃ ರೂಪಂ ಹಿರಣ್ಯಂ ಪಶವೋ ವಿವಾಹಾ ।
ಸಖಾ ಹ ಜಾಯಾ ಕೃಪಣಂ ಹಿ ದುಹಿತಾ ಜ್ಯೋತಿರ್ಹಿ ಪುತ್ರಃ ಪರಮ ವ್ಯೋಮಾನ್ ॥

ಭೂಮಿಯ ಮೇಲೆ ( ಜಗತ್ತಿನಲ್ಲಿ ) ಎಷ್ಟು ಭೋಗಗಳಿವೆಯೋ, ಯಜ್ಞಾದಿಗಳಿಂದ ಯಾವ ಫಲವು ದೊರೆಯುವುದೋ, ಪುಣ್ಯತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಯಾವ ಪುಣ್ಯ ಲಭಿಸುವುದೋ–ಅವೆಲ್ಲ ಪುತ್ರಪ್ರಾಪ್ತಿಯಿಂದ ದೊರೆಯುವುದು.

ಮನುಷ್ಯನಿಗೆ ಅನ್ನವೇ ಪ್ರಾಣ, ವಸ್ತ್ರವೇ ಶರಣ, ಹಿರಣ್ಯವೇ ರೂಪ, ಪಶುಧನವೇ ವಿವಾಹಕ್ಕೆ ಕಾರಣ, ಹೆಂಡತಿಯೇ ಪರಮಮಿತ್ರಳು, ಮಗಳು ಹುಣ್ಣಿನಂತೆ, ಆದರೆ ಮಗನು ಸ್ವರ್ಗದಲ್ಲಿ ಹಚ್ಚಿದ ದೀಪದಂತೆ ಎಂದು ಅಲಂಕಾರಿಕವಾಗಿ ಹೇಳಲಾಗಿದೆ.

ಪುತ್ರಜನ್ಮದ ಮಹತ್ವ, ಆದರಲ್ಲಿಯೂ ಸತ್ಪುತ್ರ ಲಾಭ, ಈ ವಿಷಯಕ್ಕೆ ಕಾಳಿದಾಸನು ರಘುವಂಶದಲ್ಲಿ ಹೇಳಿದ ಮಾತು ಕೇವಲ ಅಲಂಕಾರಿಕವಾಗಿರದೆ ಸುವರ್ಣಾಕ್ಷರಗಳಲ್ಲಿ ಬರೆದಿಡಲು ಯೋಗ್ಯವಾಗಿದೆ.

ಲೋಕಾಂತರಸುಖಂ ಪುಣ್ಯಂ ತಪೋದಾನ ಸಮುದ್ಭವಂ ।
ಸಂತತಿಃ ಶುದ್ಧವಂಶ್ಯಾ ಹಿ ಪರತ್ರೇಹ ಚ ಶರ್ಮಣೇ ॥

ತಪಸ್ಸು, ದಾನ ಇವುಗಳಿಂದ ಲಭಿಸಿದ ಪುಣ್ಯವು ಜನ್ಮಾಂತದಲ್ಲಿ ಹಾಗು ಲೋಕಾಂತರದಲ್ಲಿ ಸುಖವನ್ನು ತರುವುದು. ಆದರೆ ಶುದ್ಧ ವಂಶದಲ್ಲಿ ಜನಿಸಿದ ಸಂತತಿಯು ( ವಿದ್ಯಾ ಹಾಗು ಸದ್ಗುಣಸಂಪನ್ನವಾದದ್ದು ) ಇಹ–ಪರ-

ಗಳೆರಡರಲ್ಲಿಯೂ ಸುಖವನ್ನು ತರುವುದರಲ್ಲಿ ಸಂಶಯವಿಲ್ಲ. ಇದೊಂದೇ ಶ್ಲೋಕವು ಸತ್ಪುತ್ರನ ವಿಷಯಕ್ಕೆ ಹೇಳಬೇಕಾದದ್ದೆಲ್ಲವನ್ನೂ ಹೇಳಿದೆ ಎಂದರೆ ತಪ್ಪಾಗಲಾರದು.

## ૩೬೪. ಪುತ್ರಾ ವಿದ್ಯಾನಾಂ ಪಾರಂ ಗಮಯಿತವ್ಯಾಃ

ಮಕ್ಕಳು ಸದ್ಗುಣಿಗಳಾಗಿರಬೇಕಾದರೆ ಅವರನ್ನು ಪೂರ್ಣ ವಿದ್ಯಾವಂತರನ್ನಾಗಿ ಮಾಡಬೇಕು. ಸಾಕಷ್ಟು ಸಂಪತ್ತನ್ನು ಗಳಿಸಿ, ಅವರಿಗೆ ಬಿಟ್ಟುಹೋದರೆ, ದುಃಶ್ಚಟಗಳಿಗೆ ಈಡಾಗಿ ಹಾಳಾಗುತ್ತಾರೆ. ಆದರೆ ವಿದ್ಯಾವಂತರು ಸುಸಂಸ್ಕೃತರಾಗಿ, ಕುಲಕ್ಕೆ ಕೀರ್ತಿಯನ್ನು ತಂದು ತಮ್ಮ ಜೀವನವನ್ನು ಸಾರ್ಥಕಗೊಳಿಸುತ್ತಾರೆ. ಸಿರಿವಂತರ ಮಕ್ಕಳು ಮಾಡುವ ದುಷ್ಕೃತ್ಯಗಳನ್ನು ಇಲ್ಲಿ ನೆನಸಿದರೆ ಹಾಗು ಸುಸಂಸ್ಕೃತರ ಮಕ್ಕಳ ವ್ಯವಹಾರವನ್ನು ಅವರೊಂದಿಗೆ ಹೋಲಿಸಿದರೆ, ಈ ಸೂತ್ರದ ಮಹತ್ವವು ತಿಳಿಯುವುದು.

## ૩೬೫. ಪುತ್ರೋ ನ ಸ್ತೋತವ್ಯಃ

ಮಗನನ್ನು ಅವನ ಮುಂದೆ ಸ್ತೋತ್ರ ಮಾಡಬಾರದು ಎಂದು ಹೇಳುವ ಈ ಸೂತ್ರವು ಲೋಕವ್ಯವಹಾರವನ್ನು ಬೋಧಿಸುತ್ತದೆ. ಅತಿಯಾಗಿ ಮಕ್ಕಳಿಗೆ ಸಲಿಗೆಯನ್ನು ಕೊಟ್ಟು ಹೊಗಳುತ್ತ ಹೋದರೆ, ಅವರು ದುರ್ಮಾರ್ಗಗಾಮಿಗಳಾಗುವ ಭಯವಿರುತ್ತದೆ. ಆದ್ದರಿಂದ ಅವರಲ್ಲಿಯ ಯೋಗ್ಯತೆಯನ್ನು ಮನಸಾ ಗೌರವಿಸಿದರೂ, ಹದಿನಾರು ವರ್ಷದವರಾಗುವ ವರೆಗೆ ಅವರನ್ನು ದಂಡಿಸುತ್ತ, ವಿದ್ಯಾ, ಸಂಸ್ಕೃತಿ ಇವುಗಳ ಅಭಿವೃದ್ಧಿಗಾಗಿ ಶ್ರಮಿಸಬೇಕು. ಎಂದರೆ ಅವರ ಭವಿಷ್ಯವು ಉಜ್ವಲವಾಗುವುದರಲ್ಲಿ ಸಂದೇಹವಿಲ್ಲ. ಈ ವಿಷಯದಲ್ಲಿದ್ದ ಸುಭಾಷಿತವೊಂದನ್ನು ಇಲ್ಲಿ ಸ್ಮರಿಸಬಹುದು.

ಲಾಲಯೇತ್ ಪಂಚವರ್ಷಾಣಿ ದಶವರ್ಷಾಣಿ ತಾಡಯೇತ್ ।
ಪ್ರಾಪ್ತೇತು ಷೋಡಶೇ ವರ್ಷೇ ಪುತ್ರೇ ಮಿತ್ರವದಾಚರೇತ್ ॥

ಐದು ವರ್ಷದವರಾಗುವ ವರೆಗೆ ಮಕ್ಕಳನ್ನು ಅಕ್ಕರೆಯಿಂದ ಬೆಳಸಿ. ಮುಂದೆ ಹತ್ತು ವರ್ಷ ವಿದ್ಯಾವಂತರು ಹಾಗು ಸುಸಂಸ್ಕೃತರಾಗಬೇಕೆಂಬ ಘನ ಉದ್ದೇಶದಿಂದ ಅವರನ್ನು ಆಗಾಗ ಶಿಕ್ಷಿಸುತ್ತಿರಬೇಕು. ಅನಂತರ ಹದಿನಾರನೆಯ ವರ್ಷದಲ್ಲಿ ಕಾಲಿಟ್ಟ ಮೇಲೆ ಮಿತ್ರರಂತೆ ಅವರೊಂದಿಗೆ ವ್ಯವಹರಿಸಬೇಕು ಎಂಬುದು ವಿವೇಕಪೂರ್ಣವಾದ ಲೋಕವ್ಯವಹಾರ. ಆದರೆ ಕೇವಲ ಸಲಿಗೆಯನ್ನು ಕೊಟ್ಟ ಮಕ್ಕಳು ದುಷ್ಟರಾಗಿ. ದುರ್ಯೋಧನನು ಧೃತರಾಷ್ಟ್ರನೊಂದಿಗೆ ನಡೆದುಕೊಂಡದ್ದನ್ನು ಸ್ಮರಣೆಗೆ ತಂದುಕೊಡಬಹುದು.

## ೩೬೬. ನ ರಾಜ್ಞಃ ಪರಂ ದೈವತಮ್

ರಾಜನಿಗಿಂತಲೂ ಹೆಚ್ಚಿನ ದೇವತೆಯಿಲ್ಲ ಎಂದು ಹೇಳುವ ಈ ಸೂತ್ರವು ಮೇಲುನೋಟಕ್ಕೆ ಚಾಣಕ್ಯನು ರಾಜ ಹಾಗು ದೇವರಲ್ಲಿ ಭೇದವಿಲ್ಲ ಎಂಬ ಅಭಿಪ್ರಾಯದವನು ಎಂದು ಅನಿಸತ್ತದೆ. ಆದರೂ 'A is B,' 'A is equal to B 'ಹಾಗು 'A is like B' ಎಂಬುವಲ್ಲಿ ಸೂಕ್ಷ್ಮ ಭೇದವಿದ್ದಂತೆ, ಚಾಣಕ್ಯನ ರಾಜನು ವಿದ್ಯಾ, ವಿನಯ, ಶೌರ್ಯ. ಧೈರ್ಯ. ತ್ಯಾಗ—ಇತ್ಯಾದಿ ಸದ್ಗುಣಗಳನ್ನು ಪಡೆದ ಒಬ್ಬ ಮಾನವೋತ್ತಮ ಅಥವಾ ಅತಿಮಾನವನಾಗಿ ಅರ್ಥಶಾಸ್ತ್ರದಲ್ಲಿ ಚಿತ್ರಿಸಲ್ಪಟ್ಟಿದ್ದಾನೆ. ಅವನಿಗೆ ಬೇಕಾದರೆ ದೇವಸದೃಶನೆನ್ನಬಹುದು— ಎಂಬುದೇ ಅವನ ಅಭಿಪ್ರಾಯವಾಗಿರಲು ಸಾಕು.

ಭಾರತೀಯ ಪರಂಪರೆಗನುಗುಣವಾಗಿ 'ನಾ ವಿಷ್ಣುಃ ಪೃಥಿವೀ ಪತಿಃ' ಎಂದರೆ ಭೂಪತಿಯು ಸಾಕ್ಷಾತ್ ವಿಷ್ಣುಸ್ವರೂಪನು ಎಂದು ಹೇಳಲಾಗುತ್ತದೆ. ಮನುವು ಕೂಡ ಇದೇ ಮಾತನ್ನು ( ಮಹತೀ ದೇವತಾ ಹ್ಯೇಷಾ ನರರೂಪೇಣ ತಿಷ್ಠತಿ ) ಮನುಷ್ಯರೂಪದಲ್ಲಿ ತೋರುವ ಮಹಾದೇವತೆಯೇ ರಾಜನು ಎಂದು ಪ್ರತಿಪಾದಿಸಿದ್ದಾನೆ. ಆದರೆ ಚಾಣಕ್ಯನು ಮಾತ್ರ ರಾಜನು

ತನ್ನಿಂದ ಸಂಭವಿಸಬಹುದಾದ ತಪ್ಪುಗಳನ್ನು ತಿದ್ದುವುದಕ್ಕಾಗಿ ಆಚಾರ್ಯ-ರನ್ನು, ಅಮಾತ್ಯರನ್ನು ನಿಯಮಿಸಿ, ಒಂದು ರೀತಿಯಲ್ಲಿ ತನ್ನ ಮೇಲೆ ಬಂಧನವನ್ನು ಕಲ್ಪಿಸಿಕೊಳ್ಳಬೇಕು ಅರ್ಥಾತ್ ಸರ್ವಾಧಿಕಾರಿಯಾಗಿರಬಾರದು ಎಂದು ಹೇಳಿದ್ದನ್ನು ನೋಡಿದರೆ ರಾಜನನ್ನು ದೇವಸದೃಶನನ್ನಾಗಿ ಕಂಡರೂ ಅವನು ದೇವರಲ್ಲ ಎಂಬುದೇ ಶಾಸ್ತ್ರಕಾರನ ಅಭಿಪ್ರಾಯವೆಂದೆನಿಸುತ್ತದೆ. ಏಕೆಂದರೆ ತಪ್ಪು ಮಾಡುವುದು ಮನುಷ್ಯನ ಲಕ್ಷಣ. ರಾಜನಿಂದ ತಪ್ಪು-ಗಳು ಸಂಭವಿಸಬಹುದು ಎಂದು ಒಪ್ಪಿಕೊಂಡದ್ದು ಇದನ್ನು ದೃಢಪಡಿಸು-ತ್ತದೆ. ಈ ದೃಷ್ಟಿಕೋನವನ್ನು ಉಳಿದ ಹಲವು ಸೂತ್ರಗಳು ಸಮರ್ಥಿ-ಸುತ್ತವೆ.

## ೩೬೭. ದುರ್ದರ್ಶನಾಹಿ ರಾಜಾನಃ ಪ್ರಜಾಃ ನಾಶಯಂತಿ

ರಾಜನ ನಿತ್ಯಕಾರ್ಯದ ವೇಳಾಪತ್ರಿಕೆಯಲ್ಲಿ ಅವನು ಪ್ರತಿದಿನ ಬೆಳಗ್ಗೆ ಪ್ರಜೆಗಳನ್ನು ಕಾಣಬೇಕು. ಅವರ ಸಂಕಷ್ಟಗಳನ್ನು ಕೇಳಿಕೊಂಡು, ಅವನ್ನು ಪರಿಹರಿಸಲು ಯತ್ನಿಸಬೇಕು. ರಾಜದ್ವಾರದಲ್ಲಿ ಬಹಳಷ್ಟು ವೇಳೆ ರಾಜನಿ-ಗಾಗಿ ಪ್ರಜೆಗಳು ಕಾಯುತ್ತ ನಿಲ್ಲುವಂತೆ ಮಾಡಬಾರದು. ಪ್ರಜೆಗಳು ರಾಜನ ವಿಷಯಕ್ಕೆ ಪ್ರಸನ್ನರಾಗಿರದಿದ್ದರೆ, ಅದು ರಾಜನಿಗೆ ಭೂಷಣವಲ್ಲ ಎಂದು ಮುಂತಾಗಿ ಅರ್ಥಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ಪ್ರಜೆಗಳಿಗೆ ದುರ್ಲಭನಾದ ರಾಜನು ಅಪ್ರತ್ಯಕ್ಷವಾಗಿ ಅವರ ನಾಶಕ್ಕೆ ಕಾರಣನಾಗು-ತ್ತಾನೆ ಎಂದು ಈ ಸೂತ್ರವು ಹೇಳುತ್ತದೆ.

## ೩೬೮. ಸುದರ್ಶನಾಹಿ ರಾಜಾನಃ ಪ್ರಜಾಃ ರಂಜಯಂತಿ

ಪ್ರಜೆಗಳಿಗೆ ಲಭ್ಯನಾದ ರಾಜನು ಪ್ರಜಾರಂಜನವೇ ತನ್ನ ಆದ್ಯ ಕರ್ತವ್ಯವೆಂದು ತಿಳಿಯುವುದರಿಂದ ಆ ಪ್ರಜೆಗಳು ಅವನ ವಿಷಯಕ್ಕೆ ಪ್ರಸನ್ನ-

ರಾಗಿರುತ್ತಾರೆ. ಹೀಗಾಗಿ ಅವನ ಆಡಳಿತಕ್ಕೆ ಭಯ ಕಡಿಮೆ. ತತ್ಪುಗಳಿಗೆ ಅವನ ರಾಜ್ಯದಲ್ಲಿ ಉಪಜಾಪವನ್ನು ನಡೆಸಲಿಕ್ಕೆ ಆಸ್ಪದ ದೊರೆಯಲಾರದು. ಶ್ರೀರಾಮಚಂದ್ರನು ಪ್ರಜಾರಂಜನಕ್ಕಾಗಿ ತನ್ನ ಸರ್ವಸ್ವವೆಂದೇ ಬಗೆದ ಸೀತಾಮಾತೆಯನ್ನು ಕೂಡ ತೊರೆಯಲು ಸಿದ್ಧನಾದದ್ದು ಪ್ರಜಾಪಾಲನೆಗಿದ್ದ ಮಹತ್ವವನ್ನು ಸೂಚಿಸುತ್ತದೆ.

ಸ್ನೇಹಂ ದಯಾಂ ಚ ಸೌಖ್ಯಂ ಚ ಯದಿ ವಾ ಜಾನಕೀಮಪಿ ।
ಆರಾಧನಾಯ ಲೋಕಾನಾಂ ಮುಂಚತೋ ನಾಸ್ತಿ ಮೇ ವ್ಯಥಾ ॥
( ಉತ್ತರರಾಮಚರಿತೆ )

## ೩೬೯. ನ್ಯಾಯಯುಕ್ತಂ ರಾಜಾನಂ ಮಾತರಂ ಮನ್ಯಂತೇ ಪ್ರಜಾಃ

ನ್ಯಾಯದಿಂದ ರಾಜ್ಯವನ್ನಾಳುವ ರಾಜನನ್ನು ಪ್ರಜೆಗಳು ತಾಯಿಯೆಂದೇ ಬಗೆಯುತ್ತಾರೆ ಎಂಬುದರ ತಾತ್ಪರ್ಯ ತಿಳಿಯಬೇಕಾದರೆ. ಶಂಕರಭಗವತ್ಪಾದರ ' ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ ' ಎಂಬ ಮಾತನ್ನು ಸ್ಮರಿಸಬೇಕು. ಮಗನು ದುಷ್ಟನಿದ್ದರೂ ತಾಯಿಯು ದುಷ್ಟಳಾಗಲಾರಳೆಂಬಂತೆ, ಪ್ರಜೆಗಳು ದುಷ್ಟರಾಗಿದ್ದರೂ ರಾಜನು ಮಾತ್ರ ಅವರ ಹಿತಕ್ಕಾಗಿಯೇ ನ್ಯಾಯದಿಂದ ಆಡಳಿತವನ್ನು ನಡೆಯಿಸಬೇಕು ಎಂದು ಇಲ್ಲಿ ಸೂಚಿಸಲಾಗಿದೆ. ಇದರಿಂದ ಪ್ರಜೆಗಳಿಗೆ ರಾಜನ ನಿಷ್ಪಕ್ಷಪಾತತನದ ವಿಷಯದಲ್ಲಿ ಗೌರವವುಂಟಾಗಿ, ಅವನನ್ನು ತಾಯಿಯಂತೆ ಪ್ರೀತಿಸುತ್ತಾರೆ.

## ೩೭೦. ಚೋರರಾಜಪುರುಷೇಭ್ಯೋ ವಿತ್ತಂ ರಕ್ಷೇತ್

ಕಳ್ಳರು ಹಾಗು ಸರಕಾರಿ ಅಧಿಕಾರಿಗಳು ಇವರಿಂದ ಆಸ್ತಿಯನ್ನು ರಕ್ಷಿಸಿಕೊಳ್ಳಬೇಕು ಎಂದು ಹೇಳುವ ಈ ಸೂತ್ರವು ಸರಕಾರಿ ಅಧಿಕಾರಿಗಳ ಲಂಚ-

ಬಡಕತನ ಹಾಗು ಕಳ್ಳಕಾಕರ ಭಯ ಇವುಗಳ ವಿಷಯಕ್ಕೆ ರಾಜನು ವಿಶೇಷ ಕಾಳಜಿಯನ್ನು ವಹಿಸಬೇಕು ಎಂದು ಸೂಚಿಸುತ್ತದೆ. ಕಳವಾದ ವಸ್ತುವು ಶೋಧವಾಗದಿದ್ದರೆ ರಾಜನು ಅವನ್ನು ತನ್ನ ಬೊಕ್ಕಸದಿಂದ ತುಂಬಿಕೊಡಬೇಕು ಎಂದು ಈ ಶಾಸ್ತ್ರದಲ್ಲಿ ವಿಧಿಸಲಾಗಿದೆ. ಹಾಗೆಯೇ ನೀರಿನಲ್ಲಿಯ ಮೀನವು ನೀರು ಕುಡಿಯುವುದು ಯಾರಿಗೂ ಗೊತ್ತಾಗದಂತೆ, ಅಧಿಕಾರದಲ್ಲಿರುವವರಿಂದ ಸರಕಾರೀ ದ್ರವ್ಯದ ಅಪಹರಣ ಹಾಗು ಲಂಚಗುಳಿತನ ಇವು ಪತ್ತೆಯಾಗುವುದು ಕಠಿಣ. ಆದ್ದರಿಂದ ರಾಜನು ವಿಶೇಷ ಜಾಗ್ರತೆ ವಹಿಸಿ, ಪ್ರಜಾಕ್ಷೇಮವನ್ನು ನೋಡಿಕೊಳ್ಳಬೇಕೆಂದು ಇಲ್ಲಿ ವಿಧಿಸಲಾಗಿದೆ.

## ೩೭೧. ತಾದೃಶಃ ಸ ರಾಜಾ ಇಹ ಸುಖಂ ತತಃ ಸ್ವರ್ಗಮಾಪ್ನೋತಿ

ಹೀಗೆ ಪ್ರಜಾರಂಜನತತ್ಪರನಾದ ರಾಜನು ಇಹಲೋಕದಲ್ಲಿ ಸುಖವನ್ನು ಅನುಭವಿಸಿ ಮುಂದೆ ಸ್ವರ್ಗಕ್ಕೆ ಹೋಗುತ್ತಾನೆ ಎಂದು ಹೇಳಿದ್ದು, ರಾಜನು ಸಾಕ್ಷಾತ್ ದೇವನಲ್ಲ, ಆದರೆ ಪ್ರಜಾರಂಜನಕ್ಕೆ ಕಟಿಬದ್ಧನಾದ, ಎಲ್ಲ ರೀತಿಯಲ್ಲಿಯೂ ಸಂಪನ್ನನಾದ. ಅತಿಮಾನವನೆಂಬ ಸೂತ್ರಕಾರನ ಅಭಿಪ್ರಾಯವು ಸ್ಪಷ್ಟವಾಗುತ್ತದೆ.

## ೩೭೨. ರಾಜದ್ವಿಷ್ಟಂ ನ ವಕ್ತವ್ಯಂ

ರಾಜದ್ವೇಷವನ್ನು ಸೂಚಿಸುವಂತಹ ಮಾತುಗಳನ್ನು ಆಡಬಾರದು. ನಮ್ಮ ಕಲ್ಯಾಣಕ್ಕಾಗಿಯೇ ಅವನು ಇರುವುದರಿಂದ ಅವನಿಗೆ ವಿಧೇಯರಾಗಿ ನಡೆದುಕೊಳ್ಳುವುದು ನಮ್ಮ ಧರ್ಮ. ರಾಜದ್ವೇಷವೆಂದರೆ ದೇವತಾದ್ವೇಷವೇ ಸೈ. ಅರ್ಥಾತ್ ನಮ್ಮ ವಿನಾಶಕ್ಕೆ ದಾರಿಯನ್ನು ಮಾಡಿಕೊಂಡಂತೆ.

## ೩೭೩. ರಾಜಾಜ್ಞಾಂ ನಾತಿಲಂಘಯೇತ್

ರಾಜಾಜ್ಞೆಯನ್ನು ಎಂದೂ ಮೀರಕೂಡದು. ಏಕೆಂದರೆ ಅದರಿಂದ ರಾಜನೊಂದಿಗೆ ವಿದ್ರೋಹದಿಂದ ವ್ಯವಹರಿಸಿದಂತಾಗುತ್ತದೆ. ಇದು ರಾಜದ್ರೋಹ. ಅಂತೆಯೇ ಸರ್ವನಾಶಕ್ಕೆ ಕಾರಣ.

## ೩೭೪. ಯಥಾಜ್ಞಪ್ತಃ ತಥಾ ಕುರ್ಯಾತ್

ಯಾವ ರೀತಿಯಾಗಿ ರಾಜಾಜ್ಞೆ ಇರುತ್ತದೆಯೋ, ಅದನ್ನು ಚಾಚೂ ತಪ್ಪದೆ ಅನುಸರಿಸಬೇಕು. ಇಂಥ ಒಂದು ಪರಂಪರೆಯು ನಮ್ಮಲ್ಲಿ ಮೊದಲಿನಿಂದಲೇ ಬೇರೂರಿರುವುದರಿಂದ ನಾವು, 'Indians are the most law abiding community' ಎಂದು ಎನಿಸಿಕೊಳ್ಳುತ್ತೇವೆ. ಕಾನೂನುಗಳನ್ನು ಉಲ್ಲಂಘಿಸುವುದು ನಮ್ಮ ಸಂಸ್ಕೃತಿಯಲ್ಲ.

## ೩೭೫. ರಾಜ್ಞೋ ಭೇತವ್ಯಂ ಸಾರ್ವಕಾಲಮ್

ರಾಜನಿಗೆ ಯಾವಾಗಲೂ ಹೆದರಿಕೊಂಡೇ ಇರಬೇಕು ಎಂದು ಹೇಳುವ ಈ ಸೂತ್ರವು ರಾಜನ ಅನ್ಯಾಯಗಳಿಗೆ ಪ್ರತಿಭಟನೆ ಮಾಡಬಾರದು ಎಂಬ ಅರ್ಥದಲ್ಲಿ ಇದೆ ಎಂದು ಮಾತ್ರ ತಿಳಿಯುವ ಅವಶ್ಯಕತೆಯಿಲ್ಲ. ಆದರೆ ಒಳ್ಳೆಯ ರಾಜನ ವಿಷಯಕ್ಕೆ ಭಯ-ಭಕ್ತಿಯಿಂದ ಇರಬೇಕೆನ್ನುವುದೇ ತಾತ್ಪರ್ಯ. ಪ್ರಭಾವ, ಉತ್ಸಾಹ ಹಾಗು ಮಂತ್ರಶಕ್ತಿಸಂಪನ್ನನಾಗಿ ಪ್ರಜಾಹಿತಕ್ಕಾಗಿ ಜೀವನವನ್ನು ತೊರೆಯಲು ಸಿದ್ಧನಾದ ರಾಜನಿಗೆ ಪ್ರಜೆಗಳು ಅವಶ್ಯವಾಗಿ ಕೊಡಬೇಕಾದ ಮರ್ಯಾದೆ ಇದು ಎಂಬುದು ಚಾಣಕ್ಯನ ಅಭಿಪ್ರಾಯ.

## ೩೭೬. ಕುಟುಂಬಿನೋ ಸದಾ ಭೇತವ್ಯಮ್

ರಾಜನಂತೆಯೇ ರಾಜಕುಟುಂಬಕ್ಕೂ ಯಾವಾಗಲೂ ಅಂಜಿಕೊಂಡಿರ-ಬೇಕು. ಇದಕ್ಕೆ ವಿಪರೀತವಾಗಿ ವರ್ತಿಸಿದರೆ, ' ಇಲಿಗೆ ಹೊಡೆದರೆ ಗಣಪತಿಗೆ ಪೆಟ್ಟು ' ಎಂಬಂತಾಗುತ್ತದೆ. ರಾಜಕುಟುಂಬದವರ ಪ್ರಭಾವವು ರಾಜನ ಮೇಲಿರುವುದು ಸಹಜವಷ್ಟೇ ?

## ೩೭೭, ಗಂತವ್ಯಂ ಚ ಸದಾ ರಾಜಕುಲಮ್

ತಮ್ಮ ಸಂಕಟಗಳ ಪರಿಮಾರ್ಜನೆಗಾಗಿ ಆಗಾಗ ರಾಜದರ್ಶನಕ್ಕಾಗಿ ಹೋಗುತ್ತಿರಬೇಕು. ಇದು ಪುರುಷಪ್ರಯತ್ನಕ್ಕಿರುವ ಮಹತ್ವವನ್ನು ಸೂಚಿ-ಸುತ್ತದೆ. ರಾಜಕುಲ ಸಂಬಂಧವು ಅದೆಷ್ಟೋ ಅನುಕೂಲತೆಗಳನ್ನು ಒದಗಿಸಿ-ಕೊಡುವುದೆಂಬುದೇ ಇದರ ಇಂಗಿತ.

## ೩೭೮. ರಾಜಪುರುಷೈಃ ಸಂಬಂಧಂ ಕುರ್ಯಾತ್

ಸಾಧ್ಯವಿದ್ದಲ್ಲಿ ರಾಜಪುರುಷರು ಅರ್ಥಾತ್ ರಾಜ್ಯಾಡಳಿತಕ್ಕೆ ಸಂಬಂಧ-ಪಟ್ಟವರೊಂದಿಗೆ ಸ್ನೇಹದಿಂದಿರಬೇಕು ಎಂದು ಹೇಳಿದ್ದು ಲೌಕಿಕದೃಷ್ಟಿಯಲ್ಲಿ ಇದರಿಂದ ಯಾವಾಗಲೂ ನಮ್ಮ ಕಾರ್ಯಸಾಧನೆಯಾಗುತ್ತದೆಂಬುದನ್ನೇ ತಿಳಿಸುತ್ತದೆ.

## ೩೭೯. ರಿಕ್ತಹಸ್ತೋ ನ ರಾಜಾನಮಭಿಗಚ್ಛೇತ್ ಗುರುಂ ಚ ದೈವತಂ ಚ

ರಾಜ, ಗುರು ಹಾಗು ದೇವತಾ ದರ್ಶನಕ್ಕೆ ಬರಿಗೈಯಿಂದ ಹೋಗ-ಬಾರದು. ತಮ್ಮ ಯೋಗ್ಯತೆ ಹಾಗು ತಾತ್ಕಾಲಿಕ ಅನುಕೂಲತೆಗೆ ತಕ್ಕಂತೆ

ಏನಾದರೂ ಕಾಣಿಕೆ, ಉಪಹಾರ, ಹೂವು, ಹಣ್ಣು ಇತ್ಯಾದಿಗಳನ್ನು ತೆಗೆದು-ಕೊಂಡು ಹೋಗಬೇಕು. ಈ ವಿಷಯದಲ್ಲಿ ಪ್ರಸಿದ್ಧ ಸುಭಾಷಿತವು ಇದೆ.

'ರಿಕ್ತ ಪಾಣಿಃ ನ ಪಶ್ಯೇತ ರಾಜಾನಂ, ದೇವತಾಂ, ಗುರುಮ್ ।' ಹಾಗೆಯೇ ಹೆಂಡಿರು, ಮಕ್ಕಳು, ಮಿತ್ರ, ಬಂಧು-ಬಾಂಧವರೆಡೆಗೂ ಬರಿ-ಗೈಯಿಂದ ಹೋಗಬಾರದೆಂಬ ರೂಢಿಯು ಇದೆ ಇದು ಕೇವಲ ಒಂದು ಸದ್ಭಾವನೆಯನ್ನು ಅಥವಾ ಆತ್ಮೀಯತೆಯನ್ನು ಪ್ರಕಟಿಸುವ ರೀತಿಯೇ ಹೊರತು ಇದರಲ್ಲಿ ಆಮಿಷ ತೋರಿಸುವ ಪ್ರವೃತ್ತಿ ಮಾತ್ರ ಇಲ್ಲವೆಂಬು-ದನ್ನು ಮರೆಯಲಾಗದು.

## ೩೮೦. ನ ಚಕ್ಷುಷಾಪಿ ರಾಜಾನಂ ನಿರೀಕ್ಷೇತ

ರಾಜನಿಗೆ ಗೌರವ ಪ್ರಕಟಿಸುವ ದೃಷ್ಟಿಯಿಂದ, ಅವನೆಡೆಗೆ ನೇರವಾಗಿ ಕೂಡ ನೋಡಬಾರದೆಂದು ಈ ಸೂತ್ರವು ಹೇಳುತ್ತದೆ. ವಕ್ರದೃಷ್ಟಿಯಿಂದ ಅಥವಾ ದುರುಗುಟ್ಟಿ ನೋಡುವುದಂತೂ ದೂರವೇ ಉಳಿಯಿತು. ಚಾಣಕ್ಯನ ಕಾಲವು ರಾಜಪ್ರಭುತ್ವದ ಕಾಲ. ಆಗ ಪ್ರಜಾಪ್ರಭುತ್ವವಿರಲಿಲ್ಲ. ಪ್ರಜಾ-ರಕ್ಷಣೆ ಮಾತ್ರ ರಾಜನ ಆದ್ಯಕರ್ತವ್ಯವೆಂಬುದು ಇತ್ತು. ಆದ್ದರಿಂದ ಎಲ್ಲರ ಕ್ಷೇಮಕ್ಕೂ ಕಾರಣನಾದ ಈ ರಾಜನಿಗೆ ವಿಶೇಷ ಗೌರವ ಸಲ್ಲಿಸಬೇಕಾದುದು ಧರ್ಮ.

## ೩೮೧. ಸುದೂರಮಪಿ ದಹತಿ ರಾಜವಹ್ನಿಃ

ರಾಜನ ಕೋಪವು ಬೆಂಕಿಗಿಂತ ಘಾತುಕವಾದುದು. ಬೆಂಕಿಯು ಶರೀ-ರದ ಒಂದು ಭಾಗವನ್ನು ಅಥವಾ ಅತಿ ಪ್ರಖರವಾಗಿದ್ದಾಗ, ಸಂಪೂರ್ಣ ಶರೀರವನ್ನು ಸುಡಬಹುದು. ರಾಜನ ಕ್ರೋಧರೂಪಿಯಾದ ಅಗ್ನಿಯು

ಮಾತ್ರ ಪೆಂಡಿರು–ಮಕ್ಕಳಿಂದೊಡಗೂಡಿದ ಪರಿವಾರವನ್ನೇ ನಾಶವಮಾಡಬಹುದು. ಇಂಥ ಸರ್ವನಾಶದಿಂದ ದೂರವಿರಬೇಕೆನ್ನುವವರು ರಾಜನನ್ನು ತಿರಸ್ಕಾರದಿಂದ ಕಾಣದೆ, ಅವನ ವಿಷಯಕ್ಕೆ ಭಯಭಕ್ತಿಯಿಂದ ಇರಬೇಕೆಂಬುದೇ ತಾತ್ಪರ್ಯ.

## ೩೮೨, ರಾಜದಾಸೀ ನ ಸೇವಿತವ್ಯಾ

ರಾಜದಾಸಿಯೊಂದಿಗೆ ಯಾರೂ ಅನೈತಿಕ ಸಂಬಂಧವನ್ನಿಟ್ಟುಕೊಳ್ಳಬಾರದು. ಅದು ಪ್ರತ್ಯಕ್ಷವಾಗಿ ರಾಜನಿಗೆ ಅಪಮಾನ ಮಾಡಿದಂತೆಯೇ. ಏಕೆಂದರೆ ಅವಳು ಅವನ ಸೊತ್ತು. ರಾಜನ ವಸ್ತುವಿಗೆ ಕೈಹಚ್ಚುವುದು, ಅದನ್ನು ಹರಣಮಾಡಲಿಕ್ಕೆ ಪ್ರಯತ್ನಿಸಿದಂತೆಯೇ. ಆದ್ದರಿಂದ ಇಂಥವರು ಸಾಕ್ಷಾತ್ ಅವನ ಕೋಪಕ್ಕೆ ಪಾತ್ರರಾಗುವುದರಲ್ಲಿ ಸಂದೇಹವಿಲ್ಲ. ಈ ವಿಷಯದಲ್ಲಿ ಅತಿ ಎಚ್ಚರದಿಂದ ಇರಬೇಕಾದುದು ಜಾಣತನ.

## ೩೮೩, ಅದ್ರವ್ಯ ಪ್ರಯತ್ನೋ ವಾಲುಕಾಕ್ವಥನಾದನನ್ಯಃ

ಯಾವುದೇ ಕಾರ್ಯಕ್ಕೆ ಮುಖ್ಯವಾಗಿ ಹಣ ಬೇಕು ಎಂದು ಲೌಕಿಕ ದೃಷ್ಟಿಯಿಂದ ಸೂತ್ರಕಾರನು ಇಲ್ಲಿ ಪುನಃ ಸೂಚಿಸಿದ್ದಾನೆ. ಹಣವಿಲ್ಲದೆ ಕಾರ್ಯಾರಂಭ ಮಾಡುವುದು ಕಠಿಣ. ಹಾಗೆಯೇ ಹೆರವರ ಸಹಾಯ ದೊರೆಯುವುದು ಸುಲಭಸಾಧ್ಯವಲ್ಲ. ಮೋದುಕೈಯಿಂದ ಮೊಳ ಹಾಕುವವನಿಗೆ ಯಾವ ಕಾರ್ಯವನ್ನು ಕೊನೆಗೊಳಿಸುವುದೂ ಅಸಾಧ್ಯ. ಇದಕ್ಕೆ ದೃಷ್ಟಾಂತವೆಂದು—

## ೩೮೪. ನ ಪುಷ್ಪಾರ್ಥೀ ಸಿಂಚತಿ ಶುಷ್ಕ ತರುಮ್

ಹೂವು ಬೇಕಾದವನು ಒಣಗಿದ ವೃಕ್ಷ ಅಥವಾ ಬಳ್ಳಿಗೆ ನೀರೆರೆ-

ಯುವುದಿಲ್ಲ. ಅದು ನಿಷ್ಫಲ ಪ್ರಯತ್ನ. ಹಾಗೆಯೇ ಹಣವಿಲ್ಲದವನ ಸಾಹಸವು ಯಾವುದನ್ನೂ ಕೊನೆಗೊಳಿಸಲಾರದು. ಅಂದಮೇಲೆ ಅಪೇಕ್ಷಿತ ಫಲವು ಹೇಗೆ ದೊರಕೀತು ?

## ೩೮೫. ನ ಮಹಾಜನ ಹಾಸಃ ಕರ್ತವ್ಯಃ

ದೊಡ್ಡವರ ಅಪಹಾಸ್ಯವನ್ನು ಮಾಡಬಾರದು. ಏಕೆಂದರೆ ಅವರು ಸಮಾಜದಲ್ಲಿ ಗೌರವಕ್ಕೆ ಪಾತ್ರರಾಗಿರುವುದರಿಂದ, ಅವರ ಉಪಹಾಸವು ನಮ್ಮ ಕ್ಷುದ್ರತನವನ್ನೇ ತೋರಿಸುತ್ತದೆ.

## ೩೮೬. ಕಾರ್ಯಸಂಪದಂ ನಿಮಿತ್ತಾನಿ ಸೂಚಯಂತಿ

ಕೈಕೊಂಡ ಕಾರ್ಯಗಳ ಸಿದ್ಧಿಯನ್ನು (ಶಕುನಗಳು) ನಿಮಿತ್ತಗಳು ಸೂಚಿಸುತ್ತವೆ ಎಂದು ಹೇಳುವ ಈ ಸೂತ್ರವು ಶಕುನಶಾಸ್ತ್ರದಲ್ಲಿ ಚಾಣಕ್ಯನಿಗೆ ಇದ್ದ ನಂಬಿಗೆಯನ್ನು ಸೂಚಿಸುತ್ತದೆ. Coming events cast their shadows before. ಎನ್ನುವ ವಾಕ್ಯದ ತಾತ್ಪರ್ಯವು ಇದೇ. ಬೆಕ್ಕು ಅಡ್ಡಹೋಗುವುದು, ಕಾಗೆ ಬಲಗಡೆಗೆ ಹಾರುವುದು, ಬಲಗಣ್ಣು, ಬಲಭುಜ ಹಾರುವುದು—ಇತ್ಯಾದಿ ಶಕುನಗಳಲ್ಲಿಯ ನಂಬಿಗೆಯನ್ನು ಇಡುವುದು ಮೂಢತನವೆಂದು ಇಂದಿನ ವಿಜ್ಞಾನಯುಗದಲ್ಲಿ ಮೂದಲಿಸಲಾಗುತ್ತದೆ. ಆದರೆ ಚಾಣಕ್ಯನ ಕಾಲದಲ್ಲಿ ಅವುಗಳಲ್ಲಿ ಅಪಾರ ವಿಶ್ವಾಸವಿತ್ತು. ಇತಿಹಾಸ, ಪುರಾಣಗಳಲ್ಲಿ ಕೂಡ ಶಕುನಾದಿಗಳ ಉಲ್ಲೇಖವು ಪದೇ-ಪದೇ ಬರುತ್ತದೆ. ಮಹಾಭಾರತ ಯುದ್ಧಕ್ಕೆ ಮುಂಚೆ ದುರ್ಯೋಧನನ ರಥವು ಕುರುಕ್ಷೇತ್ರದತ್ತ ತೆರಳಿದಾಗ, ಅಪಶಕುನಗಳಾದವು ಎಂದು ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು.

## ೩೮೭. ನಕ್ಷತ್ರಾದಪಿ ನಿಮಿತ್ತಾನಿ ವಿಶೇಷಯಂತಿ

ಜ್ಯೋತಿಷ್ಯಶಾಸ್ತ್ರಕ್ಕಿಂತ ಶಕುನಶಾಸ್ತ್ರವು ಮಿಗಿಲಾದದೆಂದು ಇಲ್ಲಿ ಹೇಳಲಾಗಿದೆ. ಈಗಿನ ಕಾಲದಲ್ಲಿ ಶುಭಾಶುಭ ನಕ್ಷತ್ರಗಳನ್ನು ಸೂಚಿಸುವ ಜ್ಯೋತಿಷ್ಯ ಶಾಸ್ತ್ರವು ಸುಳ್ಳು ಎನ್ನುವ ಒಂದು ವರ್ಗವಿದೆ. ದೈವೀ ಆಪತ್ತುಗಳನ್ನು ಶಮನವಮಾಡುವ ವಿಷಯ ಬಂದಾಗ ಈ ಹಿಂದೆ ಪ್ರಸ್ತುತ ವಿಷಯವು ಚರ್ಚಿಸಲ್ಪಟ್ಟಿದ್ದರಿಂದ, ಇಲ್ಲಿ ಹೆಚ್ಚಿಗೆ ವಿವೇಚಿಸುವ ಆವಶ್ಯಕತೆಯಿಲ್ಲ. ಚಾಣಕ್ಯನು ಈ ವಿಷಯವನ್ನು ಬರೆದದ್ದು ಸ್ವಾನುಭವದಿಂದ ಎಂಬುದನ್ನು ಮಾತ್ರ ಮರೆಯಲಾಗದು.

## ೩೮೮. ನ ತ್ವರಿತಸ್ಯ ನಕ್ಷತ್ರ ಪರೀಕ್ಷಾ

ಕಾರ್ಯ ಬೇಗನೆ ಸಿದ್ಧಿಸಬೇಕಾದಾಗ ಅಥವಾ ಸಿದ್ಧಿಸುವ ಲಕ್ಷಣಗಳು ತೋರುವಾಗ, ಅತಿಯಾಗಿ ನಕ್ಷತ್ರಗಳನ್ನು (ಶುಭಮುಹೂರ್ತಗಳು ಇತ್ಯಾದಿ) ನೋಡುತ್ತ ಕಾಲಹರಣ ಮಾಡಬಾರದು ಎಂದು ಈ ಸೂತ್ರವು ಸೂಚಿಸುತ್ತದೆ. ಅರ್ಥಶಾಸ್ತ್ರದಲ್ಲಿ ಈ ವಿಷಯವು—

ನಕ್ಷತ್ರಮತಿ ಪೃಚ್ಛಂತಂ ಬಾಲಮರ್ಥೋಽತಿವರ್ತತೇ ।
ಅರ್ಥೋಽಹ್ಯರ್ಥಸ್ಯ ನಕ್ಷತ್ರಂ ಕಿಂ ಕರಿಷ್ಯಂತಿ ತಾರಕಾಃ ॥

ಅತಿಯಾಗಿ ನಕ್ಷತ್ರಶಾಸ್ತ್ರದ ಮೇಲೆ ನಂಬಿಗೆಯಿಟ್ಟವನಿಂದ ಸಂಪತ್ತು ದೂರಸರಿಯುತ್ತದೆ. ಅನುಕೂಲ ಪ್ರಸಂಗಗಳು ನಿರ್ಮಾಣವಾಗುವುದೇ ಒಳ್ಳೆಯ ಕಾಲವೆಂದು ಸೂಚಿಸುವಾಗ, ನಕ್ಷತ್ರಗಳನ್ನು ವಿಚಾರಿಸುವುದು ಜಾಣತನವಲ್ಲ ಎಂದು ಸ್ಪಷ್ಟಪಡಿಸಲಾಗಿದೆ. ಕೌಟಲ್ಯನು ಜ್ಯೋತಿಷ್ಯಶಾಸ್ತ್ರದಲ್ಲಿ ನಂಬಿಗೆಯಿಲ್ಲದವನೆಂದು ಇದರ ಅರ್ಥವಲ್ಲ. ಹಾಗೆಯೇ ಎಂದಿಗೂ ಈ ಶಾಸ್ತ್ರದ ಸಹಾಯವನ್ನು ತೆಗೆದುಕೊಂಡಿಲ್ಲವೆಂದು ತಿಳಿಯಲು ಅವಕಾಶವಿಲ್ಲ. ಅತಿಯಾಗಿ ಇಲ್ಲವೆ ಅನವಶ್ಯಕವಾಗಿ ದೈವದ ಮೇಲೆ ಕೈಯೂರಿ ಕೂಡುವುದು ಪೌರುಷದ ಲಕ್ಷಣವಲ್ಲವೆನ್ನುವುದೇ ತಾತ್ಪರ್ಯ.

## ೩೮೯. ಪರಿಚಯೇ ದೋಷಾ ನ ಛಾದ್ಯಂತೇ

ಯಾರೊಂದಿಗೇ ಆಗಲಿ ವಿಶೇಷ ಪರಿಚಯವಾದುವರ ಪರಿಣಾಮ-ವೆಂದರೆ, ನಮ್ಮ ದೋಷಗಳು ಅವರಿಗೆ ಗೊತ್ತಾಗುವುದು. ಅರ್ಥಾತ್ ಅವನ್ನು ಬಚ್ಚಿಟ್ಟುಕೊಳ್ಳುವುದು ಅಸಾಧ್ಯ. ಹೀಗಾಗಿ ಅವರೊಂದಿಗೆ ನಾವು ಹೆಚ್ಚು ದೊಡ್ಡಸ್ತಿಕೆಯಿಂದ ವ್ಯವಹರಿಸುವುದೂ ಹಾಸ್ಯಾಸ್ಪದ. ಇದಕ್ಕೆ ಪ್ರಭಾವಿಯಾದ ಉದಾಹರಣೆಯೆಂದರೆ. ಗಂಡ–ಹೆಂಡಿರಲ್ಲಿ ಅತಿ ಹೆಚ್ಚು ಬಳಕೆ ಅಥವಾ ಪರಿಚಯವಿರುವುದರಿಂದ, ಸಮಾಜದಲ್ಲಿ ಪತಿಗೆ ಎಷ್ಟೇ ದೊಡ್ಡ ಸ್ಥಾನವಿದ್ದರೂ, ಸತಿಯೊಂದಿಗೆ ವ್ಯವಹರಿಸುವಾಗ ಅದೇನೂ ನಡೆಯುವುದಿಲ್ಲ.

ಇದೇ ಕಾರಣದಿಂದಾಗಿ ನ್ಯಾಯಾಧೀಶರು. ಮೇಲುದರ್ಜೆಯ ಆಡಳಿತಾಧಿಕಾರಿಗಳು ( I. A. S. Officers ) ಸಮಾಜದಲ್ಲಿ ವಿಶೇಷವಾಗಿ ಬೆರೆತುಕೊಳ್ಳುವುದಿಲ್ಲ.

## ೩೯೦. ಸ್ವಭಾವೋ ದುರತಿಕ್ರಮಃ

ಮನುಷ್ಯಸ್ವಭಾವವು ಸಾಮಾನ್ಯವಾಗಿ ಎಂದೂ ಬದಲಾಗಲಾರದು. ಇದನ್ನೇ ಮೂರು ವರ್ಷದ ಬುದ್ಧಿ ನೂರು ವರ್ಷದ ವರೆಗೆ ಎಂದು ಹೇಳುವು-ದುಂಟು. ಅಪವಾದಕ್ಕೆಂದು ಸತ್ಪುರುಷರ ಸಹವಾಸ ಅಥವಾ ಅನುಗ್ರಹ-ದಿಂದ ದೈವವು ಕೂಡ ಬದಲಾಗುತ್ತದೆಂದು ಹೇಳುವುದುಂಟು. ಅದಕ್ಕೆ ವಾಲ್ಮೀಕಿಋಷಿಯ ದೃಷ್ಟಾಂತವನ್ನು ಕೊಡುವುದೂ ಉಂಟು. ಆದರೆ ಇವೆಲ್ಲ ಅಪವಾದಗಳು ಮಾತ್ರ. ಮನುಷ್ಯಸ್ವಭಾವವು ಬದಲಾಗಲಾರದೆನ್ನುವುದು ಶಾಶ್ವತ ಸತ್ಯ.

## ೩೯೧. ಸ್ವಯಂ ಅಶುದ್ಧಃ ಪರಾನ್ ಆಶಂಕತೇ

ತಾನು ಎಷ್ಟೇ ಅಪವಿತ್ರನಿದ್ದರೂ ಎಂದರೆ ದೋಷಿ, ತಪ್ಪುಗಾರ,

ಹೊಲಸು ಸ್ವಭಾವದವನಾಗಿದ್ದರೂ. ಇನ್ನೊಬ್ಬರ ವಿಷಯಕ್ಕೆ ಶಂಕಿಸುವುದು ಅವನ ಸ್ವಭಾವ. ಅರ್ಥಾತ್ ಅವನಿಗೆ ತನ್ನ ತಪ್ಪಿನ ಅರಿವು ಇರುವುದಿಲ್ಲ. ಹೆರವರ ಚಿಕ್ಕ–ಪುಟ್ಟ ದೋಷಗಳನ್ನು ಕೂಡ ಎತ್ತಿತೋರಿಸುವ 'ಛಿದ್ರಾನ್ವೇಷಣ ಬುದ್ಧಿಯು' ಮಾತ್ರ ಎದ್ದುಕಾಣುತ್ತದೆ. ಈಗಾಗಲೇ ಈ ವಿಷಯವು ಬೇರೆ ಸಂದರ್ಭದಲ್ಲಿ ಚರ್ಚಿಸಲ್ಪಟ್ಟಿದ್ದರಿಂದ ಇಲ್ಲಿ ಹೆಚ್ಚಿನ ವಿವರಗಳ ಆವಶ್ಯಕತೆಯಿಲ್ಲ.

## ೩೯೨. ಆತ್ಮಛಿದ್ರಂ ನ ಪಶ್ಯತಿ, ಪರಛಿದ್ರಮೇವ ಪಶ್ಯತಿ ಬಾಲಿಶಃ

ಇಲ್ಲಿಯೂ ಹೆಚ್ಚು–ಕಡಿಮೆ ಮೇಲಿನ ಸೂತ್ರದಲ್ಲಿಯ ಅಭಿಪ್ರಾಯವೇ ವ್ಯಕ್ತವಾಗಿದೆ. ಮೂರ್ಖನು ತನ್ನ ದೋಷಗಳನ್ನು ಎಣಿಸುವುದಿಲ್ಲ, ಹೆರವರ ತಪ್ಪುಗಳನ್ನು ತತ್ಕಾಲಕ್ಕೆ ಎತ್ತಿತೋರಿಸುತ್ತಾನೆ ಎಂದು ಹೇಳಲಾಗಿದೆ.

ವಾದ ಮಾಡುವಾಗ. ಸಂಸತ್ತಿನಲ್ಲಿಯ ಚರ್ಚೆಯ ಕಾಲದಲ್ಲಿ, ತಮ್ಮ ತಪ್ಪುಗಳನ್ನು ಸಮರ್ಥಿಸುವಾಗ ಈ ಸ್ವಭಾವವು ವಿಶೇಷವಾಗಿ ಜನರಲ್ಲಿ ಕಂಡುಬರುತ್ತದೆ.

## ೩೯೩. ಕಥಾನುರೂಪಂ ಪ್ರತಿವಚನಮ್

ಪ್ರಶ್ನೆಗೆ ತಕ್ಕಂತೆ ಉತ್ತರವನ್ನು ಕೊಡಬೇಕು. ಪ್ರಶ್ನೆಯು ವಿನಯದಿಂದ ಕೇಳಲ್ಪಟ್ಟಿದ್ದರೆ, ಆತ್ಮೀಯತೆಯಿಂದ ಉತ್ತರ ಕೊಡಬೇಕು. ತಿಳಿದುಕೊಳ್ಳಬೇಕೆಂಬ ಭಾವನೆಯಿಂದ ಇದ್ದರೆ, ಚೆನ್ನಾಗಿ ತಿಳಿಸಿಹೇಳಬೇಕು. ಸೊಕ್ಕಿನಿಂದ ಅಥವಾ ಪರೀಕ್ಷೆ ಮಾಡಬೇಕೆಂಬ ಭಾವನೆಯಿಂದ ಕೂಡಿದ್ದರೆ, ಕೇಳಿದವರ ಬಾಯಿಮುಚ್ಚುವಂತ ಸ್ವಾಭಿಮಾನ ಹಾಗು ಆತ್ಮವಿಶ್ವಾಸದಿಂದ

ಉತ್ತರ ಕೊಡಬೇಕು. ಒಟ್ಟಿನಮೇಲೆ ಪ್ರಶ್ನೆಗೆ ಉತ್ತರವು ಎಲ್ಲ ದೃಷ್ಟಿ-ಯಿಂದಲೂ ಸಮರ್ಪಕವಾದ ಪ್ರತ್ಯುತ್ತರವಾಗಿರಬೇಕು.

## ೩೯೪. ವಿಭವಾನುರೂಪಮಾಭರಣಮ್

ತಮ್ಮ ಸಾಂಪತ್ತಿಕ ಪರಿಸ್ಥಿತಿಗೆ ತಕ್ಕಂತೆ ಆಭರಣಗಳಿರಬೇಕು. ಎಷ್ಟೇ ಸಿರಿವಂತಿಕೆ ಇದ್ದರೂ ಜಿಪುಣ ಸ್ವಭಾವದಿಂದ ದರಿದ್ರನಂತಿರಬಾರದು. ಭೋಗವೇ ಜೀವನದ ಗುರಿಯಾಗಿರದಿದ್ದರೂ, ಅವಶ್ಯ ಹಾಗು ಸಾಧ್ಯವಿದ್ದ ಧರ್ಮಬಾಹಿರವಲ್ಲದ ಭೋಗಗಳನ್ನು ಭೋಗಿಸದಿರುವುದು ಜೀವನಕ್ಕೆ ಅನ್ಯಾಯ ಬಗೆದಂತೆಯೇ. ಜಿಪುಣರು ತಮ್ಮ ಆಸ್ತಿಯನ್ನು ಇನ್ನೊಬ್ಬರಿ-ಗಾಗಿಯೇ ಗಳಿಸಿಟ್ಟಂತಾಗುತ್ತದೆ. ಇವರಷ್ಟು ದುರ್ದೈವಿಗಳು ಇನ್ನಾರೂ ದೊರೆಯಲಾರರು. ಅವಕ್ಕೆಂದೇ 'ಕೃಪಣೇನ ಸಮೋ ದಾತಾ ನ ಭೂತೋ ನ ಭವಿಷ್ಯತಿ' ಎಂದು ವ್ಯಂಗ್ಯವಾಗಿ ಹೇಳಲಾಗಿದೆ.

## ೩೯೫. ಕುಲಾನುರೂಪಂ ವೃತ್ತಮ್

ತಮ್ಮ ಕುಲಮರ್ಯಾದೆಗೆ ತಕ್ಕಂತೆ ವರ್ತಿಸಬೇಕು. ದೊಡ್ಡ ಅಥವಾ ಉಚ್ಚ ಕುಲದಲ್ಲಿ ಜನಿಸಿದವರು ಕ್ಷುಲ್ಲಕರಂತೆ ಅಥವಾ ಹೀನ ರೀತಿಯಲ್ಲಿ ವರ್ತಿಸಬಾರದು. ಅದು ಕುಲದ ಮರ್ಯಾದೆಯನ್ನು ಕಳೆಯುತ್ತದೆ. ಆಡುವ ಮಾತುಗಳು, ನಡೆದುಕೊಳ್ಳುವ ರೀತಿ, ಪಾಲಿಸಬೇಕಾದ ಸ್ವಚ್ಛತೆ, ಮನಸ್ಸಿನ ದೊಡ್ಡಸ್ತಿಕೆ, ಪರೋಪಕಾರ ಬುದ್ಧಿ, ಅನ್ನದಾನಾದಿ ಸದ್ಗುಣಗಳು—ಇವೆಲ್ಲ ಸಾಮಾನ್ಯವಾಗಿ ಕುಲಕ್ಕೆ ತಕ್ಕಂತೆ ಇರುತ್ತವೆ. ಅದಕ್ಕೆ ತಪ್ಪಿದಲ್ಲಿ ಕುಲದ ಮರ್ಯಾದೆಗೆ ಭಂಗ ಬರುತ್ತದೆ.

## ೩೯೬. ರೂಪಾನುವರ್ತೀ ಗುಣಃ

ಇಂಗ್ಲೀಷ್‌ನಲ್ಲಿ ' Face is the index of life ' ಎಂದು ಹೇಳುವುದನ್ನೇ ಇಲ್ಲಿ ಮನುಷ್ಯನ ರೂಪ ಅಥವಾ ಆಕಾರವು ಅವನ ಸ್ವಭಾವವನ್ನು ಸೂಚಿಸುತ್ತದೆ ಎಂದು ಹೇಳಲಾಗಿದೆ. ಮುಖ ನೋಡಿ ಸ್ವಭಾವವನ್ನು ಗುರುತಿಸುವ ಕಲೆಯು ಹಲವರಿಗೆ ಅವಗತವಾಗಿರುತ್ತದೆ. Face reading ಎನ್ನುವುದು ಒಂದು ಶಾಸ್ತ್ರವೇ ಎಂದು ಪರಿಗಣಿಸಲ್ಪಡುತ್ತದೆ. ಆದರೆ ಮುಖವನ್ನು ನೋಡಿ ಮನುಷ್ಯರ ಸ್ವಭಾವವನ್ನು ಸರಿಯಾಗಿ ಹೇಳುವುದು ಹಲವರಿಗಾದರೂ ಸಾಧ್ಯವಿದ್ದರೂ, ಕೆಲವರು ಗೋಮುಖದಲ್ಲಿಯ ವ್ಯಾಘ್ರ-ವಾಗಿರುತ್ತಾರೆ. ಅವರನ್ನು ಗುರುತಿಸುವುದು ಕಷ್ಟ.

## ೩೯೭. ಕಾರ್ಯಾನುರೂಪಃ ಪ್ರಯತ್ನಃ

ಕಾರ್ಯದ ಮಹತ್ವವನ್ನರಿತು ಪ್ರಯತ್ನ ಮಾಡಬೇಕು. ಮಹ-ತ್ಕಾರ್ಯವನ್ನು ಸಾಧಿಸಬೇಕಾದಾಗ, ಅದಕ್ಕಾಗಿ ಭಗೀರಥ ಪ್ರಯತ್ನವು ಅವಶ್ಯ. ಚಿಲ್ಲರೆ ಕೆಲಸಗಳಿಗಾಗಿ ಹೆಚ್ಚು ಪರಿಶ್ರಮ ಮಾಡುವ ಆವಶ್ಯಕತೆ ಇರುವುದಿಲ್ಲ. ಸಣ್ಣ ಕೆಲಸಕ್ಕಾಗಿ ಸಿಕ್ಕ ಸಿಕ್ಕವರಿಗೆ ಮೊರೆಹೋಗುವುದು ಒಮ್ಮೊಮ್ಮೆ ನಮ್ಮ ಯೋಗ್ಯತೆಗೆ ಕುಂದುತರುತ್ತದೆ. ಆದ್ದರಿಂದ ಕಾರ್ಯಕ್ಕೆ ತಕ್ಕಂತೆ ಪ್ರಯತ್ನವಿರಬೇಕು ಎಂದು ಇಲ್ಲಿ ಹೇಳಲ್ಪಟ್ಟಿದೆ.

## ೩೯೮. ಪಾತ್ರಾನುರೂಪಂ ದಾನಮ್

ದಾನ ಸ್ವೀಕರಿಸುವವನ ಪಾತ್ರತೆಯನ್ನರಿತು ದಾನಮಾಡಬೇಕಾದದ್ದು ಧರ್ಮ. ಬಡವನಿಗೆ ಆನೆಯನ್ನು ದಾನ ಕೊಟ್ಟರೆ ಅವನು ಅದನ್ನು ಸಾಕುವುದೆಂತು ?

ಹಾಗೆಯೇ ಮಹಾತ್ಮರಿಗೆ ಚಿಲ್ಲರೆ ದಾನವನ್ನು ಕೊಡುವುದು ಅವಮರ್ಯಾದೆ ಮಾಡಿದಂತೆ. ಇದೂ ಅಲ್ಲದೆ, ದಾನವನ್ನು ವಿಶಿಷ್ಟ ಫಲಪ್ರಾಪ್ತಿಗಾಗಿ ಕೊಡುವುದು ವಾಡಿಕೆ. ಆದ್ದರಿಂದ ಯೋಗ್ಯತೆಯನ್ನರಿಯದೆ ಕೊಟ್ಟ ದಾನವು ನಿಷ್ಫಲವಾಗುತ್ತದೆ. ಜ್ಞಾನ ಹಾಗು ಸದ್ಗುಣಗಳ ನೆಲೆಯಾಗಿರುವ ಆಚಾರಸಂಪನ್ನರಿಗೆ, ಕುಟುಂಬವತ್ಸಲರಿಗೆ ಕೊಟ್ಟ ದಾನವು ಅಪೇಕ್ಷಿತ ಫಲವನ್ನು ತರಬಲ್ಲದು. ಇವೆಲ್ಲವನ್ನರಿತು ದಾನಮಾಡಬೇಕಾದ ಆವಶ್ಯಕತೆಯನ್ನು ಇಲ್ಲಿ ಒತ್ತಿಹೇಳಲಾಗಿದೆ. ಈ ಸೂತ್ರಗಳ ಸರಪಳಿಯು ಲೋಕವ್ಯವಹಾರವನ್ನು ಬಹು ಮಾರ್ಮಿಕವಾಗಿ ಹಾಗು ಸುಲಭ ರೀತಿಯಲ್ಲಿ ಬಿಂಬಿಸಿ ಹೇಳುತ್ತದೆ.

## ೩೯೯. ವಯೋನುರೂಪೋ ವೇಷಃ

ವಯಸ್ಸಿಗೆ ತಕ್ಕಂತೆ ವೇಷವಿರಬೇಕು. ತರುಣರಂತೆ ಮುಪ್ಪಿನವರು ವೇಷ–ಭೂಷಣಗಳನ್ನು ಧರಿಸಿದರೆ ಅಪಹಾಸ್ಯಕ್ಕೆ ಈಡಾಗುತ್ತಾರೆ. ತಾರುಣ್ಯದಲ್ಲಿ ಹುಮ್ಮಸವಿದ್ದರೆ, ಮುಪ್ಪಿನವರಲ್ಲಿ ನಿರುತ್ಸಾಹವು ಕಂಡುಬರುತ್ತದೆ. ಆದ್ದರಿಂದ ತಮ್ಮ ವಯಸ್ಸಿಗೆ ತಕ್ಕಂತೆ, ಪ್ರಭಾವ ಬೀರುವಂತಹ ವೇಷವನ್ನು ಧರಿಸುವುದೇ ಭೂಷಣವು.

## ೪೦೦. ಸ್ವಾಮ್ಯನುಕೂಲೋ ಭೃತ್ಯಃ

ಯಜಮಾನನಿಗೆ ಅನುಕೂಲವರ್ತಿಯಾಗಿ ವ್ಯವಹರಿಸುವವನೇ ಸೇವಕ. ' ತೇರಾ ಊಪರ ಮೇರಾ ' ಎಂದು ಸ್ವಾಮಿಗಿಂತ ಹೆಚ್ಚಾಗಿ ತನ್ನ ಆಢ್ಯತೆಯನ್ನೇ ತೋರಿಸುವುದು ಸೇವಕನ ಲಕ್ಷಣವಲ್ಲ. ವೇಷ–ಭೂಷಣ ಹಾಗು ನಡೆ–ನುಡಿಗಳಲ್ಲಿ ವಿನಯಶೀಲತೆ, ಸ್ವಾಮಿಯ ಬಗೆಗೆ ಗೌರವ, ಇವೆಲ್ಲ ಇದ್ದಾಗ ಮಾತ್ರ ಸೇವಕತ್ವವು ಸ್ವಾಮಿಗೆ ಪಥ್ಯವಾದೀತು. ಇಲ್ಲವಾದಲ್ಲಿ

ಸ್ವಪ್ರತಿಷ್ಠೆಯನ್ನೇ ಬೆಳೆಸಿಕೊಳ್ಳುವ ಪ್ರವೃತ್ತಿಯಿದ್ದ ಸೇವಕನು ಸ್ವಾಮಿಯ ಅಪ್ರೀತಿಗೆ ಪಾತ್ರನಾಗುತ್ತಾನೆ. ಇದುಅವನ ಚರಿತಾರ್ಥಕ್ಕೆ ಧಕ್ಕೆ ತರುತ್ತದೆ.

## ೪೦೧. ಗುರು ವಶವರ್ತೀ ಶಿಷ್ಯಃ

ಗುರುವೇ ಸರ್ವಸ್ವವೆಂದು ತಿಳಿದು, ಅವನ ಅನುಗ್ರಹಕ್ಕೆ ಪಾತ್ರನಾದ ಶಿಷ್ಯನು ಗುರುವಿನ ಕೀರ್ತಿಯನ್ನು ಹೆಚ್ಚಿಸುತ್ತಾನೆ. ' ಗುರುಣಾ ಶೋಭತೇ ಶಿಷ್ಯಃ, ಶಿಷ್ಯೇಣಾಪಿ ಗುರುಸ್ತಥಾ ' ಎಂಬ ಉಕ್ತಿಯಂತೆ ಗುರುವಿನ ಬಲದ ಮೇಲೆ ಶಿಷ್ಯನ ಏಳ್ಗೆ. ಶಿಷ್ಯನ ವರ್ತನೆಯಿಂದಾಗಿ ಗುರುವಿಗೆ ಕೀರ್ತಿ—ಹೀಗೆ ಪರಸ್ಪರ ಪೂರಕವಾಗಿ ಗುರು–ಶಿಷ್ಯರ ಸಂಬಂಧವಿರುತ್ತದೆ

ಭಾರತೀಯ ಪರಂಪರೆಯಲ್ಲಿ ಗುರುವಿಗಿದ್ದ ಸ್ಥಾನ ಅಪಾರವಾದುದು. ಈ ವಿಷಯ ಹಿಂದೊಮ್ಮೆ ಬಂದಿದೆ. ಆಚಾರ್ಯ ಶಂಕರರಂತಹರು ಕೂಡ ಗುರುವಿನ ಹೆಸರು ಹೇಳಿಯೇ ತಮ್ಮನ್ನು ಪರಿಚಯಿಸುತ್ತಾರೆ. ( ಇತಿ ಶ್ರೀ ಗೋವಿಂದ ಭಗವತ್ಪೂಜ್ಯಪಾದ ಶಿಷ್ಯ ಶ್ರೀಮಚ್ಛಂಕರ ಭಗವತ್ಪಾದ ಕೃತೌ ಪ್ರಥಮೋಧ್ಯಾಯಃ ) ಗುರುವು ಕೂಡ ' ಶಿಷ್ಯಾದಿಚ್ಛೇತ್ ಪರಾಜಯಮ್ ' ಎಂಬಂತೆ, ತನಗಿಂತ ತನ್ನ ಶಿಷ್ಯನು ಮೇಲಾದರೆ, ಅದರಲ್ಲಿ ತನ್ನ ಘನತೆಯನ್ನೇ ಕಾಣುತ್ತಾನೆ. ಹೀಗಿದೆ ನಮ್ಮ ಪರಂಪರೆಯಲ್ಲಿ ಗುರು–ಶಿಷ್ಯ ಸಂಬಂಧ.

## ೪೦೨. ಪಿತೃ ವಶಾನುವರ್ತೀ ಪುತ್ರಃ

ತಂದೆಯ ಆಜ್ಞೆಯಂತೆ ನಡೆದುಕೊಳ್ಳುವವನೇ ಸುಪುತ್ರ. ಪುತ್ರಪ್ರಾಪ್ತಿಯ ಮಹತ್ವವು ಈಗಾಗಲೇ ಸಾಕಷ್ಟು ಚರ್ಚಿಸಲ್ಪಟ್ಟಿದೆ. ಮಗನ

ರಕ್ತ, ಬುದ್ಧಿ, ವಿದ್ಯೆ, ಸ್ವಭಾವ—ಎಲ್ಲವೂ ತಂದೆಯಿಂದಲೇ ಬಂದಿರುವುದ-
ರಿಂದ 'ಪುತ್ರ ಆತ್ಮಾ ಮನುಷ್ಯಸ್ಯ, ಭಾರ್ಯಾ ದೈವಕೃತಃ ಸಖಾ.'
ಎಂದು ಶಾಸ್ತ್ರವು ಹೇಳುತ್ತದೆ. ಮಗನು ತಂದೆಯ ಆತ್ಮನೇ ಇದ್ದಂತೆ.
ಅರ್ಥಾತ್ ಅವನು ತಂದೆಯ ಸತ್ವ ( Essence ) ಎಂದೇ ಹೇಳಬಹುದು.

## ೪೦೩. ಸ್ವಾಮಿನಮೇವಾನುವರ್ತೇತ

ಎಲ್ಲ ಬಗೆಯಿಂದಲೂ ಸ್ವಾಮಿಯನ್ನು ಅನುಸರಿಸಿ, ಅವನನ್ನು ಖುಷಿ-
ಯಲ್ಲಿಡುವುದೇ ಸೇವಕನಿಗೆ ಭೂಷಣ. ಸ್ವಾಮಿಯ ಶ್ರೇಯಸ್ಸಿಗಾಗಿ ಶ್ರಮಿ-
ಸುವ ಸೇವಕನು ಯಾವಾಗಲೂ ಅವನ ಅನುಗ್ರಹಕ್ಕೆ ಪಾತ್ರನಾಗಿ ಸುಖಿ-
ಯಾಗಿರಬಲ್ಲ.

## ೪೦೪. ಮಾತೃತಾಡಿತೋ ವತ್ಸೋ ಮಾತರಮೇವಾನುರೋದಿತಿ

ತಾಯಿ ಹೊಡೆದರೂ ಮಗುವು ಮರಳಿ ಅವಳನ್ನೇ ಅಪ್ಪಿಕೊಳ್ಳು-
ವಂತೆ, ಸೇವಕನು ಸ್ವಾಮಿಯನ್ನು ನಂಬಿದರೆ, ಉಭಯತರಿಗೂ ಕಲ್ಯಾಣ-
ವೆಂದು ಈ ಸೂತ್ರವು ದೃಷ್ಟಾಂತದ ಮೂಲಕವಾಗಿ ತಿಳಿಯಪಡಿಸುತ್ತದೆ.

## ೪೦೫. ಸ್ನೇಹವತಃ ಸ್ವಲ್ಪೋ ಹಿ ರೋಷಃ

ಪ್ರೀತಿಯಿದ್ದಲ್ಲಿ ರೋಷ ಅಂದರೆ ಸಿಟ್ಟು ಬಹಳ ವೇಳೆ ಉಳಿಯು-
ವುದಿಲ್ಲ. ತಾಯಿ, ತಂದೆ, ಮಕ್ಕಳು, ಗಂಡ–ಹೆಂಡಿರು, ನಿಜವಾದ ಮಿತ್ರರು—

ಇವರೆಲ್ಲರಲ್ಲಿ ಆತ್ಮೀಯ ಭಾವನೆ ಇರುವುದರಿಂದ ತಾತ್ಕಾಲಿಕವಾಗಿ ಉತ್ಪನ್ನ-ವಾದ ರೋಷವು ಬಹುಕಾಲ ಉಳಿಯಲಾರದು. ಪರಸ್ಪರ ಸ್ನೇಹ, ಸದ್ಭಾ-ವನೆ, ಹಿತವಾಗಬೇಕೆಂಬ ಬುದ್ಧಿ ಇರುವುದರಿಂದ ಇಂಥವರಲ್ಲಿ ಕೋಪಕ್ಕೆ ಅವಕಾಶ ಉಳಿಯಲಾರದು. ಕೋಪ ಬರುವುದು ಕೂಡ ಕಲ್ಯಾಣಕ್ಕಾಗಿಯೇ ಎನ್ನುವುದನ್ನು ತಂದೆ–ತಾಯಿಗಳು, ಮಕ್ಕಳ ಮೇಲೆ ಕೋಪಗೊಂಡಾಗ ಅನು-ಭವಕ್ಕೆ ಬರುವ ವಿಷಯ.

## ೪೦೬. ಅತ್ಯುಪಚಾರಃ ಶಂಕಿತವ್ಯಃ

ಯಾರಾದರೂ ಅತಿಯಾದ ಆದರವನ್ನು ತೋರಿಸಹತ್ತಿದರೆ, ಆದರ ಹಿಂದೆ ಏನೋ ಒಂದು ಸ್ವಾರ್ಥವಿದೆ ಎಂದು ತಿಳಿದುಕೊಳ್ಳಬೇಕು. ಏನೂ ಕಾರಣವಿಲ್ಲದೆ ಪೆರವರಿಗೆ ಆತ್ಮಾದರವನ್ನು ತೋರಿಸುವುದು.ಮಹಾತ್ಮರಾದವ-ರಿಗೆ ಮಾತ್ರ ಸಾಧ್ಯ. ಲೋಕದಲ್ಲಿ ಪ್ರತಿಯೊಬ್ಬನು ಸ್ವಾರ್ಥಪ್ರೇರಿತನಾಗಿರು-ತ್ತಾನೆಂಬ ವಿಷಯವು ಅದೆಷ್ಟೋ ಸಲ ಹೇಳಲಾಗಿದೆ. ಆದ್ದರಿಂದ ಲೋಕಜ್ಞ-ನಾದ ಚಾಣಕ್ಯನು, ನಿಮಗೆ ಯಾರಾದರೂ ಆತ್ಮಾದರವನ್ನು ತೋರಿಸಿದಾಗ, ಎಚ್ಚರದಿಂದಿರಬೇಕು: ಅದಕ್ಕೆ ಒಂದು ಸ್ವಾರ್ಥಪ್ರೇರಿತವಾದ ಹೇತುವಿರಲೇ-ಬೇಕು ಎಂದು ಉಪದೇಶಿಸುತ್ತಾನೆ.

ಒಬ್ಬರಿಂದ ನಮಗೆ ನೌಕರಿ ಸಿಗುವಂತಿದ್ದರೆ, ಒಬ್ಬರ ಮನೆಗೆ ಕನ್ಯೆ-ಯನ್ನು ಕೊಡುವ ಸಂಚುಹಾಕಿದಾಗ, ಅಥವಾ ಒಂದು ಮಹತ್ತರವಾದ ಕಾರ್ಯವು ಇಂಥ ಮನುಷ್ಯನಿಂದಲೇ ಸಾಧ್ಯವಾಗುವುದೆಂದು ಗೊತ್ತಿದ್ದಾಗ-ಲೆಲ್ಲ ಆತ್ಮಾದರವನ್ನು ತೋರಿಸುವುದು ಅನುಭವಕ್ಕೆ ಬರುವ ಮಾತು.

## ೪೦೭. ಸ್ವೋಪಚಾರಃ ಕೈತವಃ

ಒಬ್ಬರನ್ನು ಮೋಸಮಾಡುವುದಿದ್ದಾಗ, ಅತಿಯಾದ ಆದರವನ್ನು

ತೋರ್ಪಡಿಸಿ, ಅವರನ್ನು ಮರುಳುಮಾಡಿ, ತಮ್ಮ ಬಲೆಯಲ್ಲಿ ಒಗೆದು-ಕೊಳ್ಳುವುದು ಧೂರ್ತರ ಸ್ವಭಾವ. ಆದ್ದರಿಂದ ಅತಿಯಾದ ಆದರವೆಂದರೆ, ಒಂದು ಬಲೆ ಇದ್ದಂತೆ ಎಂದು ಈ ಸೂತ್ರವು ಎಚ್ಚರಿಸುತ್ತದೆ. ಸಾಮಾನ್ಯ-ವಾಗಿ ಒಬ್ಬರನ್ನು ತಮ್ಮ ಬಲೆಯಲ್ಲಿ ಸಿಕ್ಕಿಸಿಕೊಳ್ಳುವಾಗ, ಒರಟಾಗಿ ಇಲ್ಲವೆ ಸೊಕ್ಕಿನಿಂದ ಮಾತನಾಡಿದರೆ ಯಾರೂ ಮರುಳಾಗಲಾರರು. ಆದ್ದರಿಂದ 'ಕೈತವ' ಎಂದರೆ ಮೋಸದ ಹಂಚಿಕೆ ಹಾಕಿದಾಗ ಆದರ ಕಾರ್ಯಾ-ಚರಣೆಯು ಯಾವಾಗಲೂ ಅತ್ಯಾದರದ ನಾಟಕದಿಂದಲೇ ಆರಂಭವಾಗು-ತ್ತದೆ ಎಂದು ಬಹು ಮಾರ್ಮಿಕವಾಗಿ ಇಲ್ಲಿ ಹೇಳಲಾಗಿದೆ.

## ೪೦೮. ಕಾಮ್ಯೈರ್ವಿಶೇಷೈರುಪಚರಣಮುಪಚಾರಃ

ಉಪಚಾರ ಶಬ್ದಕ್ಕೆ ಮೇಲಿನ ಸೂತ್ರಗಳಲ್ಲಿ ವಿಶೇಷವಾದ (ಪಾರಿ-ಭಾಷಿಕ) ಅರ್ಥವಿದೆಯೆಂದು ಈ ಸೂತ್ರವು ಸೂಚಿಸುತ್ತದೆ. ಯಾವುದೇ ಒಂದು ವಿಶೇಷ ಅಭಿಲಾಷೆಯನ್ನು ಪೂರ್ತಿಗೊಳಿಸಿಕೊಳ್ಳುವುದಕ್ಕಾಗಿ ಮಾಡುವ ಸೇವೆಯು ಉಪಚಾರವೆನಿಸುತ್ತದೆ. ಮನೆಗೆ ಬಂದವರಿಗೆ ಸಾಮಾನ್ಯವಾಗಿ, ಮಾಡುವ ಆದರಾತಿಥ್ಯಕ್ಕೆ ಉಪಚಾರವೆಂದು ಕರೆಯುವುದು ರೂಢಿ. ಇಲ್ಲಿ ಅಂಥ ಸಾಮಾನ್ಯ ಅರ್ಥದಲ್ಲಿ ಈ ಶಬ್ದದ ಪ್ರಯೋಗವಾಗಿರದೆ, ವಿಶೇ-ಷಾರ್ಥದಲ್ಲಿ ಇದನ್ನು ಉಪಯೋಗಿಸಲಾಗಿದೆ ಎಂದು ತಿಳಿಯಬೇಕಾದದ್ದು ಅವಶ್ಯ. ಪತಿಯಿಂದ ತನಗೆ ಬೇಕಾದ ವಸ್ತ್ರಾಭರಣಗಳನ್ನು ಪಡೆಯುವು-ದಕ್ಕಾಗಿ, ಪತ್ನಿಯು ಇಂಥ ಉಪಚಾರ ಮಾಡುವ ದೃಷ್ಟಾಂತಗಳು ದುರ್ಲಭ-ವೇನಲ್ಲ.

## ೪೦೯. ಚಿರಪರಿಚಿತಾನಾಂ ಅತ್ಯುಪಚಾರಃ ಶಂಕಿತವ್ಯಃ

ಸಾಮಾನ್ಯವಾಗಿ ಅತಿಯಾದ ಆದರವು ಸಂಶಯಾಸ್ಪದವಾಗಿರುತ್ತದೆ

ಎಂದು ಹೇಳಿದ ಸೂತ್ರಕಾರನು, ಚಿರಪರಿಚಿತರಲ್ಲಿ ಆಕಸ್ಮಾತ್ತಾಗಿ ಇಂಥ ಆದರವು ಕಂಡುಬಂದರೆ, ಅವರ ಹಿಂದೆ ಖಚಿತವಾಗಿ ಗತ್ತುಗಾರಿಕೆ ಇದೆ ಎಂದು ತಿಳಿಯಲೇಬೇಕೆಂದು ಇಲ್ಲಿ ಸ್ಪಷ್ಟವಾಗಿ ತಿಳಿಯಪಡಿಸಿದ್ದಾನೆ. ಇದಕ್ಕೆ ಕಾರಣ, ಚಿರಪರಿಚಿತರ ಮನೆಯೆಂದರೆ ತಮ್ಮ ಮನೆ ಇದ್ದಂತೆಯೇ. ಅಂಥಲ್ಲಿ ಅತ್ಯಾದರಕ್ಕೆ ಎಷ್ಟೂ ಆಸ್ಪದವಿರಲಾರದು. ಹೀಗಿದ್ದಾಗ್ಯೂ ಅತ್ಯಾದರವು ಕಂಡುಬಂದರೆ, ಕಾರಣವಿರದೇ ಕಾರ್ಯವಾಗಲಾರದು ಎಂಬ ತತ್ವಕ್ಕನುಗುಣವಾಗಿ, ಅಲ್ಲಿ ಏನೋ ಸ್ವಾರ್ಥವಿದೆಯೆಂದು ಸಹಜವಾಗಿ ಸಿದ್ಧವಾಗುತ್ತದೆ. ಇವೆಲ್ಲ ಚಾಣಕ್ಯನ ಸೂಕ್ಷ್ಮದೃಷ್ಟಿಗೆ ಉದಾಹರಣೆಗಳು.

## ೪೧೦. ಅತಿಸಂಗೋ ದೋಷಮುತ್ಪಾದಯತಿ

ಹೆಚ್ಚು ಪರಿಚಯವಾದಲ್ಲಿ, ನಮ್ಮ ದೋಷಗಳು ಹೊರಬೀಳುತ್ತವೆ ಎಂದು ಈ ಹಿಂದೆ ಹೇಳಿದ ಸೂತ್ರಕಾರನು, ಇಲ್ಲಿ ಅತಿಯಾಗಿ ಒಬ್ಬರೊಂದಿಗೆ ಸಂಪರ್ಕ ಬೆಳೆಸಿದರೆ, ಅಂಥ ಸ್ನೇಹವು ಒಮ್ಮೆಲ್ಲೊಮ್ಮೆ ಎಡುಪ್ಪಿಯನ್ನು ತರುತ್ತದೆ ಎಂದು ಇನ್ನೊಂದು ಬಗೆಯಾಗಿ ಹೇಳುತ್ತಾನೆ. ಯಾವುದೇ ವ್ಯವಹಾರವಾಗಲಿ ಅತಿಯಾಗಿ ಬೆಳೆದಾಗ, ಕ್ರಮೇಣ ಅದರಿಂದಾಗುವ ಲಾಭಗಳೊಂದಿಗೆ ಹಲವು ಅಪ್ರಿಯ ಸಂಗತಿಗಳು ಸಂಭವಿಸುವುದು ಸಹಜ. ಹೀಗಾಗಿ ಬೇಸರವಾಗಹತ್ತುತ್ತದೆ. ಉದಾಹರಣೆಗಾಗಿ, ನಾವು ಇನ್ನೊಬ್ಬರ ಮನೆಗೆ ಅತಿಯಾಗಿ ಹೋಗಹತ್ತಿದರೆ, ಅವರಿಗೆ ಗುಟ್ಟಾಗಿ ಮಾತಾಡುವುದು ಅಥವಾ ಏಕಾಂತ ವಾತಾವರಣದಲ್ಲಿ ಏನಾದರೂ ತಿಂಡಿ–ತಿನಿಸುಗಳನ್ನು ಮಾಡುವುದಿದ್ದರೆ, ಅದಕ್ಕೂ ಕೂಡ ಅವಕಾಶ ದೊರೆಯದೆ ಸಂಬಂಧವು ಬೇಸರವನ್ನುಂಟುಮಾಡುತ್ತದೆ.

## ೪೧೧. ಗೌರ್ದುಷ್ಕರಾಶ್ವಸಹಸ್ರಾದೇಕಾಕಿನೀ ಶ್ರೇಯಸೀ

ಅಲಭ್ಯವೆನಿಸಿದ ಒಂದು ಹಸುವು ಸಾವಿರ ನಾಯಿಗಳಿಗಿಂತ ಶ್ರೇಷ್ಠ-

ವಾದದ್ದು ಎಂದು ಹೇಳುವ ಈ ಸೂತ್ರವು ಆದರ್ಶವಾದವನ್ನು ಎತ್ತಿ-ಹಿಡಿಯುತ್ತದೆ. ನಿಕೃಷ್ಟದರ್ಜೆಯ ಎಷ್ಟೋ ವಸ್ತುಗಳಿದ್ದರೂ, ಅವೆಲ್ಲಕ್ಕಿಂತ ಉಚ್ಚಕೋಟಿಯ ಒಂದೇ ವಸ್ತುವು ಶ್ರೇಷ್ಠ. ನೂರು ಮೂರ್ಖ ಮಕ್ಕಳಿ-ಗಿಂತ ಒಬ್ಬನೇ ಒಬ್ಬ ಜಾಣ ಮಗನಿರುವುದು ಲೇಸು ಎಂದಂತಿದೆ ಈ ಮಾತು. ಇದಕ್ಕೆ ಸಮಾಜದಲ್ಲಿ ಬೇಕಾದಷ್ಟು ನಿದರ್ಶನಗಳು ದೊರೆಯಬಹುದು. ಹತ್ತು ಎಕರೆ ನಿಕೃಷ್ಟ ದರ್ಜೆಯ ಭೂಮಿಗಿಂತ ಒಂದೇ ಎಕರೆ ಉತ್ತಮ ತೋಟ ವಿದ್ದುದು ಲೇಸು. ಒಂದು ನೂರು ಮದಗುಣಕೆಯ ಹೂವಿಗಿಂತ ಒಂದೇ ಒಂದು ಗುಲಾಬಿ, ಸಂಪಿಗೆ ಅಥವಾ ಕಮಲಪುಷ್ಪವು ಶ್ರೇಷ್ಠ—ಇತ್ಯಾದಿ.

## ೪೧೨. ಶ್ವೋ ಮಯೂರಾದದ್ಯ ಕಪೋತೋ ವರಃ

ನಾಳೆ ದೊರೆಯಬಹುದಾದ ನವಿಲಿಗಿಂತ ಇಂದೇ ದೊರಕಿದ ಪಾರಿ-ವಾಳವು ಲೇಸು ಎಂದು ಹೇಳಿದ್ದು, ' A bird in the band is worth more than two behind the bush ' ಎಂದು ಹೇಳುವ ಗಾದೆಯನ್ನು ಹೋಲುತ್ತದೆ. ಸಂಭಾವ್ಯವೆನಿಸುವ ಹೆಚ್ಚಿನ ಲಾಭಕ್ಕಿಂತ ಖಚಿತವಾದ ಅಲ್ಪ ಲಾಭವೇ ಶ್ರೇಷ್ಠವೆಂಬ ತಾತ್ಪರ್ಯವಿರುವ ಈ ಸೂತ್ರವು, ಮನುಷ್ಯನು ವಾಸ್ತವವಾದಿಯಾಗಿರಬೇಕು ಎಂದು ಬೋಧಿಸುತ್ತದೆ.

## ೪೧೩. ಸರ್ವಂ ಜಯತ್ಯಕ್ರೋಧಃ

ಸಿಟ್ಟಿಗೆ ಬಾರದಿರುವ ಶಾಂತ ಸ್ವಭಾವವು ಏನೆಲ್ಲವನ್ನೂ ಜಯಿಸು ತ್ತದೆ ಎಂದು ಇಲ್ಲಿ ಹೇಳಲಾಗಿದೆ. ' ಕಾಮಾತ್ ಕ್ರೋಧೋಭಿಜಾಯತೇ ' ಎಂಬ ಗೀತಾವಾಕ್ಯದಂತೆ ಕಾಮಜನ್ಯವಾದ ಕ್ರೋಧವು ಸ್ವಾರ್ಥಪ್ರೇರಿತವಾಗಿ, ಸಹಿಷ್ಣುತೆಯ ಅಭಾವವನ್ನೇ ಪ್ರಕಟಿಸುವುದರಿಂದ ಜನರ ಅಪ್ರೀತಿಗೆ ಅಥವಾ

ತಿರಸ್ಕಾರಕ್ಕೆ ಕಾರಣವಾಗಲು ಇದೊಂದು ಅತಿ ಸುಲಭವಾದ ಸಾಧನವೆಂದು ಹೇಳಬಹುದು. ಎಂತೆಂತಹ ಮಹಾತ್ಮರು ಸಿಟ್ಟಿನ ಭರದಲ್ಲಿ ಅವಿವೇಕಕ್ಕೆ ತುತ್ತಾದುದನ್ನು ಪುರಾಣಗಳಲ್ಲಿ ಬಣ್ಣಿಸಲಾಗಿದೆ. ದುರ್ವಾಸ, ವಿಶ್ವಾಮಿತ್ರ ಹಾಗು ಜಮದಗ್ನಿ ಋಷಿಗಳು ಇದಕ್ಕೆ ಸಾಕ್ಷಿ. ಆದರೆ ಕ್ರೋಧಕ್ಕೆ ವಿರುದ್ಧ-ವೆನಿಸುವ ಪ್ರೀತಿ ಅಥವಾ ಆತ್ಮೀಯ ಭಾವನೆಯು ಏನೆಲ್ಲವನ್ನೂ ವಶಪಡಿಸಿ-ಕೊಳ್ಳಬಹುದು. ಒಮ್ಮೆ ರಾಮಕೃಷ್ಣ ಪರಮಹಂಸರ ಧರ್ಮಪತ್ನಿ ಶಾರದಾಮಣಿದೇವಿಗೆ ದಾರಿಯಲ್ಲಿ ಕಳ್ಳರು ಹೆದರಿಸಿ, ನೀನಾರೆಂದು ಗದರಿಸಿದ-ರಂತೆ. ಅದಕ್ಕೆ ಅವಳು "ನಾನು ನಿಮ್ಮ ಮಗಳಲ್ಲವೇ ? ನನ್ನ ಗುರುತು ನಿಮಗೆ ಸಿಕ್ಕಲಿಲ್ಲವೇ ?" ಎಂದು ಉತ್ತರಕೊಟ್ಟದ್ದಕ್ಕೆ, ಅವರ ಮನಃಪರಿ-ವರ್ತನೆಯಾಗಿ, ಪರಮಹಂಸರೆಡೆಗೆ ಅವಳನ್ನು ಸುರಕ್ಷಿತವಾಗಿ ಮುಟ್ಟಿಸಿದ-ರೆಂಬ ವೃತ್ತಾಂತವು ಅಕ್ರೋಧದ ಮಹಿಮೆಯನ್ನು ಸಾರುತ್ತದೆ.

## ೪೧೪. ಯದ್ಯಪಕಾರಿಣಿ ಕೋಪಃ ಕೋಪೇ ಕೋಪ ಏವ ಕರ್ತವ್ಯಃ

ನಮಗೆ ಅಪಕಾರ ಮಾಡಿದವನ ವಿಷಯಕ್ಕೆ ಕೋಪಗೊಳ್ಳುವ ಪ್ರಸಂಗ ಬಂದರೆ, ಮೊದಲು ಅವನು ನಮ್ಮ ಮೇಲೆ ಕೋಪಿಸಿಕೊಂಡ ಮೇಲೆಯೇ ನಾವು ಕೋಪವನ್ನು ಪ್ರಕಟಿಸಬೇಕು, ಅದಕ್ಕೂ ಮೊದಲಿಗಲ್ಲ—ಎಂದು ಈ ಸೂತ್ರವು, ತಪ್ಪು ನಮ್ಮ ಕಡೆಯಿಂದ ಆಗಬಾರದು ಎಂಬ ಸೂಕ್ಷ್ಮ ಲೋಕ-ವ್ಯವಹಾರವನ್ನು ಬೋಧಿಸುತ್ತದೆ. ಇದರ ಪರಿಣಾಮವಾಗಿ ನಮ್ಮ ಶತ್ರುವೇ ಸಮಾಜದ ನಿಂದೆಗೆ ಪಾತ್ರನಾಗುತ್ತಾನಲ್ಲದೆ, ನಾವು ಮರ್ಯಾದೆಯನ್ನು ಕಳೆದು ಕೊಳ್ಳುವ ಪ್ರಸಂಗ ಬರಲಾರದು.

## ೪೧೫. ಮತಿಮತ್ಸು ಮೂರ್ಖ ಮಿತ್ರ ಗುರುವಲ್ಲಭೇಷು ವಿವಾದೋ ನ ಕರ್ತವ್ಯಃ

ತಿಳಿದವರು, ಮೂರ್ಖರು, ಮಿತ್ರರು, ಗುರುಗಳು, ನಮಗೆ ಪ್ರಿಯ-

ಮಾಡುವವರು—ಈ ಎಲ್ಲರೊಂದಿಗೆ ಜಗಳ ಮಾಡಬಾರದು. ಇವರೆಲ್ಲರೂ (ಮೂರ್ಖರನ್ನು ಬಿಟ್ಟು) ನಮ್ಮ ಹಿತೈಷಿಗಳು, ನಮಗೆ ಆದರಣೀಯರು ಆಗಿರುವುದರಿಂದ ಜಗಳ ಮಾಡುವಲ್ಲಿ ಲಾಭವಂತೂ ಏನೂ ಇಲ್ಲ. ಪ್ರತಿಯಾಗಿ ಒಂದಿಲ್ಲೊಂದು ರೀತಿಯ ಕೇಡು ಮಾತ್ರ ಸಂಭವಿಸುವುದು ನಿಶ್ಚಿತ. ಮೂರ್ಖರಿಂದ ಅಪಮಾನ, ಮಿತ್ರರಿಂದ ಅಸಹಕಾರ, ಗುರುಗಳಿಗೆ ಅಸಮಾಧಾನ, ಪ್ರಿಯರಾದವರಿಗೆಲ್ಲ ಮನಸ್ತಾಪ—ಇತ್ಯಾದಿ ದುಷ್ಪರಿಣಾಮಗಳಾಗುವುದೇ ಹೆಚ್ಚು ಸಾಧ್ಯ. ಆದ್ದರಿಂದ ಇಂಥ ಅವ್ಯವಹಾರದಿಂದ ದೂರವಿರಬೇಕೆಂಬುದೇ ಸೂತ್ರಕಾರನ ಅಭಿಪ್ರಾಯ.

## ೪೧೬. ನಾಸ್ತ್ಯಪಿಶಾಚಮೈಶ್ವರ್ಯಮ್

ಐಶ್ವರ್ಯವು ಮನುಷ್ಯನನ್ನು ಪಿಶಾಚಿಯನ್ನಾಗಿ ಪರಿವರ್ತಿಸುತ್ತದೆ ಎಂದು ಸೂಚಿಸುವ ಈ ಸೂತ್ರವು ಬಾಣಭಟ್ಟನು ಕಾದಂಬರಿಯಲ್ಲಿ ಬಣ್ಣಿಸಿದ ಲಕ್ಷ್ಮಿಯ ದುರ್ಗುಣಗಳನ್ನು ನೆನಪಿಗೆ ತಂದುಕೊಡುತ್ತದೆ. ಲಕ್ಷ್ಮಿಯು ಎಂದೂ, ಎಲ್ಲಿಯೂ ಸ್ಥಿರಳಲ್ಲ. ಅವಳ ಪ್ರಭಾವದಿಂದ ಹೃದಯಕಾಠಿಣ್ಯ, ಮಾತಿನಲ್ಲಿ ನೈಷ್ಠುರ್ಯ, ನಡೆವಳಿಕೆಯಲ್ಲಿ ಮದ, ಸ್ವಭಾವ ವಕ್ರತೆ, ಔದ್ಧತ್ಯ—ಇತ್ಯಾದಿ ಗುಣಗಳು ಮನುಷ್ಯನಲ್ಲಿ ನೆಲೆಗೊಳ್ಳುತ್ತವೆ—ಎಂದು ಬಾಣಭಟ್ಟನು ಶುಕನಾಸನ ಮುಖದಿಂದ ಚಂದ್ರಾಪೀಡನಿಗೆ ಉಪದೇಶಿಸಿ, ಲಕ್ಷ್ಮೀ–ಮದಕ್ಕೆ ಯಾರೂ ತುತ್ತಾಗಬಾರದೆಂದು ಹೇಳಿದ್ದಾನೆ.

## ೪೧೭. ನಾಸ್ತಿ ಧನವತಾಂ ಶುಭಕರ್ಮಸು ಶ್ರಮಃ

ಸಿರಿವಂತರಿಗೆ ಧರ್ಮಕಾರ್ಯ ಮಾಡುವಲ್ಲಿ ಏನೂ ತೊಂದರೆಯಿಲ್ಲ. ದೇವರು ಸಂಪತ್ತನ್ನು ದಯಪಾಲಿಸಿದ್ದರಿಂದ, ಅದರ ಬಲದಿಂದ ಏನೆಲ್ಲ

ಮಾಡಬಹುದು. ಆದರೆ ಇಲ್ಲಿ ಮಹತ್ವದ ವಿಷಯವೆಂದರೆ, ಸತ್ಕಾರ್ಯ ಮಾಡುವ ಸುಬುದ್ಧಿಯು ಕ್ವಚಿತ್ತಾಗಿ ಸಿರಿವಂತರಲ್ಲಿ ಇರುತ್ತದೆ. ಕೆಲವು ಸಲವಂತೂ ಸತ್ಕಾರ್ಯ ಮಾಡುವ ಸೋಗಿನಲ್ಲಿ ಕಪ್ಪುಹಣವನ್ನು ಬಿಳಿ ಹಣವನ್ನಾಗಿ ಪರಿವರ್ತಿಸುವುದು, ಸರಕಾರಕ್ಕೆ ಕೊಡುವ ತೆರಿಗೆಯಿಂದ ತಪ್ಪಿಸಿ-ಕೊಳ್ಳುವುದು ಇತ್ಯಾದಿ ಹಂಚಿಕೆಗಳನ್ನು ಅವರು ಹಾಕಿರುತ್ತಾರೆ. ಇನ್ನು ಹಲವೆಡೆ ಕೋಟ್ಯಾವಧಿ ಹಣವನ್ನು ಅನ್ಯಾಯದಿಂದ ಎತ್ತಿಹಾಕಿ, ಚಳಿಗಾಲ-ದಲ್ಲಿ ತ್ರಿವೇಣಿ ಸಂಗಮದಲ್ಲಿ ಬಡವರಿಗೆ ಕಂಬಳಿ ದಾನಮಾಡಿದಂತೆ ನಾಟಕ-ವನ್ನು ಹೂಡಿ, ತಮ್ಮ ಅವ್ಯವಹಾರವನ್ನು ಮುಚ್ಚಿಕೊಳ್ಳಲಿಕ್ಕೆ ಪ್ರಯತ್ನಿ-ಸುತ್ತಾರೆ. ಪ್ರಸ್ತುತ ಸೂತ್ರದಲ್ಲಿ ಐಶ್ವರ್ಯವು ಮನುಷ್ಯನನ್ನು ಪಿಶಾಚಿ-ಯನ್ನಾಗಿ ಪರಿವರ್ತಿಸುತ್ತದೆ ಎಂದು ಹೇಳಿದ್ದು ಅಸತ್ಯವಲ್ಲವೆಂಬುದಕ್ಕೆ ಮೇಲೆ ವಿವರಿಸಿದ ಅವ್ಯವಹಾರಗಳೇ ಸಾಕ್ಷಿ. ದೇವರು ಸಿರಿವಂತರಿಗೆ ಔದಾರ್ಯ-ವನ್ನು ದಯಪಾಲಿಸಲೆಂದು ಮಹಾಕವಿ ರನ್ನನ ಧಾಟಿಯಲ್ಲಿ ಬೇಡಿ-ಕೊಳ್ಳೋಣ. ( ಶ್ರೀಯುತರೊಳ್ ಉದಾರತೆಯುಂ, ವಾಕ್ಶ್ರೀಯುತರೊಳ್ ಅಮತ್ಸರತ್ವಮ್ ).

## ೪೧೮. ನಾಸ್ತಿ ಗತಿಶ್ರಮೋ ಯಾನವತಾಮ್

ವಾಹನ ಸೌಕರ್ಯವಿದ್ದವನಿಗೆ ಪ್ರವಾಸದಲ್ಲಿ ದಣಿವಾಗುವ ಭಯ-ವಿಲ್ಲದಂತೆ, ಸಿರಿವಂತರಿಗೆ ಧರ್ಮಕಾರ್ಯವನ್ನು ಅನಾಯಾಸವಾಗಿ ಮಾಡು-ವುದು ಸಾಧ್ಯವೆಂಬುದನ್ನು ಇಲ್ಲಿ ಸೂಚಿಸಿದಂತಿದೆ. ಅಂಥ ಬುದ್ಧಿ ಅವರಿಗೆ ಬರುವುದು ಮಾತ್ರ ಕಷ್ಟ. ಆದರೂ ಭಾರತದಲ್ಲಿ ದಾನಶೂರರಾದ ಸಿರಿ-ವಂತರು ಎಲ್ಲಿಯೂ ದೊರೆಯಲಾರರು ಎಂದು ಮಾತ್ರ ಹೇಳುವಂತಿಲ್ಲ. ಇನ್ನೂ ಈ ಪುಣ್ಯಭೂಮಿಯ ಪ್ರಭಾವದಿಂದ ಅಂಥ ಉದಾರಿಗಳು ಅಲ್ಲಲ್ಲಿ ದೊರೆಯುತ್ತಾರೆ. ಆದರೆ ಔದಾರ್ಯದ ಪ್ರದರ್ಶನ ಮಾಡಿ, ಸ್ವಾರ್ಥ ಸಾಧಿಸಿಕೊಳ್ಳುವ ವ್ಯಕ್ತಿಗಳೇ ಬಹಳವೆಂದು ಖೇದದಿಂದ ಹೇಳಬೇಕಾಗುತ್ತದೆ.

ಇಲ್ಲಿ ಪಂಡಿತರೊಬ್ಬರು ಜಗತ್ತಿಗೆ ಭಾರತದ ಕೊಡುಗೆಯೆಂದರೆ ವೇದಾಂತಶಾಸ್ತ್ರ ಹಾಗು ಮೋಸದ ವ್ಯವಹಾರ—ಎಂದು ಅರ್ಧ ವ್ಯಂಗ್ಯವಾಗಿ ಹೇಳಿದ್ದು ನೆನಪಾಗುತ್ತದೆ.

## ೪೮೯. ವೈದುಷ್ಯಮಲಂಕಾರೇಣಾಚ್ಛಾದ್ಯತೇ

ವೇಷ-ಭೂಷಣಗಳು ಮನುಷ್ಯನ ನಿಜವಾದ ವಿದ್ವತ್ತನ್ನು ಪ್ರಕಟಗೊಳಿಸದೆ, ಬಚ್ಚಿಡುವುದಕ್ಕೇ ಕಾರಣವಾಗುತ್ತವೆ ಎಂದು ಈ ಸೂತ್ರವು ಹೇಳುತ್ತದೆ. ಇದರ ಮರ್ಮವೆಂದರೆ, ವಿದ್ವಾಂಸರಿಗೆ ಅವರ ವಿದ್ಯೆಯೇ ಎಲ್ಲಕ್ಕೂ ಮಿಗಿಲಾದ ಭೂಷಣವಾಗಿರುವಾಗ ಉಳಿದ ಭೂಷಣಗಳ ಆವಶ್ಯಕತೆಯಿಲ್ಲ ಎಂಬುದು. ಮರಾಠಿ ಭಾಷೆಯಲ್ಲಿ, 'ವೇಷ ಅಸಾವಾ ಬಾವಳಾ, ಪರಿ ಅಂತರಿ ಅಸಾವ್ಯಾ ನಾನಾ ಕಳಾ' ಎಂದು ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು. ವೇಷವು ಹುಚ್ಚನಂತಿದ್ದರೂ, ಒಳಗೆ ನಾನಾ ಕಲೆಗಳಿರಬೇಕು—ಎಂದು ಬಹು ಸುಂದರವಾಗಿ ಬೋಧಿಸಲಾಗಿದೆ. ಆದ್ದರಿಂದ ಸಿರಿವಂತರೇ ಆಗಲಿ, ದಡ್ಡರೇ ಆಗಲಿ ತಮ್ಮಲ್ಲಿಯ ನ್ಯೂನತೆಗಳನ್ನು ಬಚ್ಚಿಡುವುದಕ್ಕಾಗಿ, ಹೊರಗಣ್ಣಿಗೆ ಡೌಲು ಪ್ರದರ್ಶಿಸುವುದರಿಂದ ವಿದ್ಯಾವಂತರ ವಿದ್ವತ್ತು ಡೌಲಿನ ವೇಷದಲ್ಲಿ ಮುಚ್ಚಿಹೋಗುತ್ತದೆ. ಈ ಸತ್ಯಾಂಶವೇ ಪ್ರಸ್ತುತ ಸೂತ್ರದ ಆಶಯ.

## ೪೯೦. ವಿಪ್ರಾಣಾಂ ಭೂಷಣಂ ವೇದಃ

ಬ್ರಾಹ್ಮಣರಿಗೆ ಹಣ, ಅಧಿಕಾರ, ಆಸ್ತಿ, ವೇಷ—ಇವೆಲ್ಲ ಭೂಷಣಗಳಲ್ಲ. ವೇದಾಧ್ಯಯನವೇ ಭೂಷಣವೆಂದು ಈ ಸೂತ್ರವು ನಿರ್ದಾಕ್ಷಿಣ್ಯವಾಗಿ ಹೇಳುತ್ತದೆ. ಇದರ ಅರಿವು ಬ್ರಾಹ್ಮಣರಿಗೆ ಇರುವುದು ಅವಶ್ಯ. 'ವೇದಶ್ಶಿವಃ ಶಿವೋ ವೇದಃ ವೇದಾಧ್ಯಾಯೀ ಸದಾಶಿವಃ' ಎಂದರೆ

ವೇದವೇ ಶಿವ, ಶಿವನೇ ವೇದ. ಆದ್ದರಿಂದ ವೇದಾಧ್ಯಯನ ಮಾಡಿದವನು ಸದಾಶಿವನೆನಿಸಿಕೊಳ್ಳುತ್ತಾನೆ. ವೇದಗಳನ್ನು ಜೀವಂತ ಇಡುವ ಹೊಣೆಗಾರಿಕೆಯನ್ನು ಬ್ರಾಹ್ಮಣರು ತೆಗೆದುಕೊಳ್ಳುವುದು ಅವಶ್ಯ. ಅವರಿಂದ ಚರಿತಾರ್ಥ ಸಾಗದಿದ್ದಲ್ಲಿ, ಒಂದು ಚಿಕ್ಕ-ಪುಟ್ಟ ಉದ್ಯೋಗವನ್ನು ಸಾಗಿಸಿಕೊಂಡು ಬದುಕಿರಬಹುದು. ಅವರಿಗೆ ವೇದಗಳ ಸಂರಕ್ಷಣೆ ಪ್ರಧಾನವಾದದ್ದು. ಭಾರತದ ದಕ್ಷಿಣಕ್ಕೆ ಹೋದಂತೆ ಈ ಪ್ರವೃತ್ತಿ ವಿಶೇಷ ಕಂಡುಬರುತ್ತದೆ.

ಇಲ್ಲಿಯ ವರೆಗೆ ವೇದಗಳನ್ನು ಕಲಿಯಲು ತಮಗೆ ಅಧಿಕಾರವೇಕಿಲ್ಲ ಎಂದು ಹುಯಿಲೆಬ್ಬಿಸಿದ ಅಬ್ರಾಹ್ಮಣರು ಈಗ ವೇದ, ಸಂಸ್ಕೃತ ಇವೆಲ್ಲ ಬ್ರಾಹ್ಮಣಜಾತಿಗೆ ಸಂಬಂಧಪಟ್ಟವುಗಳೆಂದು ಎಲ್ಲೆಲ್ಲಿಯೂ ಅವುಗಳ ಅಧ್ಯಯನವನ್ನು ಬಹಿಷ್ಕರಿಸಿದ್ದಾರೆ. ಈಗ ಎಲ್ಲರಿಗೂ ಬೇಕಾದದ್ದು ಹಣ ಮಾತ್ರ, ಅದೂ ಶ್ರಮವಿಲ್ಲದೆ. ಅನಾಯಾಸವಾಗಿ ದೊರೆಯಬೇಕು__ಎಂಬುದು ಅವರ ಹಾರೈಕೆ.

ಸೂಜ್ಞರೊಬ್ಬರು, ಬ್ರಾಹ್ಮಣರ ವಿಷಯಕ್ಕೆ, ಅಪ್ರಿಯವೆನಿಸಿದರೂ ಸತ್ಯವಾದ ಒಂದು ಮಾತನ್ನು ಹೇಳಿದ್ದು ನೆನಪಿಗೆ ಬರುತ್ತದೆ. " ಈಗಿನ ಬ್ರಾಹ್ಮಣರಿಗೆ ಎಲ್ಲರಲ್ಲಿಯೂ ಶ್ರೇಷ್ಠರೆಂಬ ( ಬ್ರಾಹ್ಮಣ್ಯದ ) ಗೌರವವೂ ಬೇಕು, ಕ್ಷತ್ರಿಯರ ಅಧಿಕಾರವೂ ಬೇಕು. ವೈಶ್ಯರ ಹಣವೂ ಬೇಕು, ಶೂದ್ರರ ಸ್ವಚ್ಛಂದತೆಯೂ ಬೇಕು. ಅರ್ಥಾತ್ ಎಲ್ಲ ವರ್ಣಗಳಲ್ಲಿಯ ಸೌಲಭ್ಯಗಳು ಬೇಕು. ಆದರೆ ಯಾವ ವರ್ಣದ್ದೂ ಹೊಣೆಗಾರಿಕೆ ಮಾತ್ರ ಬೇಡ" ಈ ವೃತ್ತಿಯನ್ನು ಬೆಳೆಸಿಕೊಂಡ ಬ್ರಾಹ್ಮಣರಿಗೆ ಯಾವ ಕಾರಣದಿಂದಾಗಿ ಗೌರವವನ್ನು ಕೊಡಬೇಕು ?

## ೪೨೧. ಸರ್ವೇಷಾಂ ಭೂಷಣಂ ಧರ್ಮಃ

ಬ್ರಾಹ್ಮಣರಿಗೆ ವೇದಗಳು ಭೂಷಣವಾಗಿರುವಂತೆ, ಎಲ್ಲರಿಗೂ ಭೂಷಣ ಪ್ರಾಯವಾದದ್ದು ಧರ್ಮ. ಅರ್ಥಾತ್ ಸದಾಚಾರ. ಅದಿಲ್ಲದ ಐಶ್ವರ್ಯ,

ಅಧಿಕಾರ ಎಲ್ಲವೂ ವ್ಯರ್ಥ. ಅಧರ್ಮವು ಇಂದಿಲ್ಲ ನಾಳೆ ದುರ್ಗತಿಗೆ ಕಾರಣವಾಗುವುದರಲ್ಲಿ ಎಷ್ಟೂ ಸಂಶಯವಿಲ್ಲ. ಧರ್ಮಕ್ಕೆ ಶರಣುಹೋಗುವುದು ಏಕಮಾತ್ರ ಉದ್ಧಾರದ ಉಪಾಯ ಎಂಬುದೇ ಈ ಸೂತ್ರದ ಆಶಯ.

## ೪೨೨. ಭೂಷಣಾನಾಂ ಸವಿನಯಾ ವಿದ್ಯಾ

ಎಲ್ಲ ಭೂಷಣಗಳಿಗೂ ಭೂಷಣಪ್ರಾಯವಾದುದು ವಿನಯದಿಂದೊಡಗೂಡಿದ ವಿದ್ಯೆ. ವಿದ್ಯಾವಂತರು ವಿನಯಶೀಲರಾಗಿರದಿರುತ ಹಾಗೆಯೇ ವಿನಯಸಂಪನ್ನರು ಅವಿದ್ಯಾವಂತರಾಗಿರುವ ಉದಾಹರಣೆಗಳಿಗೆ ಕೊರತೆಯಿಲ್ಲ. ಆದರೆ. 'ವಿದ್ಯಾ ವಿನಯೇನ ಶೋಭತೇ' ಎಂಬ ಉಕ್ತಿಯಂತೆ, ವಿದ್ಯೆಗೆ ವಿನಯದ ಸಂಯೋಗವಾದಾಗ. ಬಂಗಾರದ ಉಂಗುರಕ್ಕೆ ವಜ್ರದ ಹರಳು ಕೂಡಿಸಿದಂತೆ ಹೆಚ್ಚು ಮೆರಗು ಬರುತ್ತದೆ. ಆದ್ದರಿಂದ ಸೂತ್ರಕಾರನು ಎಲ್ಲ ವಿದ್ಯಾವಂತರಿಗೂ ವಿನಯಶೀಲರಾಗಿರಲು ಉಪದೇಶಿಸಿದ್ದಾನೆ.

## ೪೨೩. ಅನುಪದ್ರವಂ ದೇಶಮಾವಸೇತ್

ಮನುಷ್ಯನ ವಾಸಕ್ಕೆ ಎಂಥ ಪ್ರದೇಶವು ಒಳ್ಳೆಯದು ಎಂದು ಕೇಳಿದರೆ. ಉಪದ್ರವವಿಲ್ಲದ ದೇಶದಲ್ಲಿರಬೇಕು ಎಂದು ಈ ಸೂತ್ರವು ಹೇಳುತ್ತದೆ. ಆದರೆ ಉಪದ್ರವವಿಲ್ಲದ ದೇಶ ದೊರಕುವುದೆಂತು ? ಸ್ವಾರ್ಥಪ್ರೇರಿತವಾದ ಈ ಸಮಾಜದಲ್ಲಿ. ಅಧಿಕಾರವನ್ನು ಕೊನೆಯ ವರೆಗೂ ಬಿಡಬಾರದೆನ್ನುವವರು ಹಲವರಾದರೆ. ತಮ್ಮ ಕೋಮಿನವರ ಶಕ್ತಿಯನ್ನು ಬೆಳೆಸಿಕೊಳ್ಳಬೇಕೆನ್ನುವವರು ಇನ್ನೂ ಹಲವರು. ಎಲ್ಲರೂ ಸಮಾನರೆಂದು ಬಾಯಿಯಿಂದ ಹೇಳುತ್ತ, ಒಂದು ವಿಶಿಷ್ಟ ಜಾತಿಯವರನ್ನು ಹೇಗೆ ಕೆಳಕ್ಕೆ ನೂಕಬೇಕು

ಎಂದು ಹೊಂಚುಹಾಕುವವರು ನಮ್ಮ ನಾಯಕರು. ಬಹುಜನ ಸಮಾಜದ ಸಗಟು ಮತಗಳು ತಮಗೇ ದೊರೆಯಲೆಂದು, ಅದಕ್ಕಾಗಿ ಕಾನೂನುಗಳನ್ನು ಮಾಡುವವರು ಬೇರೆಯವರು. ಐಕ್ಯ, ಸಾಮ್ಯ ಎಂದು ಘೋಷಿಸುತ್ತ ಅನೈಕ್ಯ ಹಾಗು ವಿಷಮತೆಗಳನ್ನು ಪ್ರೋತ್ಸಹಿಸಿಕೊಂಡು ಹೋಗುವವರು ಇನ್ನೂ ಹಲವರು. ವಿದ್ಯಾ, ಬುದ್ಧಿ, ಕಾರ್ಯಶಕ್ತಿ ಇವೆಲ್ಲವನ್ನು ತಿರಸ್ಕರಿಸಿ. ಕೇವಲ ಮತಗಳ ಆಸೆಯಿಂದ, ಆಡಳಿತವು ಹದಗೆಟ್ಟರೂ ಪರಿವೆಯಿಲ್ಲದೆ ಮುನ್ನುಗ್ಗುವವರು ದೇಶಭಕ್ತರು. ಹೀಗಿರುವಾಗ, ಈ ಸೂತ್ರಕ್ಕೆ ಉತ್ತರ ದೊರೆಯುವುದು ಕಠಿಣ.

ಸುಭಾಷಿತಶ್ಲೋಕದಲ್ಲಿ—

> ತತ್ರ ಮಿತ್ರ ನ ವಸ್ತವ್ಯಂ ಯತ್ರ ನಾಸ್ತಿ ಚತುಷ್ಟಯಂ ।
> ಋಣದಾತಾ ಚ ವೈದ್ಯಶ್ಚ ಶ್ರೋತ್ರಿಯಃ ಸಜಲಾನದೀ ॥

ವಾಸಿಸಲಿಕ್ಕೆ ಯೋಗ್ಯವಾದ ದೇಶವೆಂದರೆ, ಅಲ್ಲಿ ಆಪತ್ಕಾಲದಲ್ಲಿ ಧನ ಸಹಾಯ ದೊರೆಯುವಂತಿರಬೇಕು. ಕುಡಿಯಲಿಕ್ಕೆ ಸ್ವಚ್ಛವಾದ ನೀರನ್ನು ಪೂರೈಸುವ ಜಲಾಶಯವಿರಬೇಕು. ಧರ್ಮಕಾರ್ಯಗಳನ್ನು ವಿಧಿವತ್ತಾಗಿ ನಡೆಸಿಕೊಡಲು ಯೋಗ್ಯರಾದ ಶ್ರೋತ್ರಿಯರಿರಬೇಕು. ರೋಗಿಗಳ ಶುಶ್ರೂಷೆಗಾಗಿ ವೈದ್ಯರಿರಬೇಕು—ಎಂದು ಇಲ್ಲಿ ಹೇಳಲಾಗಿದೆ. ಒಟ್ಟಿನ ಮೇಲೆ ಎಲ್ಲಿ ನ್ಯಾಯದಿಂದ ರಾಜ್ಯಾಡಳಿತವು ನಡೆಯುತ್ತದೆಯೋ: ಮನುಷ್ಯ ಜೀವನ ಹಾಗು ವಿಕಾಸಕ್ಕೆ ಸೌಲಭ್ಯಗಳಿವೆಯೋ ಅಲ್ಲಿ ವಾಸಿಸಬೇಕೆಂಬುದು ತಾತ್ಪರ್ಯ.

## ೪೨೪. ಯತ್ರ ಸುಖೇನ ವರ್ತತೇ ತದೇವ ಸ್ಥಾನಮ್

ಮೇಲಿನ ಸೂತ್ರದಲ್ಲಿಯ ವಿಚಾರವನ್ನು ಸಂಗ್ರಹರೂಪವಾಗಿ ಇಲ್ಲಿ ಮನುಷ್ಯನು ಎಲ್ಲಿ ಸುಖದಿಂದ ಬಾಳಲು ಸಾಧ್ಯವಾಗುತ್ತದೆಯೋ ಅದೇ ವಾಸಕ್ಕೆ ಯೋಗ್ಯವಾದ ಸ್ಥಾನವೆಂದು ತಿಳಿಯಪಡಿಸಲಾಗಿದೆ.

ಈ ಸೂತ್ರವು ಮಾತೃಭೂಮಿ, ಜನ್ಮಭೂಮಿ, ಸ್ವದೇಶ ಇವುಗಳ ವಿಷಯಕ್ಕೆ ಅಭಿಮಾನವಿರಬಾರದೆಂದು ಅಪ್ರತ್ಯಕ್ಷವಾಗಿ ಸೂಚಿಸಿದೆಯೋ ಎಂಬ ಸಂಶಯವುಂಟಾಗಬಹುದು. ಚಾಣಕ್ಯನು ಅಂಥ ಮೂರ್ಖನಲ್ಲ. ಈ ಸೂತ್ರದ ನಿಜವಾದ ಆಶಯವೆಂದರೆ, ಮನುಷ್ಯನು ವಾಸ್ತವವಾದಿಯಾಗಿ ತನ್ನ ಚರಿತಾರ್ಥಕ್ಕೆ ಅನುಕೂಲವಾಗುವಲ್ಲಿ ಮಾತ್ರ ವಾಸಿಸಬೇಕು ಎಂದು ಸೂಚಿಸಲಾಗಿದೆ. ಈ ವಿಷಯವಲ್ಲಿ—

ಯಸ್ಮಿನ್ ದೇಶೇ ನ ಸಮ್ಮಾನೋ ನ ಪ್ರೀತಿಃ ನ ಚ ಬಾಂಧವಃ ।
ನ ಚ ವಿದ್ಯಾಗಮಃ ಕಶ್ಚಿತ್ ನ ತತ್ರ ದಿವಸಂ ವಸೇತ್ ॥

ಎಲ್ಲಿ ತಮಗೆ ಸನ್ಮಾನ, ಪ್ರೀತಿ, ಬಾಂಧವ್ಯ, ವಿದ್ಯಾಪ್ರಾಪ್ತಿ ಇತ್ಯಾದಿಗಳ ಸಾಧ್ಯತೆಯಿಲ್ಲವೋ ಅಲ್ಲಿ ಒಂದು ದಿವಸದ ಮಟ್ಟಿಗೆ ಕೂಡ ಇರಬಾರದು ಎಂಬ ಸುಭಾಷಿತವಿದೆ.

ಈ ನಾನಾ ಕಾರಣಗಳಿಂದಾಗಿ ಜನರು ತಮ್ಮ ರಾಜ್ಯಗಳನ್ನು ಬಿಟ್ಟು ನೆರೆಯ ಪ್ರದೇಶಗಳಿಗೆ ಹೋಗಿ ಅನಾನುಕೂಲತೆಗಳನ್ನು ಸಹಿಸಿಯಾದರೂ ಅಲ್ಲಿಯೇ ನೆಲೆಸುತ್ತಾರೆ. ಹಲವರಂತೂ ವಿದೇಶಗಳಿಗೆ, ವಿಶೇಷವಾಗಿ ಅಮೇರಿಕೆಗೆ ಹೋಗಿ ನೆಲೆಸುವ ವ್ಯಾಮೋಹವನ್ನಿಟ್ಟುಕೊಂಡಿದ್ದಾರೆ.

## ೪೨೫. ಸಾಧು ಜನ ಬಹುಲೋ ದೇಶಃ

ಚಾಣಕ್ಯನು ಈ ಸೂತ್ರದಲ್ಲಿ ಎಲ್ಲಿ ಒಳ್ಳೆಯ ಜನರು ಅಧಿಕಾಂಶದಲ್ಲಿ ಇರುತ್ತಾರೋ, ಅದೇ ದೇಶವೆಂದು ಹೇಳುತ್ತಾನೆ. ಇಂಥ ದೇಶವು ಇದ್ದೀತೇ? ಎಂಬ ಸಂಶಯವು ಬರುವುದು ಸಹಜ. ಈ ವಿಷಯದಲ್ಲಿ ಭೋಜನ ಶ್ಲೋಕವೊಂದು ನೆನಪಾಗುತ್ತದೆ—

ವಿಪ್ರಾಸ್ಮಿನ್ ನಗರೇ ಮಹಾನ್ ಕಥಯ ಕಃ,
ತಾಲದ್ರುಮಾಣಾಂ ಗಣಃ ।
ಕೋ ದಾತಾ, ರಜಕೋ ದದಾತಿ ವಸನಂ ಪ್ರಾತರ್ಗೃಹೀತ್ವಾ ನಿಶಿ ॥

ಕೋ ದಕ್ಷಃ. ಪರದಾರ ವಿತ್ತ ಹರಣೇ ಸರ್ವೋಽಪಿ ದಕ್ಷೋ ಜನಃ ।
ಕಸ್ಮಾಜ್ಜೀವಸಿ ಹೇ ಸಖೇ ವಿಷಕ್ರಿಮಿ ನ್ಯಾಯೇನ
ಜೀವಾಮ್ಯಹಮ್ ॥

ದಾರಿಹೋಕರನೊಬ್ಬನು ಒಂದು ಊರಿನಲ್ಲಿ ಬ್ರಾಹ್ಮಣನೊಬ್ಬನಿಗೆ ಕೇಳಿದನಂತೆ. 'ಈ ಊರಿನಲ್ಲಿ ಮಹೋನ್ನತ ವ್ಯಕ್ತಿ ಯಾರು ?' ಅದಕ್ಕೆ 'ತಾಳೆಯ ಮರ' ಎಂದು ಉತ್ತರ ಬಂದಿತಂತೆ. 'ಯಾರು ಕೊಡುಗೈ ದೊರೆಗಳು ?' ಎಂಬುದಕ್ಕೆ 'ಮಡಿವಾಳನು ಮುಂಜಾನೆ ಮಲಿನ ವಸ್ತ್ರಗಳನ್ನು ತೆಗೆದುಕೊಂಡು ಹೋಗಿ, ಸಂಜೆಗೆ ಸ್ವಚ್ಛಮಾಡಿ ತಂದುಕೊಡುತ್ತಾನೆ' ಎಂದನಂತೆ. 'ಇಲ್ಲಿ ಯಾರು ದಕ್ಷರು ?' ಎಂಬ ಪ್ರಶ್ನೆಗೆ 'ಪರಸ್ತ್ರೀ ಹಾಗು ಪರಧನ ಹರಣಕಾರ್ಯದಲ್ಲಿ ಎಲ್ಲರೂ ದಕ್ಷರು' ಎಂದು ಉತ್ತರ ಬಂದಿತಂತೆ. 'ಹಾಗಾದರೆ ಇಂಥ ಹೀನವಾದ ಊರಿನಲ್ಲಿ ನೀನು ಹೇಗೆ ಬದುಕಿರುವಿ ?' ಎಂದು ಕೇಳಿದಾಗ, 'ವಿಷದಲ್ಲಿಯೂ ಜೀವಿಸಿರುವ ಕ್ರಿಮಿಗಳಂತೆ, ಇಂಥ ವಿಷಮಯ ವಾತಾವರಣದಲ್ಲಿಯೂ ಬದುಕಿದ್ದೇನೆ' ಎಂದು ಉತ್ತರಿಸಿದನಂತೆ.

ಈಗ ನಮ್ಮ ದೇಶದ ಪರಿಸ್ಥಿತಿಯು ಇದಕ್ಕೂ ಹೆಚ್ಚು ಭಿನ್ನವಾಗಿಲ್ಲವೆಂದು ಅದೆಷ್ಟೋ ನಿರ್ಭೀತ ಪತ್ರಕಾರರು ಬರೆಯುತ್ತಾರೆ. ಯಾವಾಗ ಈ ದೇಶಕ್ಕೆ ಚಾಣಕ್ಯನ ಅಭಿಪ್ರಾಯದಲ್ಲಿ ವಾಸ್ತವ್ಯಕ್ಕೆ ಯೋಗ್ಯವಾದದ್ದೆಂದು ಕರೆಯಿಸಿಕೊಳ್ಳುವ ಪರಿಸ್ಥಿತಿ ಬರುವುದೋ ಅದಕ್ಕಾಗಿ ಕಾಯಬೇಕಾಗಿದೆ.

## ೪೨೬. ಜನಪದಾರ್ಥಂ ಗ್ರಾಮಂ ತ್ಯಜೇತ್
## ೪೨೭. ಗ್ರಾಮಾರ್ಥಂ ಕುಟುಂಬಃ ತ್ಯಜ್ಯತೇ

ಮಗನಾದರೂ ದುಷ್ಟನಾದ ದುರ್ಯೋಧನನನ್ನು ತ್ಯಜಿಸಬೇಕೆಂದು ಧೃತರಾಷ್ಟ್ರನಿಗೆ ಮಹಾಭಾರತದಲ್ಲಿ ಉಪದೇಶ ಮಾಡಲಾಗಿದೆ. ಆ ಸಂದರ್ಭದಲ್ಲಿ—

ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥ್ವೀಂ ತ್ಯಜೇತ್ ॥

ಎಂದು ಶಾಸ್ತ್ರಾಧಾರವನ್ನು ಕೊಡಲಾಗಿದೆ.

ಒಬ್ಬ ದುಷ್ಟನಿಂದ ಕುಲವೇ ಹಾಳಾಗುವ ಪ್ರಸಂಗದಲ್ಲಿ, ಆ ಕುಲವನ್ನು ಉಳಿಸಲು ದುಷ್ಟನನ್ನು ತ್ಯಜಿಸಬೇಕು ಅಥವಾ ಕುಲದ ಕಲ್ಯಾಣಕ್ಕಾಗಿ ವ್ಯಕ್ತಿಗತ ಸ್ವಾರ್ಥವನ್ನು ಬದಿಗಿಡಬೇಕು. ಹಾಗೆಯೇ ಒಂದು ಊರಿನ ಕಲ್ಯಾಣಕ್ಕಾಗಿ ಕುಲದ ಸ್ವಾರ್ಥವನ್ನೂ, ದೇಶದ ಕಲ್ಯಾಣಕ್ಕಾಗಿ ಊರಿನ ಸ್ವಾರ್ಥವನ್ನೂ, ಆತ್ಮಸಾಕ್ಷಾತ್ಕಾರಕ್ಕಾಗಿ ಈ ಭವಲೋಕದ ಭೋಗಾಪೇಕ್ಷೆಗಳನ್ನೂ ತ್ಯಜಿಸಬೇಕು ಎಂದು ಉಪದೇಶಿಸುವ ಈ ಶ್ಲೋಕವು ಒಂದು ಉದಾತ್ತ ತತ್ತ್ವವನ್ನು ಬೋಧಿಸುತ್ತದೆ. ಅಲ್ಪತ್ಯಾಗದಿಂದಲೂ ಕೂಡ ಮಹತ್ಕಲ್ಯಾಣವನ್ನು ಸಾಧಿಸಲು ಸಾಧ್ಯವೆನ್ನುವುದೇ ತಾತ್ಪರ್ಯ. ದೇಶದ ಸಮಗ್ರತೆ, ಐಕ್ಯ ಹಾಗು ಕಲ್ಯಾಣಕ್ಕಾಗಿ ಭಾರತದಲ್ಲಿಯ ವಿವಿಧ ರಾಜ್ಯಗಳು ನೀರು, ನೆಲಗಳಿಗಾಗಿ ಪರಸ್ಪರರಲ್ಲಿಯ ಶತ್ರುತ್ವವನ್ನು ಬೆಳೆಸಿಕೊಂಡು ಹೋಗುವುದನ್ನು ಬಿಡಬೇಕೆಂಬ ಬೋಧೆಯು ಇಲ್ಲಿ ಅಡಕವಾಗಿದೆ.

## ೪೨೮, ಉಪಸ್ಥಿತ ವಿನಾಶಃ ಪಥ್ಯ ವಾಕ್ಯಂ ನ ಶೃಣೋತಿ

'ವಿನಾಶಕಾಲೇ ವಿಪರೀತಬುದ್ಧಿಃ' ಎಂಬ ಸುಭಾಷಿತವೇ ಇಲ್ಲಿ ಬೇರೆ ಶಬ್ದಗಳಲ್ಲಿ ಹೇಳಲ್ಪಟ್ಟದೆ. ಮರಣ ಸಮೀಪಿಸಿದ ರೋಗಿಗೆ ಔಷಧವು ಸೇರುವುದಿಲ್ಲ. ಹಾಗೆಯೇ ವಿನಾಶವು ಸನ್ನಿಹಿತವಾದಾಗ, ಸದುಪದೇಶವು ಪ್ರಯೋಜನಕಾರಿಯಾಗಲಾರದು. ಸೀತಾಪಹರಣದ ಪ್ರಸಂಗದಲ್ಲಿ ರಾವಣನಿಗೆ ಮಾರೀಚನ ಉಪದೇಶವು ಸೇರಲಿಲ್ಲ. ಸೀತಾಮಾತೆಯು ಕಾಂಚನಮೃಗದ ಮೇಲೆ ಮೋಹ ಬೇಡವೆಂದರೂ ಅದನ್ನು ಬಿಡಲಿಲ್ಲ. ಕಾಲವು ಎಷ್ಟು ಪ್ರಬಲವಾಗಿರುತ್ತದೆ ಎಂಬುದಕ್ಕೆ ಇವೆಲ್ಲ ಸಾಕ್ಷಿ.

## ೪೨೯. ನಾಸ್ತಿ ದೇಹಿನಾಂ ಸುಖದುಃಖಾಭಾವಃ

ಮನುಷ್ಯರು ದೇಹಧಾರಿಗಳಾದ್ದರಿಂದ ಸುಖ–ದುಃಖಗಳಿಂದ ಪಾರಾಗುವುದು ಅಸಾಧ್ಯ ಎಂಬುದನ್ನು ಈ ಸೂತ್ರವು ತಿಳಿಯಪಡಿಸುತ್ತದೆ. 'ಆತ್ತೋ ವೈ ಸಶರೀರಃ ಪ್ರಿಯಾಪ್ರಿಯಾಭ್ಯಾಂ. ನ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋಃ ಅಪಹತಿರಸ್ತಿ. ಅಶರೀರಂ ವಾ ವಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ' ಎಂದು ಪ್ರಜಾಪತಿಯು ಛಾಂದೋಗ್ಯ ಉಪನಿಷತ್ತಿನಲ್ಲಿ ಇಂದ್ರನಿಗೆ ಉಪದೇಶಿಸಿದ್ದನ್ನು ಇಲ್ಲಿ ಸ್ಮರಿಸಬಹುದು. ಶರೀರವುಳ್ಳವನು ಪ್ರಿಯಾಪ್ರಿಯಗಳಿಂದ ಗ್ರಸ್ತನಾಗಿರುತ್ತಾನೆ. ಅರ್ಥಾತ್ ಶರೀರದ ವಿಷಯಕ್ಕೆ ತನ್ನದೆಂಬ ಅಭಿಮಾನವಿರುವ ವರೆಗೆ ಪ್ರಿಯ ಅಪ್ರಿಯಗಳಿಂದ ಬಿಡುಗಡೆಯಿಲ್ಲ. ದೇಹಭಾವನೆ ಅಳಿಸಿ ಆತ್ಮಭಾವನೆಯು ಜಾಗೃತವಾದಾಗ ಮಾತ್ರ ಪ್ರಿಯಾಪ್ರಿಯಗಳ ಸೋಂಕು ಉಳಿಯಲಾರದು. ಇಲ್ಲಿ ಸುಖ–ದುಃಖ ಶಬ್ದಗಳಿಗೆ ಬದಲಾಗಿ ಪ್ರಿಯ ಅಪ್ರಿಯ ಶಬ್ದಗಳು ಉಪಯೋಗಿಸಲ್ಪಟ್ಟಿವೆ. ಚಾಣಕ್ಯನ ದಾರ್ಶನಿಕ ದೃಷ್ಟಿಯು ಇಲ್ಲಿ ಮೂಡಿಬಂದಿದೆ. ಇನ್ನೂ ಹಲವು ಸೂತ್ರಗಳಲ್ಲಿ ಇದೇ ಮುಂದುವರಿಯುತ್ತದೆ.

## ೪೩೦. ಜನ್ಮಮರಣಾದಿಷು ದುಃಖಮೇವ

ಜನ್ಮ–ಮರಣಗಳೇ ದುಃಖಕ್ಕೆ ಮೂಲಕಾರಣ. ಏಕೆಂದರೆ, ಜನ್ಮವೆಂದರೇನೇ ದೇಹಪ್ರಾಪ್ತಿ. ಆ ದೇಹದಿಂದಲೇ ಪುಣ್ಯ–ಪಾಪ ಕರ್ಮಗಳು ಘಟಿಸುತ್ತವೆ. ಪುಣ್ಯದಿಂದಲೂ ಶಾಶ್ವತ ಸುಖವಿಲ್ಲ. ಪಾಪವಂತೂ ದುಃಖವನ್ನೇ ತರುತ್ತದೆ. ಹೀಗಾಗಿ ಜನ್ಮ–ಮರಣಗಳೆಂದರೆ ದುಃಖಕ್ಕೆ ನಿಮಂತ್ರಣ ಕೊಟ್ಟಂತೆಯೇ ಸರಿ. ಜನ್ಮದ ನಂತರ ಮರಣ. ಮರಣದ ನಂತರ ಜನ್ಮ ಹೀಗೆ ಈ ಚಕ್ರವು ಸದಾ ತಿರುಗುತ್ತಲೇ ಇರುತ್ತದೆ.

## ೪೩೧. ತೇಭ್ಯಃ ತತರ್ಜಂ ಪ್ರಯತೇತ

ವಿವೇಕಿಯಾದವನು ಪುಣ್ಯ-ಪಾಪಗಳ ಬೆನ್ನುಹತ್ತದೆ ಜನ್ಮ-ಮರಣ-ಗಳಿಗೆ ತುತ್ತಾಗಿರುವ ಈ ಮೃತ್ಯುಲೋಕದಲ್ಲಿಯ ಜೀವನದಿಂದ ಪಾರಾಗುವ ದಾರಿಯನ್ನು ಶೋಧಿಸುವುದೇ ಶ್ರೇಯಸ್ಕರವೆಂದು ಈ ಸೂತ್ರವು ಬೋಧಿ-ಸುತ್ತದೆ.

## ೪೩೨. ಸರ್ವಮನಿತ್ಯಂ ಭವತಿ

ಭಗವದ್ಗೀತೆಯಲ್ಲಿ ಹೇಳಿದ 'ಅನಿತ್ಯಮಸುಖಂ ಲೋಕಂ' ಎಂಬ ತತ್ವವನ್ನೇ ಚಾಣಕ್ಯನು ಈ ಸೂತ್ರದಲ್ಲಿ, ಜಗತ್ತು ಅಶಾಶ್ವತವಾದದ್ದು. ಇಲ್ಲಿ ಶಾಶ್ವತ ಸುಖವೆಂಬುದು ಇಲ್ಲ ಎಂದು ಸ್ಪಷ್ಟಪಡಿಸಿದ್ದಾನೆ. ಜಗತ್ತಿನಲ್ಲಿ ಆಯುಷ್ಯ, ಆರೋಗ್ಯ, ಸೌಖ್ಯ ಇವೆಲ್ಲವೂ ಕಾಲಮರ್ಯಾದೆಗೆ ಸೀಮಿತ-ವಾದವುಗಳು. ಮನುಷ್ಯರೂಪದಿಂದ ಅವತರಿಸಿದ ಸಾಕ್ಷಾತ್ ಭಗವಂತನು ಕೂಡ ಈ ನಿಯಮಗಳಿಗೆ ಬದ್ಧನಾಗಿದ್ದಾನೆ, ಅಂದಮೇಲೆ ಸಾಮಾನ್ಯರ ಪ್ರಶ್ನೆಯೇ ಇಲ್ಲ.

## ೪೩೩. ಸ್ವಯಮೇವ ದುಃಖಮಧಿಗಚ್ಛತಿ

ಮನುಷ್ಯನಿಗೆ ಉಂಟಾಗುವ ಸುಖ-ದುಃಖಗಳಿಗೆ ಬಾಹ್ಯಕಾರಣಗಳೇನೂ ಇರದೆ, ಸ್ವತಃ ಅವನೇ ಅದಕ್ಕೆ ಕಾರಣ. ಏಕೆಂದರೆ, ದೇಹಸಂಬಂಧದಿಂದ ಘಟಿಸಿದ ಕರ್ಮಗಳ ಫಲವನ್ನೇ ಅವನು ಅನುಭವಿಸುತ್ತಾನೆ. ತನ್ನ ಸುಖ-ದುಃಖಗಳಿಗಾಗಿ ಯಾರಾಗಲಿ ಬೇರೊಬ್ಬರನ್ನು ದೂಷಿಸದೆ, ಸಚ್ಚಾರಿತ್ರದಿಂದ ಇದ್ದು, ಜೀವನವನ್ನು ಸಾರ್ಥಕಮಾಡಿಕೊಳ್ಳಬೇಕೆಂಬ ಸಂದೇಶವು ಇಲ್ಲಿ ಇದೆ.

## ೪೩೪. ಕ್ರಿಮಿಶಕೃತ್ ಮೂತ್ರಭಾಜನಂ ಶರೀರಂ ಪುಣ್ಯಪಾಪ ಹೇತುಃ

ಪುಣ್ಯ-ಪಾಪಗಳಿಗೆ ಕಾರಣೀಭೂತವಾದದ್ದು ಶರೀರ. ಇದು ಕ್ರಿಮಿ, ಮಲ, ಮೂತ್ರಗಳಿಂದ ವ್ಯಾಪಿಸಲ್ಪಟ್ಟಿದ್ದು. ಜಿಗುಪ್ಸೆಗೆ ಯೋಗ್ಯವಾದದ್ದು. ಆದರೆ ಜನರು ಇದರ ದೋಷಗಳನ್ನು ಮರೆತು, ಇದು ಶಾಶ್ವತವೆಂಬ ಭ್ರಮೆಯಲ್ಲಿ ಮೆರೆಯುತ್ತಾರೆ. ತರತರದಿಂದ ಸಿಂಗರಿಸುತ್ತಾರೆ. ಮುಪ್ಪು ಆವರಿಸಿದಾಗ ಮಾತ್ರ ಅದರ ನಿಜವಾದ ಸ್ವರೂಪವು ತಿಳಿಯುತ್ತದೆ. 'ಜರಾ' ಎಂದರೆ ಮುಪ್ಪು. ರೂಪ ಹಾಗು ವರ್ಣ ( ಬಣ್ಣ ) ಗಳನ್ನು ನಾಶಮಾಡಿ, ಶರೀರವನ್ನು ಕ್ಷೀಣಿಸುತ್ತದೆ ಎಂಬುದು ಅನುಭವವೇದ್ಯವಾದ ಮಾತು. ಸಹಜವಾಗಿಯೇ ದೇಹದ ವಿಷಯಕ್ಕೆ ಜಿಗುಪ್ಸೆಯನ್ನುಂಟುಮಾಡುವ ಶ್ಲೋಕವೊಂದನ್ನು ಇಲ್ಲಿ ಉದಾಹರಿಸಿದರೆ ಒಳ್ಳೆಯದು.

ಯದಿನಾಮಾಸ್ಯ ಕಾಯಸ್ಯ ಯದಂತಸ್ತದ್ಬಹಿರ್ಭವೇತ್ ।
ದಂಡಮಾದಾಯ ಲೋಕೋಯಂ ಶುನಃ ಕಾಕಾಂಶ್ಚ ವಾರಯೇತ್॥

ಒಂದು ವೇಳೆ ದೇಹದ ಒಳಭಾಗವು ಹೊರಗೆ ಇದ್ದು, ಹೊರಗಿನದು ಒಳಗೆ ಇದ್ದರೆ, ಕೈಯಲ್ಲಿ ದೊಣ್ಣೆ ಹಿಡಿದು ನಾಯಿ ಹಾಗು ಕಾಗೆಗಳನ್ನು ಹೊಡೆಯಬೇಕಾಗುತ್ತಿತ್ತು. ಏಕೆಂದರೆ ಹೊರಗಣ್ಣಿಗೆ ಕಾಣುವ ನಮ್ಮ ದೇಹದ ಮಾಂಸವನ್ನು ಭಕ್ಷಿಸಲು ಅವು ಹಾತೊರೆಯುವುದು ಅನಿವಾರ್ಯವಾಗುತ್ತಿತ್ತು. ಈ ದೇಹಕ್ಕೆ ಅತಿಯಾಗಿ ಅಪರೂಪ ಮಾಡಬಾರದೆಂಬುದೇ ತಾತ್ಪರ್ಯ.

## ೪೩೫. ಮಾತರಮಿವ ವತ್ಸಃ ಸುಖದುಃಖಾನಿ ಕರ್ತಾರಮೇವಾನುಗಚ್ಛಂತಿ

ಕರ್ಮಗಳು ಎಂತಹ ಪ್ರಸಂಗಗಳಲ್ಲಿಯೂ ಮನುಷ್ಯನ ಬೆನ್ನು ಬಿಡಲಾರವು ಎಂದು ಬಿಂಬಿಸುವ ಈ ಸೂತ್ರವು—

ಯಥಾ ಧೇನು ಸಹಸ್ರೇಷು ವತ್ಸೋ ವಿಂದತಿ ಮಾತರಮ್ ।
ಏವಂ ಪೂರ್ವಕೃತಂ ಕರ್ಮ ಕರ್ತಾರಮನುಗಚ್ಛತಿ ॥

ಎಂಬ ಪ್ರಸಿದ್ಧ ಶ್ಲೋಕದ ಮರ್ಮವನ್ನೇ ಹೇಳುತ್ತದೆ. ಸಹಸ್ರಾರು ಹಸುಗಳಲ್ಲಿ ಕರುವು ತನ್ನ ತಾಯಿಯನ್ನು ತಪ್ಪದೇ ಗುರುತಿಸುವಂತೆ, ನಾವು ಮಾಡಿದ ಕರ್ಮಗಳು ಎಂದೂ ನಮ್ಮ ಬೆನ್ನು ಬಿಡಲಾರವು ಎಂಬ ಶಾಶ್ವತ ಸತ್ಯವನ್ನು ಈ ಶ್ಲೋಕವು ವಿವರಿಸುತ್ತದೆ.

## ೪೩೬. ಸ್ವರ್ಗಸ್ಥಾನಂ ನ ಶಾಶ್ವತಂ ಯಾವತ್ಪುಣ್ಯಫಲಮ್

ಸ್ವರ್ಗಸುಖವು ಅಪೇಕ್ಷಣೀಯವೆನಿಸಿದರೂ ಅದು ಶಾಶ್ವತವಲ್ಲ. ಪುಣ್ಯ ತೀರುವ ವರೆಗೆ ಮಾತ್ರ ಅಲ್ಲಿ ವಾಸ. ಬ್ಯಾಂಕಿನಲ್ಲಿ ನೀವು ಇಟ್ಟ ಹಣವು ತೀರಿಹೋದ ಮೇಲೆ ಹೇಗೆ ನಮಗೆ ಅಲ್ಲಿಂದ ಏನೂ ದೊರೆಯಲಾರದೋ, ಅದೇ ರೀತಿಯಾಗಿ ಪುಣ್ಯ ತೀರಿದ ಮೇಲೆ ಸ್ವರ್ಗದಿಂದ ಮನುಷ್ಯರು ಪುನಃ ಮರ್ತ್ಯಲೋಕಕ್ಕೆ ನೂಕಲ್ಪಡುತ್ತಾರೆ. ಈ ಮಾತನ್ನು ಭಗವದ್ಗೀತೆಯಲ್ಲಿ 'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ' ಎಂಬ ಶಬ್ದಗಳಲ್ಲಿ ಬೋಧಿಸಲಾಗಿದೆ.

## ೪೩೭. ನ ಸಂಸಾರಭಯಂ ಜ್ಞಾನವತಾಮ್

ಜ್ಞಾನಿಗಳಿಗೆ ಸಂಸಾರದ ಭಯವಿಲ್ಲ. ಅಂದರೆ ಸುಖ, ದುಃಖ, ಪುಣ್ಯ, ಪಾಪ, ಅಶರೀರತ್ವ, ಸಶರೀರತ್ವ—ಇತ್ಯಾದಿ ದ್ವಂದ್ವಗಳನ್ನು ದಾಟುವುದು ಜ್ಞಾನಿಗೆ ಮಾತ್ರ ಸಾಧ್ಯ. ಇಲ್ಲಿ ಜ್ಞಾನವೆಂದರೆ ಆತ್ಮಜ್ಞಾನ. ಅರ್ಥಾತ್ ಆತ್ಮನಿತ್ಯತ್ವ ಹಾಗು ಸಂಸಾರದ ಅನಿತ್ಯತ್ವಗಳನ್ನು ಖಚಿತವಾಗಿ ತಿಳಿದು-

ಕೊಂಡು, ಆ ರೀತಿ ವ್ಯವಹರಿಸುವವನೇ ಜ್ಞಾನಿ. ಇಂಥವನಿಗೆ ಅಶಾಶ್ವತವಾದ ಸ್ವರ್ಗದ ಆಸೆ ಇರಲಾರದು. ಅವನಿಗಾಗಿ ಕಾದಿಟ್ಟಿದ್ದು ಮೋಕ್ಷ ಅಥವಾ ನಿರ್ವಾಣ. ಇದನ್ನೇ 'ಜ್ಞಾನಾದೇವತು ಕೈವಲ್ಯಂ' ಎಂದು ಪ್ರತಿಪಾದಿಸಲಾಗುತ್ತದೆ.

## ೪೩೮. ವಿಜ್ಞಾನ ದೀಪೇನ ಸಂಸಾರಭಯಂ ನಿವರ್ತತೇ

ಜ್ಞಾನದ ಮಹತ್ವವು ದೃಷ್ಟಾಂತರೂಪದಲ್ಲಿ ಇಲ್ಲಿ ವಿವರಿಸಲ್ಪಟ್ಟಿದೆ. ಅಜ್ಞಾನವೆಂದರೆ ಕತ್ತಲೆ ಇದ್ದಂತೆ. ಅದು ದೀಪದಿಂದ ಹೊಡೆದೋಡಿಸಲ್ಪಡುವಂತೆ, ವಿಜ್ಞಾನವೆಂಬ ದೀಪದ ಸಹಾಯದಿಂದ ಸಂಸಾರಭಯರೂಪಿಯಾದ ಅಜ್ಞಾನವು ನಿವಾರಿಸಲ್ಪಡುತ್ತದೆ. ಸಂಸಾರಭಯಕ್ಕೆ ಆತ್ಮಜ್ಞಾನದ ಅಭಾವವೇ ಕಾರಣವೆಂದು ಈಗಾಗಲೇ ಹೇಳಲಾಗಿದೆ. ಇಲ್ಲಿ 'ವಿಜ್ಞಾನ' ಶಬ್ದಕ್ಕೆ ಶಾಸ್ತ್ರೀಯವಾದ, ತರ್ಕಬದ್ಧವಾದ ಸಮ್ಯಕ್‌ಜ್ಞಾನವೆಂದು ಅರ್ಥವಾಗುವುದು. ಭೌತಿಕ ಅಥವಾ ರಸಾಯನಶಾಸ್ತ್ರವೆಂಬ ಅರ್ಥಮಾಡಿದರೆ ಧಾರ್ಷ್ಟ್ಯವಾದೀತು.

## ೪೩೯. ದುಃಖಾನಾಂ ಔಷಧಂ ನಿರ್ವಾಣಮ್

ನಿರ್ವಾಣವೇ ದುಃಖಕ್ಕೆ ಔಷಧವೆಂದರೆ ಮೋಕ್ಷಪ್ರಾಪ್ತಿಯಾದಾಗ ಮಾತ್ರ ದುಃಖನಿವೃತ್ತಿಯೆಂದು ಇಲ್ಲಿ ಹಿಂದಿನ ಸೂತ್ರದಲ್ಲಿಯ ವಿಚಾರವನ್ನೇ ಬೇರೆ ಶಬ್ದಗಳಲ್ಲಿ ಹೇಳಲಾಗಿದೆ. ಸಂಸಾರದ ಭಯವಿದ್ದಲ್ಲಿ ದುಃಖ, ಜ್ಞಾನದ ಫಲವೇ ನಿರ್ವಾಣ. ಆದರಿಂದಲೇ ದುಃಖನಿವೃತ್ತಿ.

ನಿರ್ವಾಣವನ್ನು ಗಂಗಾಪ್ರವಾಹದಷ್ಟು ಪವಿತ್ರ, ಹಿಮಾಲಯದಷ್ಟು ಉನ್ನತ, ಜೇನುಸವಿದಂತೆ ಲಭಿಸುವ ಆನಂದಾನುಭವ—ಎಂದು ಬಣ್ಣಿಸ-

ಲಾಗಿದೆ. ನಿರ್ವಾಣ ಶಬ್ದವು ಬೌದ್ಧಮತಕ್ಕೆ ಮೀಸಲಾದದ್ದಲ್ಲ. ಬೌದ್ಧರು ಅವನ್ನು ವೈದಿಕ ಧರ್ಮದಿಂದ ಎತ್ತಿಕೊಂಡಂತಿದೆ. ಗೀತೆಯಲ್ಲಿ 'ಲಭಂತೇ ಬ್ರಹ್ಮ ನಿರ್ವಾಣಮ್', 'ಬ್ರಹ್ಮನಿರ್ವಾಣಮೃಚ್ಛತಿ' ಎಂದು ಹೇಳಿದ್ದನ್ನು ಇಲ್ಲಿ ಸ್ಮರಿಸುವುದು ಅವಶ್ಯ.

## ೪೪೦. ತಿಲಮಾತ್ರಮಪ್ಯುಪಕಾರಂ ಶೈಲವತ್ ಮನ್ಯತೇ ಸಾಧುಃ

ಸಜ್ಜನರು ತಮಗೆ ಬೇರೆಯವರು ಮಾಡಿದ ಅತ್ಯಲ್ಪ ಉಪಕಾರವನ್ನು ಅತಿ ದೊಡ್ಡದು (ಪರ್ವತಪ್ರಾಯವಾದದ್ದು) ಎಂದು ತಿಳಿಯುತ್ತಾರೆ. ಸಜ್ಜನರಲ್ಲಿ ಕೃತಜ್ಞತಾಭಾವವು ಪರಮಾವಧಿಯನ್ನು ಮುಟ್ಟಿರುತ್ತದೆ ಎಂಬುದಕ್ಕೆ ಇದೇ ಸಾಕ್ಷಿ. ಇದೇ ಮಾತನ್ನೇ ಭರ್ತೃಹರಿಯು 'ಪರಗುಣ ಪರಮಾಣೂನ್ ಪರ್ವತೀಕೃತ್ಯ ಸಂತಃ' ಎಂಬ ಶಬ್ದಗಳಿಂದ ಬಣ್ಣಿಸಿದ್ದಾನೆ. ಬೇರೆಯವರಿಂದಾದ ಪರಮಾಣುವಿನಷ್ಟು ನಗಣ್ಯ ಉಪಕಾರವನ್ನು ಪರ್ವತಪ್ರಾಯವಾದದ್ದೆಂದು ತಿಳಿಯುವುದು ಸಾಧುಜನರ ಸ್ವಭಾವ.

## ೪೪೧. ಸ್ವಲ್ಪಮಪ್ಯುಪಕಾರಕೃತೇ ಪ್ರತ್ಯುಪಕಾರಂ ಕರ್ತುಂ ಆರ್ಯಃ ನ ಸ್ವಪಿತಿ

ಸಜ್ಜನರು ತಮಗೆ ಹೆರವರಿಂದಾದ ಅತ್ಯಲ್ಪ ಉಪಕಾರವನ್ನು ಎಂದು ತೀರಿಸುವೆವೋ ಎಂಬ ಚಿಂತೆಯಿಂದ ನಿದ್ರೆಯನ್ನು ಕೂಡ ಮಾಡುವುದಿಲ್ಲ. ಅರ್ಥಾತ್ ಕೃತಜ್ಞರೆನಿಸಿಕೊಳ್ಳುವುದಕ್ಕಾಗಿ ಅವ್ಯಾಹತವಾಗಿ ಪ್ರಯತ್ನಿಸುತ್ತಾರೆ. ಎರವನೆಯವರ ಋಣ ತಮ್ಮ ಮೇಲೆ ಉಳಿಯುವುದು ಬೇಡ

ಎನ್ನುವ ಸದ್ಭಾವನೆಯೇ ಇದಕ್ಕೆ ಕಾರಣ. ಸಾಕ್ರೆಟಿಸ್‌ನು ( ಗ್ರೀಕ್ ದೇಶದ ಮಹಾ ತತ್ತ್ವಜ್ಞಾನಿ ) ತನಗೆ ನೀಡಿದ ಮರಣದಂಡನೆಯ ಶಿಕ್ಷೆಯನ್ನು ಅನುಭವಿಸುವ ಮೊದಲು, ತನ್ನ ಸ್ನೇಹಿತನಿಗೆ, " ನಾನು ಇಂಥ ಒಬ್ಬ ವ್ಯಕ್ತಿಯಿಂದ ಒಂದು ಕೋಳಿಯನ್ನು ಕೊಂಡುಕೊಂಡಿದ್ದು. ಅದರ ಹಣವನ್ನು ಇನ್ನೂ ತೀರಿಸಿಲ್ಲ. ಅದಕ್ಕೆ ಈ ಹಣವನ್ನು ಅವನಿಗೆ ಕೊಡು " ಎಂದು ಹೇಳಿ ವಿಷಪ್ರಾಶನ ಮಾಡಿದನಂತೆ.

ಕೇವಲ ಮೋಜಿಗಾಗಿ ಹೇಳುವುದೆಂದರೆ, ಕೆಲವೊಂದು ವಿಶಿಷ್ಟ ತರಗತಿಯ ಜನರು ಬೇರೆಯವರ ಮನೆಯಲ್ಲಿ ಒಂದು ಕಪ್ಪು ಚಹ ಕುಡಿದರೆ, ಇಪ್ಪತ್ತನಾಲ್ಕು ಗಂಟೆಗಳಲ್ಲಿ ಏನಾದರೂ ಮಾಡಿ ಅದನ್ನು ತಿರುಗಿಸಿಯೇ ಬಿಡುತ್ತಾರೆ.

## ೪೪೨. ಉಪಕಾರೋ ಅನಾರ್ಯೇಷ್ವಕರ್ತವ್ಯಃ

ಅನಾರ್ಯ ಅರ್ಥಾತ್ ನೀಚರಿಗೆ ಉಪಕಾರ ಮಾಡಬಾರದು. ಅವರು ಕೃತಘ್ನರು. ಹಾವಿಗೆ ಹಾಲೆರೆದಂತೆ ಅದರ ಪರಿಣಾಮವು ವಿಪರೀತವೇ ಆಗುತ್ತದೆ. ಕೃತಘ್ನರಿಗೆ ಉಪಕಾರ ಮಾಡಿದ ಮೂರ್ಖತನದಿಂದಾಗಿ ಅನೇಕ ರಾಜರು ಹಾಳಾಗಿಹೋದದ್ದನ್ನು ಇತಿಹಾಸದ ಅಭ್ಯಾಸಿಗಳು ಚೆನ್ನಾಗಿ ಬಲ್ಲರು.

## ೪೪೩. ಪ್ರತ್ಯುಪಕಾರ ಭಯಾತ್ ಅನಾರ್ಯಃ ಶತ್ರುರ್ಭವತಿ

ಮರಳಿ ಉಪಕಾರ ಮಾಡುವುದನ್ನು ಅರ್ಥಾತ್ ಉಪಕಾರ ತಿರುಗಿಸುವುದನ್ನು ತಪ್ಪಿಸಿಕೊಳ್ಳುವುದಕ್ಕಾಗಿ ನೀಚರು ಉಪಕಾರ ಮಾಡಿದವ-

ರೊಂದಿಗೆ ಶತ್ರುಭಾವದಿಂದ ನಡೆದುಕೊಳ್ಳಲು ಪ್ರಯತ್ನಿಸುತ್ತಾರೆ. ' ಬೇರೆ. ಯವರು ಮಾಡಿದ ಉಪಕಾರದಲ್ಲಿ ಏನೂ ದೊಡ್ಡಸ್ತಿಕೆಯಿಲ್ಲ. ಅವರು ತಮ್ಮ ಹಿತಕ್ಕಾಗಿ ನನ್ನೊಂದಿಗೆ ಹಾಗೆ ನಡೆದುಕೊಂಡಿದ್ದಾರೆ. ಅದರಿಂದ ನನಗೇನೂ ಲಾಭವಾಗಿಲ್ಲ. ' ಇತ್ಯಾದಿಯಾಗಿ ಹೇಳುತ್ತ ತಾವೇ ಒಳ್ಳೆಯವರೆಂದು ಸಾಧಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಇವರಲ್ಲಿ ಕೃತಜ್ಞತೆಯ ಅಭಾವವು ಒಂದು ರೀತಿಯ ಪಾಪವೆನಿಸಿದರೆ. ಕೃತಘ್ನತಾಭಾವವು ಆ ಪಾಪವನ್ನು ದ್ವಿಗುಣೀಕರಿಸುತ್ತದೆ.

## ೪೪೪. ದುಷ್ಕರಂ ಕರ್ಮಕಾರಯಿತ್ವಾ ಕರ್ತಾರಮವಮನ್ಯತೇ ನೀಚಃ

ಅತಿ ಕಠಿಣವಾದ ಕೆಲಸಗಳನ್ನು ಮಾಡಿಸಿಕೊಂಡು ಅರ್ಥಾತ್ ಬೇಕಾದಷ್ಟು ಸಹಾಯವನ್ನು ಪಡೆದು. ನೀಚನು ಉಪಕಾರ ಮಾಡಿದವನ ಅಪಮಾನವನ್ನು ಮಾಡಲು ಪ್ರಯತ್ನಿಸುತ್ತಾನೆ ಎಂದು ಈ ಸೂತ್ರವು ಕೃತಘ್ನನ ಮನೋವೃತ್ತಿ ಹಾಗು ಕಾರ್ಯಪ್ರವೃತ್ತಿಯನ್ನು ಸುಂದರವಾಗಿ ಬಣ್ಣಿಸುತ್ತದೆ.. ಭೀಷ್ಮಾಚಾರ್ಯರು ಶಾಂತಿಪರ್ವದಲ್ಲಿ ಕೃತಘ್ನನ ಹೆಣವನ್ನು ಕೂಡ ಮುಟ್ಟಬಾರದೆಂದು ಉಪದೇಶಿಸಿದ್ದನ್ನು ನೆನೆದರೆ. ಇವನಿಗಿಂತ ನೀಚನು ಎಲ್ಲಿಯೂ ದೊರೆಯಲಾರನೆಂಬುದು ಸ್ಪಷ್ಟವಾಗುತ್ತದೆ.

## ೪೪೫. ವಿಶ್ವಾಸಘಾತಿನೋ ನ ನಿಷ್ಕೃತಿಃ

ನಂಬಿದವರ ವಿಶ್ವಾಸಘಾತ ಮಾಡಿದವನಿಗೆ ಪ್ರಾಯಶ್ಚಿತ್ತವಿಲ್ಲ. ದೇಹಾಂತ ಅರ್ಥಾತ್ ಮರಣವೇ ಅವನಿಗೆ ಪ್ರಾಯಶ್ಚಿತ್ತವೆಂದು ಈ ಸೂತ್ರವು ತಿಳಿಯಪಡಿಸುತ್ತದೆ. ಏನೂ ಸ್ವಾರ್ಥಸಾಧನೆಯಾಗದಿದ್ದಾಗ ಕೂಡ. ಕೇವಲ

ಇನ್ನೊಬ್ಬರಿಗೆ ಪೀಡೆಯಾಗಲಿ ಎಂಬ ದುರ್ಬುದ್ಧಿಯಿಂದ ನಿಷ್ಕಾರಣವಾಗಿ ಪರರನ್ನು ಪೀಡಿಸುವವನು ಪರಮನೀಚನೆಂದು ಭರ್ತೃಹರಿಯು ಹೇಳಿದರೆ, ( ಯೇತುಘ್ನಂತಿ ನಿರರ್ಥಕಂ ಪರಹಿತಂ ತೇ ಕೇ ನ ಜಾನೀಮಹೇ ) ಕೃತಘ್ನನು ಉಪಕಾರ ಮಾಡಿದವನನ್ನು ಕೂಡ ಪೀಡಿಸಿ. ಪರಾತ್ಪರ ನೀಚನೆಂದೆನಿಸಿಕೊಳ್ಳುತ್ತಾನೆ. ಸಮಾಜವು ಇಂಥವರನ್ನು ಬಹಿಷ್ಕರಿಸುವುದೇ ಅವರಿಗೆ ಪಾಠ ಕಲಿಸಲು ಏಕಮಾತ್ರ ಉಪಾಯ.

## ೪೪೬. ನ ಕೃತಘ್ನಸ್ಯ ( ನಾ ಕೃತಜ್ಞಸ್ಯ ) ನರಕಾನ್ನಿವರ್ತನಮ್

ಸಿದ್ಧಾಂತರೂಪದಲ್ಲಿರುವ ಈ ಸೂತ್ರದಲ್ಲಿ ಇಷ್ಟೆಲ್ಲ ಚರ್ಚೆಯ ನಂತರ. ಕೃತಘ್ನನಿಗೆ ನರಕ ತಪ್ಪಿದ್ದಷ್ಟೇ ಅಲ್ಲ. ಅಲ್ಲಿಂದ ಪುನಃ ಎಂದೂ ಮೇಲಕ್ಕೇಳುವ ಸಾಧ್ಯತೆಯಿಲ್ಲ ಎಂದು ಹೇಳಲಾಗಿದೆ. ಶಾಶ್ವತ ನರಕವೇ ಅವನಿಗೆ ಏಕಮಾತ್ರ ಗತಿ.

## ೪೪೭. ನ ಕದಾಪಿ ದೇವತಾ ಅವಮಂತವ್ಯಾ

ಭಗವದಸ್ತಿತ್ವ ಹಾಗು ಪರಮೇಶ್ವರನ ಸರ್ವಶಕ್ತಿತ್ವದಲ್ಲಿ ವಿಶ್ವಾಸವಿದ್ದ ಚಾಣಕ್ಯನು ದೇವತಾ ಅವಹೇಳನೆಯನ್ನು ಸರ್ವಥಾ ಮಾಡಕೂಡದೆಂದು ಈ ಸೂತ್ರದಲ್ಲಿ ಉಪದೇಶಿಸಿದ್ದಾನೆ. ಕೃತಘ್ನತೆಗೆ ಇದಕ್ಕೂ ಹೆಚ್ಚಿನ ಬೇರೆ ಉದಾಹರಣೆ ಇರಲಾರದೆಂಬುದೇ ಇದರ ತಾತ್ಪರ್ಯ. ನಮ್ಮದೇ ಆದ ಕರವಸ್ತ್ರವು ಕೈಜಾರಿ ನೆಲಕ್ಕೆ ಬಿದ್ದಾಗ, ಅದನ್ನು ಎತ್ತಿ ನಮಗೆ ಕೊಟ್ಟರೆ, ' Thanks ' ಎಂದು ಹೇಳುವ ನಾವು, ' ಸುಜಲಾಂ ಸುಫಲಾಂ ' ಎಂದೆನಿಸುವ ಸಂಪದ್ಭರಿತವಾದ ಈ ಭೂಮಿಯನ್ನೇ ನಮಗಾಗಿ ಭಗವಂತನು ಸೃಷ್ಟಿಸಿ-

ದಾಗ, ಅವನನ್ನು ಅವಮಾನಿಸುವುದು ಎಷ್ಟು ಹೇಯವಾದದ್ದು ಎಂಬು-
ವನ್ನು ತಿಳಿದುಕೊಳ್ಳುವುದು ಅವಶ್ಯ. ಆದ್ದರಿಂದ ಭಕ್ತಿ ಹಾಗು ಉಪಾಸನ-
ಗಳಿಂದ ಭಗವದನುಗ್ರಹಕ್ಕೆ ಪಾತ್ರವಾಗುವುದೇ ಜೀವನದ ಸಾರ್ಥಕ್ಯ-
ವನ್ನು ಪಡೆಯುವ ಏಕಮಾತ್ರ ಉಪಾಯವೆಂಬುದು ಈ ಸೂತ್ರದಲ್ಲಿ ಧ್ವನಿತ-
ವಾಗಿದೆ.

## ೪೪೮. ಸ್ತುತಾ ಅಪಿ ದೇವತಾಃ ತುಷ್ಯಂತಿ

ಸ್ತುತಿಯಿಂದ ದೇವತೆಗಳು ಸಂತುಷ್ಟರಾಗುತ್ತಾರೆ. ಇಡೀ ಋಗ್ವೇದ-
ವೆಲ್ಲ ದೇವತಾಸ್ತುತಿರೂಪದಲ್ಲಿಯೇ ಇದೆ. ಸ್ವಾಧ್ಯಾಯವೆಂದು ಅದನ್ನು
ನಿತ್ಯದಲ್ಲಿ ಸಾಧ್ಯವಿದ್ದಷ್ಟು ಪಠಿಸುವುದು ಕರ್ತವ್ಯ. ಇದು ( ಋಷಿ ) ಬ್ರಹ್ಮ
ಯಜ್ಞವೆನಿಸಿಕೊಂಡು ಋಣತ್ರಯಗಳಲ್ಲಿ ಒಂದಾದ ವೇದದ್ರಷ್ಟಾರರಾದ
ಋಷಿಗಳ ಋಣವನ್ನು ತೀರಿಸಲು ಸಹಾಯವಾಗುತ್ತದೆ.

ಕೇವಲ ನೌಕರಿಯಲ್ಲಿ ಸ್ಥಾನಾಂತರ ಮಾಡಿಸಿಕೊಳ್ಳುವುದಕ್ಕಾಗಿ,
ಮೇಲಧಿಕಾರಿಗಳ ಮುಖಸ್ತುತಿ ಮಾಡಲಿಕ್ಕೆ ಹಿಂದೆಮುಂದೆ ನೋಡದವರು,
ಸರ್ವಾಂತರ್ಯಾಮಿಯೂ, ಸರ್ವಶಕ್ತನೂ ಆದ ಪರಮಾತ್ಮನನ್ನು ಸ್ತುತಿಸಲು
ಹಿಂಜರಿದರೆ, ಅವರಂಥ ಅಜ್ಞಾನಿಗಳು ಹಾಗು ದುರ್ಭಾಗ್ಯರು ಬೇರೊಬ್ಬ-
ರಿಲ್ಲವೆಂದೇ ಹೇಳಬೇಕಾದೀತು. ಒಂದು ಕಾಸಿನ ಬೆಲೆಯ ಉಪಕಾರ ಮಾಡಿದ
ಮನುಷ್ಯನು ಕೋಟಿ ರೂಪಾಯಿಗಳನ್ನು ದಯಪಾಲಿಸಿದಷ್ಟು ತನ್ನ ದೊಡ್ಡ-
ಸ್ತಿಕೆಯ ಪ್ರಚಾರ ಮಾಡಿಕೊಳ್ಳುತ್ತಾನೆ. ಆದರೆ ಏನೆಲ್ಲವನ್ನೂ ದಯಪಾಲಿ-
ಸಿದ ಭಗವಂತನು ಎಷ್ಟೂ ಪ್ರಚಾರಪ್ರಿಯನಲ್ಲ. ಆದ್ದರಿಂದ ಅವನನ್ನು
ನಂಬಿ, ಭಜಿಸುವುದೇ ಶ್ರೇಯಸ್ಕರವೆಂಬುದನ್ನು ಎಂದಿಗೂ ಮರೆಯಲಾಗದು.

## ೪೪೯. ಸ್ವರ್ಗಂ ನಯತಿ ಸೂನೃತಮ್

ಸೂನೃತ ಅಂದರೆ, ಸತ್ಯ ಹಾಗು ಪ್ರಿಯವಾದ ಮಾತು. ಕೇವಲ

ಸತ್ಯದಲ್ಲಿ ಅಪ್ರಿಯತೆ ಇರಲು ಸಾಧ್ಯ. ಕೇವಲ ಪ್ರಿಯವಾದವುದರಲ್ಲಿ ಅಸತ್ಯದ ಛಾಯೆ ಇರಬಹುದು. ಆದರೆ ಸೂನೃತದಲ್ಲಿ ಸತ್ಯ ಹಾಗು ಪ್ರಿಯ ಎರಡೂ ಇರುವುದರಿಂದ ಇದು ಸ್ವರ್ಗಕ್ಕೆ ಸಾಧನ. ಯಾವಾಗಲೂ ಎಲ್ಲರೂ ಪ್ರಿಯ-ವಾದ ಸತ್ಯ ಮಾತುಗಳನ್ನೇ ಆಡಬೇಕೆಂದು ಬೋಧಿಸುವ ಈ ಸೂತ್ರವು ಪ್ರಸಿದ್ಧವಾದ ಕೆಳಗೆ ಉದಾಹರಿಸಿದ ಶ್ಲೋಕವನ್ನೇ ಹೋಲುತ್ತದೆ.

ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್
ಸತ್ಯಮಪ್ರಿಯಮ್ ।
ಪ್ರಿಯಂ ಚ ನಾನೃತಂ ಬ್ರೂಯಾತ್ ಏಷ ಧರ್ಮಃ ಸನಾತನಃ ॥

ಸತ್ಯವನ್ನೇ ಆಡಬೇಕು. ಪ್ರಿಯವನ್ನೇ ಹೇಳಬೇಕು. ಆದರೆ ಅಪ್ರಿಯ-ವಾದ ಸತ್ಯವನ್ನು ಉಸುರಬಾರದು. ಪ್ರಿಯವೆನಿಸಿದರೂ ಅಸತ್ಯವನ್ನು ಆಡ-ಬಾರದು. ಇದೇ ಸನಾತನ ಧರ್ಮ ಎಂದು ಮೇಲಿನ ಶ್ಲೋಕವು ಸಾರುತ್ತದೆ. ಮುಂದಿನ ಸೂತ್ರದಲ್ಲಿ—

## ೪೫೦. ಪ್ರಿಯಮಪ್ಯಹಿತಂ ನ ವಕ್ತವ್ಯಮ್

ಪ್ರಿಯವಾಗಿದ್ದರೂ ಅಹಿತಕರವಾದ ಮಾತುಗಳನ್ನಾಡಬಾರದು ಎಂದು ಸ್ವಲ್ಪ ಬದಲಾಯಿಸಿ ಇಲ್ಲಿ ಹೇಳಲಾಗಿದೆ. ಅಪ್ರಿಯ ಹಾಗು ಅಹಿತ ಇವು-ಗಳಲ್ಲಿ ಸೂಕ್ಷ್ಮ ಭೇದವಿದೆ. 'ನೀನು ಪರೀಕ್ಷೆಯಲ್ಲಿ ಫೇಲಾಗಿದ್ದೀ' ಎಂದು ಹೇಳುವುದು ಅಪ್ರಿಯವಾದದ್ದು. ಆದರೆ ಮದ್ಯಪಾನ ಮಾಡುವವನಿಗೆ 'ನೀನು ಮದ್ಯಪಾನವನ್ನು ಬಿಡಬೇಡ, ಸಮುದ್ರಮಂಥನ ಮಾಡಿದಾಗ ಹೊರಬಂದ ಹದಿನಾಲ್ಕು ರತ್ನಗಳಲ್ಲಿ 'ಸುರಾ' ಎಂದರೆ ಮದ್ಯವೂ ಒಂದು' ಎಂದು ಹೇಳಿ ಅವನ ಅಹಿತಕ್ಕೆ ಕಾರಣರಾಗಬಾರದು.

## ೪೫೧. ಸತ್ಯೇನ ಧಾರ್ಯತೇ ಲೋಕಃ

ಈ ಲೋಕವು ಸತ್ಯದ ಆಧಾರದ ಮೇಲೆಯೇ ನಿಂತಿದೆ. ಅರ್ಥಾತ್ ಎಷ್ಟೇ

ಅಧರ್ಮಮಯವಾಗಿದ್ದರೂ ಎಲ್ಲಿಯ ವರೆಗೆ ಒಬ್ಬನಾದರೂ ಸತ್ಯನಿಷ್ಠನು ಈ ಭೂಮಿಯ ಮೇಲೆ ಇರುತ್ತಾನೋ, ಅಲ್ಲಿಯ ವರೆಗೆ ಅವನ ಪುಣ್ಯ-ಪ್ರಭಾವದಿಂದ ಈ ಲೋಕಕ್ಕೆ ನೆಮ್ಮದಿ ದೊರೆಯುವುದೆಂದು ಈ ಸೂತ್ರವು ಸೂಚಿಸುತ್ತದೆ. ಇದನ್ನು ಶಬ್ದಶಃ ತೆಗೆದುಕೊಳ್ಳುವುದಕ್ಕಿಂತ, ಸತ್ಯವು ಬದು-ಕಿರುವ ವರೆಗೆ ಈ ಲೋಕಕ್ಕೆ ಭಯವಿಲ್ಲವೆಂದು ತಾತ್ಪರ್ಯವನ್ನು ತೆಗೆಯ-ಬಹುದು.

## ೪೫೨. ಸತ್ಯಾತ್ ದೇವೋ ವರ್ಷತಿ

ಸತ್ಯದಿಂದ ಲೋಕಕ್ಕೆ ಕಲ್ಯಾಣವೆಂಬ ತತ್ತ್ವವನ್ನು ಹೆಚ್ಚು ಸ್ಪಷ್ಟಪಡಿ-ಸುವ ವೃಷ್ಟಿಯಿದು. ಈ ಲೋಕದಲ್ಲಿ ಮಳೆ, ಬೆಳೆ ಎಲ್ಲವೂ ಸರಿಯಾಗಿ ಭಗವಂತನ ಅನುಗ್ರಹದಿಂದ ದೊರೆಯಬೇಕಾದರೆ, ಅದು ಮನುಷ್ಯರು ಸತ್ಯವನ್ನು ನಂಬಿ ನಡೆದರೇನೇ ಸಾಧ್ಯ. ಈ ಮಾತನ್ನು ಭೀಷ್ಮಾಚಾರ್ಯರು ಅರ್ಜುನನಿಗೆ ತನ್ನ ಕೊನೆಯ ಉಪದೇಶವೆಂದು ಶಾಂತಿಪರ್ವದಲ್ಲಿ ತಿಳಿಸಿ-ದ್ದಾನೆ. 'ಸತ್ಯಕ್ಕಾಗಿ ಪ್ರಯತ್ನಿಸಿರಿ. ಅದೇ ಪರಮ ಬಲ' ( ಸತ್ಯೇನಾ ಯತಿತವ್ಯಂ ವಃ ಸತ್ಯಂ ಹಿ ಪರಮಂ ಬಲಮ್ ).

## ೪೫೩. ಸತ್ಯಂ ಸ್ವರ್ಗಸ್ಯ ಸಾಧನಮ್

ಈ ಲೋಕದಲ್ಲಿಯ ಸುಖವಷ್ಟೇ ಅಲ್ಲ, ಸ್ವರ್ಗಸುಖವೂ ಕೂಡ ಸತ್ಯ-ಮಾರ್ಗದಿಂದ ನಡೆಯುವವರಿಗೇ ಸಾಧ್ಯ. ಆದ್ದರಿಂದ ಸತ್ಯವನ್ನು ಎಂದೂ ಬಿಡಬಾರದು. ಹಿಂದೆ ಧರ್ಮದ ವಿವರಣೆಯನ್ನು ಮಾಡುವಾಗ, ಧರ್ಮವು ಸತ್ಯದ ಕಾರ್ಯಾಚರಣೆ ಎಂದು ಹೇಳಿ, 'ಸತ್ಯಮೂಲಾನಿ ಧರ್ಮಾಣಿ' ಎಂದು ವಿವರಿಸಿದ್ದನ್ನು ಇಲ್ಲಿ ಸ್ಮರಿಸುವುದು ಅವಶ್ಯ. ಇಹ–ಪರಗಳೆರಡೂ ಸತ್ಯದಿಂದಲೇ ಸಾಧ್ಯ. ಅಂತೆಯೇ ಸತ್ಯದ ಮಹಿಮೆ.

## ೪೫೪. ನಾನೃತಾತ್ ಪಾತಕಂ ಪರಮ್

ಅನೃತವೆಂದರೆ—ಸುಳ್ಳಿಗಿಂತ ಹೆಚ್ಚಿನ ಪಾಪವಿಲ್ಲ ಎಂದು ಹೇಳಿ, ಸತ್ಯವನ್ನು ಆಶ್ರಯಿಸಬೇಕಷ್ಟೇ ಅಲ್ಲ, ಅಸತ್ಯದಿಂದ ತ್ರಿಕಾಲದಲ್ಲಿ ದೂರವಿರುವುದು ಅವಶ್ಯವೆಂದು ಇಲ್ಲಿ ಪ್ರತಿಪಾದಿಸಲಾಗಿದೆ. ಅಸತ್ಯವನ್ನು ಆಶ್ರಯಿಸಿದವರನ್ನು ಮೈತ್ರಿ, ಬಾಂಧವ್ಯ, ಪರಿಚಯ, ಸಂಬಂಧ—ಇತ್ಯಾದಿ ಯಾವ ತರದಿಂದಲೂ ಹತ್ತಿರ ಬರಗೊಡಬಾರದು ಎಂಬುದು ಇಲ್ಲಿ ಧ್ವನಿತವಾಗಿದೆ.

## ೪೫೫. ತಪಸ್ಸಾರಃ ಇಂದ್ರಿಯ ನಿಗ್ರಹಃ

ತಪಸ್ಸೆಂದರೆ ಇಂದ್ರಿಯ ನಿಗ್ರಹ—ಎಂದು ಈ ಸೂತ್ರವು ಬೋಧಿಸುತ್ತದೆ. ಇದೂ ಕೂಡ ಸತ್ಯವಂತನಿಗೇ ಸಾಧ್ಯ. ಇಂದ್ರಿಯ ವಿಕಾರಗಳಿಗೆ ವಶನಾದವನು ಸತ್ಯವನ್ನು ಪಾಲಿಸುವುದೆಂತು ? ಇಂದ್ರಿಯ ನಿಗ್ರಹ, ಸತ್ಯ, ತಪಸ್ಸು ಇವೆಲ್ಲಕ್ಕೂ ಮೂಲಭೂತವಾದದ್ದು ತ್ಯಾಗ. ಭೋಗಿಗೆ ಇಂದ್ರಿಯ ನಿಗ್ರಹವಾಗುವುದೆಂತು ? ಆದ್ದರಿಂದ ಶರೀರವನ್ನು ದಂಡಿಸುವ ಶಾಸ್ತ್ರ, ವಚನಗಳ ಆಧಾರದಿಂದ ಆಚರಿಸುವ ವ್ರತ, ನಿಯಮ, ಉಪವಾಸಾದಿಗಳೆಲ್ಲ ತಪಸ್ಸೆನಿಸಿಕೊಳ್ಳುತ್ತವೆ. ನಿಷ್ಠೆಯಿಂದ ವಿದ್ಯಾರ್ಥಿಯು ಅಭ್ಯಾಸ ಮಾಡುವುದು, ಶಿಕ್ಷಕನು ಪಾಠವನ್ನು ಹೇಳಿಕೊಡುವುದು ಕೂಡ ತಪಸ್ಸೇ. ಇವೆಲ್ಲದರಲ್ಲಿಯೂ ಇಂದ್ರಿಯನಿಗ್ರಹದ ಆವಶ್ಯಕತೆ ಇದ್ದೇ ಇರುತ್ತದೆ. ಆದ್ದರಿಂದ ತಪಸ್ಸಿನ ಸಾರವೇ ಇಂದ್ರಿಯನಿಗ್ರಹ ಎಂದು ಹೇಳಿದ್ದು ಯಥಾರ್ಥವೇ.

## ೪೫೬. ನಾಸ್ತಿ ಸತ್ಯಾತ್ ಪರಂ ತಪಃ

ಸತ್ಯಕಿಂತ ಶ್ರೇಷ್ಠವಾದ ತಪಸ್ಸಿಲ್ಲ ಎಂದು ಇಲ್ಲಿ ಹೇಳಿದ್ದು ಅದೆಷ್ಟು ಮಹತ್ವದ್ದು ಎಂದು ತಿಳಿಯಬೇಕಾದರೆ, ಸತ್ಯವನ್ನು ಬಾಪೂ ತಪ್ಪದೇ

ಪಾಲಿಸುವುದು ಅದೆಷ್ಟು ಕಠಿಣವೆಂಬುದರ ಅರಿವಾದಾಗ ಮಾತ್ರ ಸಾಧ್ಯ. ಧರ್ಮರಾಜನಿಗೆ ಕೂಡ ಸುಳ್ಳು ಹೇಳಬೇಕಾದ ಪ್ರಸಂಗ ಬಂದದ್ದನ್ನು ಇಲ್ಲಿ ಮರೆಯಲಾಗದು. ಹಾಗೆಯೇ ಸತ್ಯವನ್ನು ಪಾಲಿಸುವುದಕ್ಕಾಗಿ ಹರಿಶ್ಚಂದ್ರನು ಅದೆಷ್ಟು ಕಷ್ಟ–ನಷ್ಟಗಳಿಗೆ ಈಡಾಗಬೇಕಾಯಿತೆಂಬುದನ್ನು ಜ್ಞಾಪಿಸಿಕೊಳ್ಳಬಹುದು. ತಪಸ್ಸು ಒಂದು ಕರ್ಮ. ಅದರಿಂದ ಚಿತ್ತಶುದ್ಧಿಯಾಗಿ ಜ್ಞಾನಕ್ಕೆ ಅಧಿಕಾರಿಯಾದ ಮನುಷ್ಯನು ಕೊನೆಗೆ ಜ್ಞಾನದಿಂದಲೇ ಕೈವಲ್ಯವನ್ನು ಪಡೆಯುವನು.

## ೪೫೭. ತಪಸಾ ಸ್ವರ್ಗಮಾಪ್ನೋತಿ

ಸತ್ಯ ಹಾಗು ತಪಸ್ಸುಗಳಲ್ಲಿ ಮೂಲತಃ ಭೇದವಿಲ್ಲವೆಂದು ಪ್ರತಿಪಾದಿಸಿದ ಸೂತ್ರಕಾರನು, ಸತ್ಯದಿಂದ ಸ್ವರ್ಗವೆಂದ ಮೇಲೆ ತಪಸ್ಸಿನಿಂದಲೂ ಅದು ದೊರೆಯತ್ತದೆಂಬ ನಿರ್ಣಯವನ್ನು ಈ ಸೂತ್ರದಲ್ಲಿ ಕೊಡುತ್ತಾನೆ.

ಸ್ವರ್ಗವು ಶಾಶ್ವತವಲ್ಲ, ಮೋಕ್ಷರೂಪಿಯಾದ ಸುಖವೇ ಶಾಶ್ವತವೆಂಬ ಮಾತು ಬೇರೆ. ಆದರೆ ಮಂತ್ರಿಪದಕ್ಕಾಗಿ ಹವಣಿಸುವ ಈ ಲೋಕದಲ್ಲಿ ಸ್ವರ್ಗಾಪೇಕ್ಷಿಗೇನೂ ಕೊರತೆಯಿಲ್ಲ. ಅವರಿಗಾಗಿ ಈ ಸೂತ್ರದಲ್ಲಿಯ ಉಪದೇಶವಿದೆ.

## ೪೫೮. ಕ್ಷಮಾಯುಕ್ತಸ್ಯ ತಪೋ ವರ್ಧತೇ

ತಪಸ್ಸು, ಸತ್ಯ, ಇಂದ್ರಿಯನಿಗ್ರಹ ಇತ್ಯಾದಿಗಳನ್ನು ಚರ್ಚಿಸಿದ ಸೂತ್ರಕಾರನು ಇಲ್ಲಿ ಕ್ಷಮಾಗುಣವಿದ್ದಲ್ಲಿ ತಪಸ್ಸು ಬೆಳೆಯುತ್ತದೆ ಎಂದು ಹೇಳಿದ್ದು ಅತಿ ಸಮರ್ಪಕವಾದದ್ದು. ಕ್ರೋಧವಿಲ್ಲದಲ್ಲಿ ಮಾತ್ರ ಕ್ಷಮಾಗುಣವಿರುವುದು ಸಾಧ್ಯ. ಆದ್ದರಿಂದ ಕ್ಷಮಾವಂತನೆಂದರೆ, ಸಹನೆಯ ಮೂರ್ತಿ. ಅವನು

ಸತ್ಯವಂತನಾದುದರಿಂದ ಯಾವುದು ಅಸಾಧ್ಯವಾದೀತು ? ಹೀಗಾಗಿ ಅವನ ತಪಸ್ಸಿಗೆ ವಿಘ್ನಗಳೇ ಇಲ್ಲವಾಗಿ, ದಿನದಿನಕ್ಕೆ ಅದು ಬೆಳೆಯುತ್ತಲೇ ಹೋಗುತ್ತದೆ. ವಿಶ್ವಾಮಿತ್ರ, ದುರ್ವಾಸಾದಿಗಳು ಕ್ರೋಧಕ್ಕೆ ಬಲಿಯಾಗಿ, ತಮ್ಮ ತಪಃಫಲವನ್ನು ಹಾಳುಮಾಡಿಕೊಂಡದ್ದನ್ನು ಪುರಾಣಗಳು ಸಾರಿಹೇಳುತ್ತವೆ.

## ೪೫೯. ತಸ್ಮಾತ್ ಸರ್ವೇಷಾಂ ಕಾರ್ಯಸಿದ್ಧಿಃ ಭವತಿ

ಇಲ್ಲಿಯ ವರೆಗಿನ ಚರ್ಚೆಯ ಆಧಾರದ ಮೇಲಿಂದ ಚಾಣಕ್ಯನು ಈ ಸೂತ್ರದಲ್ಲಿ ತಪಸ್ಸಿನಿಂದಲೇ ಎಲ್ಲರ ಕಾರ್ಯಗಳು ಸಿದ್ಧಿಸಬಲ್ಲವು ಎಂದು ಹೇಳಿದ್ದು ಯಥಾರ್ಥವಾದ ನಿರ್ಣಯ. ಸತ್ಯ, ತ್ಯಾಗ, ಇಂದ್ರಿಯನಿಗ್ರಹಗಳ ಹಿನ್ನೆಲೆ ಇದ್ದ ತಪಸ್ಸಿಗೆ ಅಸಾಧ್ಯವೆಂಬುದು ಸ್ವಪ್ನದಲ್ಲಿಯೂ ಕೂಡ ಇರಲಾರದು.

## ೪೬೦. ತಪಸ್ವಿನಃ ಪೂಜನೀಯಾಃ

ಕೊನೆಗೆ ಸೂತ್ರಕಾರನು ಇಂಥ ತಪಸ್ವಿಗಳು ಪೂಜ್ಯರಾದುದರಿಂದ ನಾವೆಲ್ಲ ಅವರನ್ನು ಗೌರವಿಸಿ ಕೃತಾರ್ಥರಾಗಬೇಕೆಂದು ಆಶಿಸುತ್ತಾನೆ. ಸ್ವತಃ ನಿಃಸ್ವಾರ್ಥಿಯಾದ ಅವನಂತಹ ಮಹಾತಪಸ್ವಿಯು ಧರ್ಮಾಧಿಷ್ಠಿತ ರಾಜ್ಯಸ್ಥಾಪನೆ ಹಾಗು ಪ್ರಜಾಹಿತ ಇವೇ ಜೀವನದ ಗುರಿಯೆಂದು ತನ್ನ ತಪೋಬಲದಿಂದ ಅದನ್ನೆಲ್ಲ ಸಾಧಿಸಿ ಚಿರಸ್ಮರಣೀಯನಾಗಿದ್ದಾನೆ.

## ೪೬೧. ನ ಚಕ್ಷುಷಃ ಸಮಂ ಜ್ಯೋತಿರಸ್ತಿ

ಎಲ್ಲ ಅವಯವಗಳಲ್ಲಿ ಕಣ್ಣು ಶ್ರೇಷ್ಠವಾದದ್ದು ಎಂದು ಹೇಳುವು-

ದಕ್ಕಾಗಿ. ' ಕಣ್ಣಿಗೆ ಸಮಾನವಾದ ಬೆಳಕಿಲ್ಲ ' ಎಂದು ಈ ಸೂತ್ರವು ಹೇಳು-ತ್ತದೆ. ದೃಷ್ಟಿಯೇ ಇಲ್ಲದವನಿಗೆ ಹೊರಗಿನ ಪ್ರಕಾಶದಿಂದೇನು ಪ್ರಯೋ-ಜನ ? ' ಲೋಚನಾಭ್ಯಾಂ ವಿಹೀನಸ್ಯ ಪ್ರಕಾಶಃ ಕಿಂ ಕರಿಷ್ಯತಿ ? '

## ೪೬೨. ಚಕ್ಷುರ್ಹಿ ಶರೀರಿಣಾಂ ನೇತಾ

ದೇಹಧಾರಿಗಳಿಗೆ ಕಣ್ಣೇ ದಾರಿಯನ್ನು ತೋರಿಸುವವನಿದ್ದಂತೆ. ಏಕೆಂದರೆ, ಉಳಿದ ಅವಯವಗಳು ಅದರ ಆಜ್ಞೆಯಂತೆ ನಡೆದುಕೊಳ್ಳು-ತ್ತವೆ. ಅರ್ಥಾತ್ ಕಣ್ಣುಗಳು ' ಈ ದಿಕ್ಕಿಗೆ ಮುನ್ನಡೆ ' ಎಂದು ಹೇಳಿದಾಗ, ಕಾಲುಗಳು ಅತ್ತ ಸಾಗುತ್ತವೆ. ಇಲ್ಲಿ ' ಅಂಧಪಂಗುನ್ಯಾಯ ' ಅಂದರೆ ಕುರುಡನ ಹೆಗಲ ಮೇಲೆ ಕುಳಿತು ಕುಂಟನು ಮಾರ್ಗದರ್ಶನ ಮಾಡಿದಂತೆ, ಕುರುಡನು ಮುಂದೆ ಸಾಗುತ್ತಿದ್ದನೆಂದು ಹೇಳಿದ ಕತೆಯನ್ನು ಸ್ಮರಿಸ-ಬಹುದು.

## ೪೬೩. ಅಪಚಕ್ಷುಷಃ ಕಿಂ ಶರೀರೇಣ

ಕಣ್ಣು ( ದೃಷ್ಟಿ ) ಇಲ್ಲದವನಿಗೆ ಶರೀರದಿಂದೇನು ಪ್ರಯೋಜನ ? ಉಳಿದ ಅವಯವಗಳಲ್ಲಿ ಯಾವುದಾದರೂ ಒಂದು ಊನವಾಗಿದ್ದರೆ, ಸ್ವಲ್ಪ ಹೊಂದಾಣಿಕೆ ಮಾಡಿಕೊಳ್ಳಬಹುದು. ಆದರೆ ಕಣ್ಣಿಲ್ಲದವನು ಮಾತ್ರ ಪೂರ್ಣ ಪರತಂತ್ರನಾಗಿರುತ್ತಾನೆ ಆದ್ದರಿಂದ ಕುರುಡನ ಶರೀರವು ನಿಷ್ಪ್ರಯೋಜಕ ಅಂದರೆ ಪೂರ್ಣ ಪರತಂತ್ರವೆಂಬ ಅರ್ಥವು ಇಲ್ಲಿ ಧ್ವನಿತವಾಗಿದೆ.

## ೪೬೪. ದೂರಸ್ಥಮಪಿ ಚಾರಚಕ್ಷುಃ ಪಶ್ಯತಿ ರಾಜಾ

ನಮಗೆ ನಮ್ಮ ಕಣ್ಣುಗಳೇ ಸಹಾಯವೆಂದು ಹೇಳಿ, ರಾಜನಿಗೆ ಮಾತ್ರ

ಕೇವಲ ಅವನ ಚರ್ಮಚಕ್ಷುಗಳಷ್ಟೇ ಸಹಾಯಕವಾಗುವುದಿಲ್ಲ, ಗುಪ್ತ-ಚಾರರೂ ಕೂಡ ಅವನ ಕಣ್ಣುಗಳೇ ಎಂದು ಹೇಳುವ ಈ ಸೂತ್ರವು ಗುಪ್ತ-ಚಾರ ಪದ್ಧತಿಯ ಮಹತ್ವವನ್ನು ಸೂಚಿಸುತ್ತದೆ.

ಅರ್ಥಶಾಸ್ತ್ರದಲ್ಲಿ ಕೌಟಿಲ್ಯನು ತುಂಬಾ ನೀಳವಾದ ಚರ್ಚೆಯನ್ನು ಗುಪ್ತಚಾರ ಪದ್ಧತಿಯ ವಿಷಯದಲ್ಲಿ ಮಾಡಿದ್ದು ಮಹಾಕವಿ ವಿಶಾಖದತ್ತನ 'ಮುದ್ರಾರಾಕ್ಷಸ' ನಾಟಕವನ್ನು ಓದಿದರೆ, ಆ ಪದ್ಧತಿಯ ಸರಿಯಾದ ಕಲ್ಪನೆ ಬರುತ್ತದೆ. ಅವನ ಪದ್ಧತಿಯಲ್ಲಿ ಗುಪ್ತಚಾರರಿಲ್ಲದ ಸ್ಥಳವೇ ಇಲ್ಲ. ಅಧಿಕಾರಿ ಹಾಗು ಮಂತ್ರಿಗಳ ಮೇಲೆ ಅಷ್ಟೇ ಅಲ್ಲ, ಚಾರರ ಮೇಲೆಯೂ ಕೂಡ ಪುನಃ ಚಾರರನ್ನು ನೇಮಿಸುವ ವ್ಯವಸ್ಥೆಯು ಅದಕವಾಗಿದೆ. ಇಷ್ಟೇ ಅಲ್ಲ, ಒಬ್ಬ ಗುಪ್ತಚಾರನಿಗೆ ಇನ್ನೊಬ್ಬನ ಸುಳಿವು ಕೂಡ ತಾಕದಷ್ಟು ಗೌಪ್ಯವನ್ನು ಈ ವ್ಯವಸ್ಥೆಯಲ್ಲಿ ಸೂಚಿಸಲಾಗಿದೆ. ಈ ವಿಷಯಕ್ಕೆ ಹೆಚ್ಚಿನ ವಿವರಗಳು ಬೇಕಾಗಿದ್ದರೆ, ಇದೇ ಲೇಖಕರ 'ಕೌಟಿಲ್ಯನ ರಾಜ್ಯಪದ್ಧತಿಯ ಸಮೀಕ್ಷೆ' ಗ್ರಂಥವನ್ನು ಓದಬಹುದು ಇಲ್ಲಿ ಒಂದು ಚಮತ್ಕಾರಿಕವಾದ ಶ್ಲೋಕವನ್ನು ಸ್ಮರಿಸಬಹುದು—

ಗಂಧೇನ ಗಾವಃ ಪಶ್ಯಂತಿ ವೇದೈಃ ಪಶ್ಯಂತಿ ಬ್ರಾಹ್ಮಣಾಃ ।
ಚಾರೈಃ ಪಶ್ಯಂತಿ ರಾಜಾನಃ ಚಕ್ಷುಭ್ಯಾಂ ಇತರೇ ಜನಾಃ ॥

ಪಶುಗಳು ವಾಸನೆಯ ಸಹಾಯದಿಂದ ಜನರನ್ನು ಗುರುತಿಸುತ್ತವೆ. ತಪಸ್ವಿಗಳಾದ ಬ್ರಾಹ್ಮಣರು (ಬ್ರಹ್ಮಜ್ಞಾನಿಗಳು) ತಮ್ಮ ಅಂತರ್ದೃಷ್ಟಿ-ಯಿಂದ ಭೂತ, ಭವಿಷ್ಯಗಳನ್ನು ತಿಳಿಯಲು ಸಮರ್ಥರಾಗಿರುತ್ತಾರೆ. ಸಾಮಾ-ನ್ಯರು ತಮ್ಮ ಕಣ್ಣುಗಳಿಂದ ಏನೆಲ್ಲವನ್ನು ನೋಡಿವರೆ. ರಾಜರು ಗುಪ್ತಚಾರರ ಮುಖಾಂತರ ಎಲ್ಲವನ್ನೂ ತಿಳಿದುಕೊಳ್ಳುತ್ತಾರೆ.

ಕೌಟಿಲ್ಯನ ಗುಪ್ತಚಾರ ಪದ್ಧತಿಯು ಅಮೇರಿಕೆಯ C. I. A. ಅಥವಾ ರಶಿಯಾದ K. G. B. ಯನ್ನು ಮೀರಿಸುವಂತಹದಿತ್ತು ಎಂಬುದು ಪಂಡಿತರ ಅಭಿಪ್ರಾಯ.

## ೪೬೫. ನಾಪ್ಸು ಮೂತ್ರಂ ಕುರ್ಯಾತ್

ನೀರಿನಲ್ಲಿ ಅರ್ಥಾತ್ ನದಿ ಇತ್ಯಾದಿ ಜಲಾಶಯಗಳಲ್ಲಿ ಮಲ-ಮೂತ್ರ ವಿಸರ್ಜನೆ ಮಾಡಬಾರದೆಂದು ಹೇಳುವ ಈ ಸೂತ್ರವು. ತೀರ್ಥವು ಪುಣ್ಯ-ಜಲವಾದ್ದರಿಂದ ಅಲ್ಲಿ ದೇವತಾಸಾನ್ನಿಧ್ಯವಿರುತ್ತದೆ. ಗಂಗಾದಿ ಮಹಾ-ನದಿಗಳಷ್ಟೇ ಅಲ್ಲ. ಎಲ್ಲ ಜಲಾಶಯಗಳಲ್ಲಿಯೂ ಜಲದೇವತೆಯ ಸನ್ನಿಧಾನ-ವಿದ್ದೇ ಇರುತ್ತದೆ ಎಂಬುದು ನಮ್ಮ ಪರಂಪರೆಯು ಹೇಳುವ ಮಾತು. ಋಗ್ವೇದದಲ್ಲಿ 'ಯಾಸಾಂ ರಾಜಾ ವರುಣೋ ಯಾತಿ ಮಧ್ಯೆ ಸತ್ಯಾನೃತೇ ಅವಪಶ್ಯನ್ ಜನಾನಾಮ್' ಎಂದು ಹೇಳಲ್ಪಟ್ಟಿದೆ. ಅರ್ಥಾತ್ ನ್ಯಾಯ-ವನ್ನು ನೀಡುವ ದೇವತೆಯಾದ ವರುಣನು ಜನರ ಪುಣ್ಯ-ಪಾಪ ಕರ್ಮ-ಗಳನ್ನು ನಿರೀಕ್ಷಿಸುತ್ತ ಜಲಾಶಯಗಳಲ್ಲಿ ಸಂಚರಿಸುತ್ತಾನೆ ಎಂಬುದು ಈ ಮಂತ್ರದ ಆಶಯ. ಹಾಗೆಯೇ ಋಗ್ವೇದದಲ್ಲಿ 'ಅಪ್' ಎಂದರೆ ಜಲ ಅದರ ಅಧಿಷ್ಠಾತ್ರಿ ದೇವತೆಯ ಕುರಿತು ಅನೇಕ ಸೂಕ್ತಗಳಿವೆ. ಪ್ರತಿಯೊಂದು ಪಂಚಮಹಾಭೂತದ ಮೇಲೆಯೂ ಒಂದು ದೇವತೆಯ ಅಧಿಷ್ಠಾನವಿರುತ್ತದೆ ಎಂಬುದು ಭಾರತೀಯರ ನಂಬಿಕೆ.

## ೪೬೬. ನ ನಗ್ನೋ ಜಲಂ ಪ್ರವಿಶೇತ್

ವಿವಸ್ತ್ರರಾಗಿ ನೀರಿನಲ್ಲಿ (ಸ್ನಾನಾರ್ಥವಾಗಿ) ಪ್ರವೇಶಿಸಬಾರದು. ಅದು ಜಲದೇವತೆಗೆ ಅಪಮಾನ ಮಾಡಿದಂತೆ—ಎಂಬುದು ಈ ಸೂತ್ರದಲ್ಲಿ ಧ್ವನಿತವಾಗಿದೆ. ವ್ಯಾವಹಾರಿಕ ದೃಷ್ಟಿಯಿಂದ ನೋಡಿದರೂ ಬತ್ತಲೆ ಸ್ನಾನ-ಮಾಡುವುದು ಅನಾಗರಿಕತೆಯ ಲಕ್ಷಣ. ವಿಚಿತ್ರವೆಂದರೆ, ಇಂದಿನ ಪಾಶ್ಚಾ-ತ್ಯರ ಪ್ರಭಾವಕ್ಕೊಳಗಾದ ನಾಗರಿಕತೆಯಲ್ಲಿ ನಗ್ನಸ್ನಾನ ಮಾಡುವುದು ಒಂದು ಫ್ಯಾಶನ್ ಎಂದು ತಿಳಿಯಲ್ಪಡುತ್ತಿದೆ.

## ೪೬೭. ಯಥಾ ಶರೀರಂ ತಥಾ ಜ್ಞಾನಮ್

ಮನುಷ್ಯನ ಶರೀರಕ್ಕನುಗುಣವಾಗಿ ಅವನ ಜ್ಞಾನವಿರುತ್ತದೆ ಎನ್ನುವ ಈ ಸೂತ್ರದ ಆಶಯವೆಂದರೆ, ಸಾತ್ವಿಕ, ರಾಜಸ ಹಾಗು ತಾಮಸವೆಂಬ ತ್ರಿಗುಣಗಳ ಮೇಲೆ ಆಧಾರಿತವಾದ ಈ ಶರೀರಕ್ಕೆ ಆಯಾ ಗುಣಗಳಿಗೆ ಅನುರೂಪವಾದ ಜ್ಞಾನವೇ ಸ್ವಭಾವಸಿದ್ಧವಾಗಿರುತ್ತದೆ. ಸಾತ್ವಿಕ ಶರೀರವಿದ್ದವನ ಆಹಾರವು ಸಾತ್ವಿಕವೇ ಆಗಿರುವುದರಿಂದ, ಅವನಲ್ಲಿ ಪರಿಶುದ್ಧ ಜ್ಞಾನವಿರುವುದು ಸಹಜ. ತಾಮಸ ಶರೀರದಲ್ಲಿ ಅಧಮ ವೃತ್ತಿಯಿರುವುದರಿಂದ ಕ್ರೌರ್ಯ, ದುಷ್ಕೃತ್ಯ ಇತ್ಯಾದಿಗಳ ಪ್ರಭಾವವೇ ಹೆಚ್ಚಾಗಿ, ಸಮ್ಯಕ್ ಜ್ಞಾನವು ಅವನನ್ನು ಸೋಂಕಲಾರದು.

## ೪೬೮. ಯಥಾ ಬುದ್ಧಿಃ ತಥಾ ವಿಭವಃ

ಮನುಷ್ಯರ ಬುದ್ಧಿಗೆ ತಕ್ಕಂತೆ ಅವರಿಗೆ ಭಾಗ್ಯವು ಲಭಿಸುತ್ತದೆ. ಸಾತ್ವಿಕರಲ್ಲಿ ತೃಪ್ತಿಯಿರುವುದರಿಂದ, ತಮಗೆ ದೊರಕಿದ್ದೇ ಮಹದ್ಭಾಗ್ಯವೆಂದು ಆನಂದದಿಂದ ಇರುತ್ತಾರೆ. ರಾಜಸೀ ಪ್ರವೃತ್ತಿಯಲ್ಲಿ ಮಹತ್ವಾಕಾಂಕ್ಷೆಯು ಹೆಚ್ಚಾಗಿ ಇರುವುದರಿಂದ ಪ್ರದರ್ಶನಪ್ರಿಯತೆ ಹಾಗು ದರ್ಪದಿಂದ ಕೂಡಿದ ವೈಭವವು ಎದ್ದು ಕಾಣುತ್ತದೆ. ತಾಮಸಿಗಳ ವೈಭವವು ಮಾತ್ರ ಪರಪೀಡೆಗಾಗಿಯೇ ವಿನಿಯೋಗಿಸಲ್ಪಡುತ್ತದೆ.

## ೪೬೯. ಅಗ್ನಾವಗ್ನಿಂ ನ ನಿಕ್ಷಿಪೇತ್

ಬೆಂಕಿಯಲ್ಲಿ ಬೆಂಕಿಯನ್ನು ಎಸೆಯಬಾರದು. ಅರ್ಥಾತ್ ತೇಜಸ್ವಿಯಾದ (ಪ್ರಭಾವಿಯಾದ) ಮನುಷ್ಯನ ಮೇಲೆ ಕ್ರೋಧ ಮಾಡಬಾರದು.

ಏಕೆಂದರೆ ಇನ್ನೊಬ್ಬರ ಕ್ರೋಧವನ್ನು ಸಹಿಸದಿರುವುದೇ ತೇಜಸ್ವಿಯ ಸ್ವಭಾವ. ' ನ ತೇಜಃ ತೇಜಸ್ವೀ ಪ್ರಸೃತಮಪರೇಷಾಂ ವಿಷಹತೇ ' ಹೀಗಾಗಿ ಇಬ್ಬರ ಘರ್ಷಣದ ಪರಿಣಾಮವು ಒಬ್ಬರ ನಾಶಕ್ಕೆ ಕಾರಣವಾಗುವ ಸಂಭವ ಹೆಚ್ಚು. ಕದಾಚಿತ್ ಇಬ್ಬರಿಗೂ ಹಾನಿ ತಗಲಬಹುದು. ಆದ್ದರಿಂದ ಅಂಥ ಪ್ರಸಂಗ-ಗಳನ್ನು ತಪ್ಪಿಸಬೇಕೆಂಬುದು ಈ ಸೂತ್ರದ ಆಶಯ.

## ೪೭೦. ಅನ್ನದಾನಂ ಭ್ರೂಣಹತ್ಯಾಮಪಿ ಮಾರ್ಷ್ಟಿ

ಅನ್ನದಾನವು ಭ್ರೂಣ ( ಗರ್ಭಸ್ಥ ಶಿಶು ) ಹತ್ಯೆಯಂಥ ಪಾಪವನ್ನು ಕಳೆಯುತ್ತದೆ. ಮನುಷ್ಯನಿಗೆ ಎಂಥ ದಾನವನ್ನು ಕೊಟ್ಟರೂ ತೃಪ್ತಿಯಾಗು-ವುದು ಕಠಿಣ. ಒಂದು ಸಹಸ್ರ ರೂಪಾಯಿ ದಾನಮಾಡಿದಾಗ, ಇನ್ನೂ ಒಂದು ಸಹಸ್ರ ಕೊಟ್ಟಿದ್ದರೆ ಒಳ್ಳೆಯದಾಗುತ್ತಿತ್ತು ಎಂದು ಎನಿಸಬಹುದು. ಆದರೆ ಅನ್ನದಾನದ ವಿಷಯದಲ್ಲಿ, ಹೊಟ್ಟೆ ತುಂಬಿದ ಮೇಲೆ ತೃಪ್ತಿಯಾಗ-ಲಿಲ್ಲವೆನ್ನುವಂತಿಲ್ಲ. ಆದ್ದರಿಂದ ತೃಪ್ತಿಯನ್ನು ತರುವಂತಹ ದಾನವನ್ನು ಕೊಡುವುದಾದರೆ, ಅನ್ನದಾನಕ್ಕೆ ಸಮಾನವಾದದ್ದು ಬೇರೊಂದಿಲ್ಲ. ಇದೇ ಅದರ ಹಿರಿಮೆ. ಈಗ ಭ್ರೂಣಹತ್ಯೆಯನ್ನು ಕುಟುಂಬನಿಯೋಜನವೆಂದು ಸರಕಾರವೇ ಪ್ರೋತ್ಸಾಹಿಸುತ್ತಿದೆ.

## ೪೭೧. ನ ಮೀಮಾಂಸ್ಯಾ ಗುರವಃ

ಗುರುಗಳಲ್ಲಿಯ ದೋಷಗಳನ್ನು ಎತ್ತಿತೋರಿಸಿ, ಅವರ ನಿಂದೆಗೆ ಕಾರಣವಾಗಬಾರದು. ಮನುಷ್ಯರೆಂದ ಮೇಲೆ ನಿರ್ದೋಷಾವಸ್ಥೆ ಸಾಧ್ಯವಿಲ್ಲ. ಪರಾತ್ಪರ ವಸ್ತುವೊಂದೇ ದೋಷರಹಿತವಾದದ್ದು. ' ನಿರ್ದೋಷಂ ಹಿ ಸಮಂ ಬ್ರಹ್ಮ ' ಗುರುಗಳ ನಿಃಸ್ವಾರ್ಥ ಪ್ರೇಮ ಹಾಗು ಪರಿಶ್ರಮದಿಂದಲೇ

ನಾವು ವಿದ್ಯಾಸಂಪನ್ನರು, ಕೀರ್ತಿವಂತರು ಆಗಿರುವುದರಿಂದ, ಅವರ ಉಪ. ಕಾರವನ್ನು ತೀರಿಸುವುದು ಸುಲಭಸಾಧ್ಯವಲ್ಲ. ಆದ್ದರಿಂದ ಆಜನ್ಮ ಅವರಿಗೆ ವಿಧೇಯರಾಗಿರಬೇಕೇ ಹೊರತು ಮನುಷ್ಯಸಹಜವಾದ ಅವರಲ್ಲಿಯ ಒಂದೆ- ರಡು ದೋಷಗಳನ್ನು ಪ್ರಕಟಿಸಿ, ಪಾಪಕ್ಕೆ ಗುರಿಯಾಗಬಾರದು. ಗುರುವಿನ ಮಹಿಮೆಯನ್ನು ಬೋಧಿಸುವ ಸೂತ್ರವು ಈಗಾಗಲೇ ಚರ್ಚಿಸಲ್ಪಟ್ಟಿದೆ.

## ೪೭೨. ಗುರು ದೇವ ಬ್ರಾಹ್ಮಣೇಷು ಭಕ್ತಿರ್ಭೂಷಣಮ್

ಗುರು, ದೇವತೆ ಹಾಗು ವಿದ್ಯೆ ಮತ್ತು ಸದಾಚಾರದಿಂದ ಭೂಷಿತ ರಾದ ಬ್ರಾಹ್ಮಣರೊಂದಿಗೆ ಭಕ್ತಿ ಅರ್ಥಾತ್ ಪರಮಗೌರವದಿಂದ ನಡೆದು- ಕೊಳ್ಳಬೇಕು ಎಂದು ಈ ಸೂತ್ರವು ತಿಳಿಸುತ್ತದೆ. ಗುರುಗಳು ಹಾಗು ದೇವತೆ- ಗಳ ವಿಷಯಕ್ಕೆ ಭಕ್ತಿಯನ್ನಿಡಬೇಕೆಂದು ಹೇಳಿದ್ದಕ್ಕೆ ಈಗಿನ ಕಾಲದಲ್ಲಿ ವಿಶೇಷ ಪ್ರತಿಭಟನೆಯಾಗಲಿಕ್ಕಿಲ್ಲ. ಆದರೆ ಬ್ರಾಹ್ಮಣರನ್ನು ಗೌರವಿಸಬೇಕು ಎಂದು ಹೇಳಿದ್ದು, ಆ ವರ್ಗವು ಶೋಷಕ ವರ್ಗವೆಂದು ತಿಳಿದ ದಲಿತರು ಹಾಗು ಹಿಂದುಳಿದವರಿಗೆ ಅಪಥ್ಯವೆನಿಸದಿರಲಾರದು. ಬ್ರಾಹ್ಮಣರು ಶೋಷಕರೆಂದು ಬಗೆದದ್ದೇ ಒಂದು ಭ್ರಮೆ. ಶೋಷಕರಾಗಲಿಕ್ಕೆ ಅವರ ಕೈಯಲ್ಲಿ ರಾಜ್ಯಾಧಿ- ಕಾರವಿರಲಿಲ್ಲ. ವಿದ್ಯಾಪ್ರಭಾವದಿಂದ ಆ ವರ್ಗವು ಗೌರವಿಸಲ್ಪಡುತ್ತಿದ್ದುದು ಮಾತ್ರ ಸತ್ಯ. ವೇದಸಂರಕ್ಷಣೆಗಾಗಿ ಅವರಿಗೆ ಭೂಮಿಗಳನ್ನು ಉಂಬಳಿ- ಯಾಗಿ ಕೊಟ್ಟಿದ್ದರೂ, ಸಾಗುವಳಿದಾರರು ಕೊಟ್ಟಷ್ಟು ತೆಗೆದುಕೊಂಡು, ಚರಿತಾರ್ಥವನ್ನು ಅವರು ಸಾಗಿಸುತ್ತಿದ್ದರು. ಪ್ರಾಚೀನ ಇತಿಹಾಸದಲ್ಲಿ ಕ್ಷತ್ರಿಯ, ವೈಶ್ಯರಿಗಿಂತ ಅವರು ಸುಸ್ಥಿತಿಯಲ್ಲಿ ಇದ್ದುದರ ಉಲ್ಲೇಖವಿಲ್ಲ. ಮುಸಲ್ಮಾನರು ರಾಜ್ಯವಾಳುವ ಕಾಲದಲ್ಲಿ ಬ್ರಾಹ್ಮಣರು ವತನದಾರರಾಗಿ- ದ್ದರೂ, ಟಾಟಾ, ಬಿರ್ಲಾಗಳಂತೆ ಸಿರಿವಂತಿಕೆಯಲ್ಲಿ ಮೆರೆದ ಉದಾಹರಣೆ- ಗಳು ದೊರೆಯುವುದಿಲ್ಲ. ಸಾಲದಲ್ಲಿ ಮುಳುಗಿದ ಬ್ರಾಹ್ಮಣ ಜಮೀನುದಾರರ

ಉದಾಹರಣೆಗಳು ಮಾತ್ರ ಹೆಜ್ಜೆ ಹೆಜ್ಜೆಗೆ ಸಿಗುತ್ತವೆ. ಏನೇ ಇರಲಿ. ಇಲ್ಲಿ ಗೌರವಕ್ಕೆ ಪಾತ್ರವಾದದ್ದು ಅವರ ಜ್ಞಾನ ಹಾಗು ಆಚಾರಸಂಪನ್ನತೆಯೇ ಹೊರತು ಜಾತಿಯಲ್ಲ. ಸಗಟು ಮತಗಳನ್ನು ನುಂಗುವ ಗುರಿಯನ್ನಿಟ್ಟು ಕೊಂಡ ರಾಜಕಾರಣಿಗಳು ಭೇದನೀತಿಯನ್ನನುಸರಿಸಿ. ಹಿಂದುಳಿದವರನ್ನು ಮೇಲಕ್ಕೆತ್ತುವ ಹೆಸರಿನಲ್ಲಿ ಮುಂದುವರಿದವರನ್ನು ಪಾತಾಳಕ್ಕೆ ನೂಕುವ ಕಾರ್ಯಕ್ರಮವನ್ನಿಟ್ಟುಕೊಂಡಂತಿದೆ.

ಎಂದಿಗೂ ತ್ಯಾಗದಿಂದಲೇ ಜೀವಿಸಿದ ಆ ವರ್ಗಕ್ಕೆ ಒಂದೇ ತೊತ್ತು ಊಟಮಾಡಿದರೂ ತೃಪ್ತಿಯಿಂದಿರುವ ಸಂಯಮ ಹಾಗು ಮನಸ್ಸನ್ನು ದೇವರು ದಯಪಾಲಿಸಿದ್ದಾನೆ. ಒಂದು ವರ್ಗವನ್ನು ನಿರ್ಗತಿಕರಾಗಿ ಮಾಡ-ಬೇಕೆನ್ನುವ ಭರದಲ್ಲಿ ದೇಶದ ಬುದ್ಧಿಬಲಕ್ಕೆ ಪೆಟ್ಟುಹಾಕುವ ಕಲ್ಪನೆ ಮಾತ್ರ ಒಳ್ಳೆಯದಲ್ಲ ಎಂದು ದುಃಖದಿಂದ ಹೇಳಬೇಕಾಗುತ್ತದೆ.

## ೪೭೩. ಖಲತ್ವಂ ನೋಪೇಯಾತ್

ಯಾವಾಗಲೂ ದುಷ್ಟತನವನ್ನು ಹತ್ತಿರ ಬರಗೊಡಬಾರದು. ಹಲವು ಸಲ ದುಷ್ಟರು ಎಷ್ಟೇ ದುಷ್ಕರ್ಮಗಳನ್ನು ಮಾಡಿದರೂ ಸಮಾಜದಲ್ಲಿ ಅವರು ಮೆರೆಯುತ್ತಿರುವುದನ್ನು, ಹಾಗೆಯೇ ಒಳ್ಳೆಯವರಿಗೆ ನಿಷ್ಕಾರಣವಾಗಿ ಬರು-ತ್ತಿರುವ ಸಂಕಟಗಳನ್ನು ನೋಡಿ. ನಾವೂ ದುಷ್ಟರಾಗುವುದೇ ಲೇಸು ಎಂದು ಹಲವರಿಗೆ ಅನಿಸಬಹುದು. ಅಂತಹ ವಿಚಾರಕ್ಕೆ ಸೋತು ಮನುಷ್ಯರ ದುಷ್ಟ-ರಾಗಬಾರದು. ಹಿಂದಿನ ಕರ್ಮದ ಫಲವಾಗಿ ಹಲವರು ದುಷ್ಟತನ ಮಾಡಿ-ದರೂ ಹಾಳಾಗದೇ ಇರಬಹುದು. ಆದರೆ ಅದು ಶಾಶ್ವತವಲ್ಲ. ಆದ್ದರಿಂದ ಯಾವಾಗಲೂ ಸನ್ಮಾರ್ಗವನ್ನು ಬಿಡಕೂಡದು. ಚಾಣಕ್ಯನೇ ಒಂದು ಪ್ರಸಂಗ-ದಲ್ಲಿ ಮಿತಿಮೀರಿದ ದುಷ್ಟತನವು ತತ್ಕಾಲದಲ್ಲಿಯೇ ಫಲವನ್ನು ಕೊಡುತ್ತದೆ ಎಂದು ಹೇಳಿದ್ದಾನೆ.

ತ್ರಿಭಿರ್ಮಾಸೈಃ ತ್ರಿಭಿಃಪಕ್ಷೈಃ ತ್ರಿಭಿರ್ವರ್ಷೈಃ ತ್ರಿಭಿರ್ದಿನೈಃ।
ಅತ್ಯುತ್ಕಟೈಃ ಪುಣ್ಯಪಾಪೈಃ ಇಹೇವ ಫಲಮಶ್ನುತೇ ॥

ಅತ್ಯುತ್ಕಟವೆನಿಸಬಹುದಾದ ದುಷ್ಕೃತ್ಯಗಳಿಂದಾಗಿ ಮನುಷ್ಯರು ತಮ್ಮ ಕೃತಿಗೆ ತಕ್ಕಂತೆ ಅತಿ ಹೆಚ್ಚೆಂದರೆ ಮೂರು ವರ್ಷ. ಅತಿ ಕಡಿಮೆಯೆಂದರೆ ಮೂರು ದಿನಗಳಲ್ಲಿ, ಇದೇ ಜನ್ಮದಲ್ಲಿ ತಮ್ಮ ಕರ್ಮಕ್ಕೆ ತಕ್ಕ ಫಲವನ್ನು ಉಣ್ಣುತ್ತಾರೆ ಎಂದು ಇಲ್ಲಿ ಹೇಳಲಾಗಿದೆ. ಉತ್ಕಟವಾದ ಪುಣ್ಯಕರ್ಮಗಳಿಂದಲೂ ಕೂಡ ಇಷ್ಟೇ ಶೀಘ್ರವಾಗಿ ಫಲವು ದೊರೆಯುತ್ತದೆಂದು ಇಲ್ಲಿ ಹೇಳಿದ್ದನ್ನು ಮರೆಯುವಂತಿಲ್ಲ.

## ೪೭೪. ನಾಸ್ತಿ ಖಲಸ್ಯ ಮಿತ್ರಮ್

ನೀಚರಿಗೆ ಮಿತ್ರರಿಲ್ಲ. ಹಲವರು ಅವರೊಂದಿಗೆ ಮೈತ್ರಿಯಿಂದ ನಡೆದುಕೊಳ್ಳುವಂತೆ ಕಂಡರೂ ಅವೆಲ್ಲ ಸ್ವಾರ್ಥಕ್ಕಾಗಿ. ಅದು ನಿಜವಾದ ಸ್ನೇಹವಲ್ಲ. ದುಷ್ಟತನವು ಅವರ ಕುಲದೈವತವಿದ್ದಂತೆ ಎಂದ ಮೇಲೆ ಅವರ ಕೃತಿಗಳೆಲ್ಲಕ್ಕೂ ಅದೇ ಪ್ರೇರಣೆ. ಇದು ಅವರ ಹತ್ತಿರಕ್ಕೆ ಮಿತ್ರತ್ವವನ್ನು ಬಯಸಿ ಬರುವಂತೆ ಮಾಡಲಾರದು.

## ೪೭೫. ಆಚಾರಾದಾಯುರ್ವರ್ಧತೇ ಕೀರ್ತಿಶ್ಚ

ಸದಾಚಾರದಿಂದ ಆಯುಷ್ಯ ಹಾಗು ಕೀರ್ತಿ ಎರಡೂ ಬೆಳೆಯುತ್ತವೆ. ಈ ಮಾತನ್ನು ಭೀಷ್ಮಪಿತಾಮಹನು ಶಾಂತಿಪರ್ವದಲ್ಲಿ ಬಿಂಬಿಸಿ ಹೇಳಿದ್ದಾನೆ. ' ಆಚಾರಾತ್ ಲಭತೇ ಹ್ಯಾಯುಃ, ದುರಾಚಾರಾ ಗತಾಯುಷಾಃ ' ದುರಾಚಾರಿಗಳು ಬೇಗನೇ ಸಾವಿಗೆ ತುತ್ತಾಗುತ್ತಾರೆ. ಆದರೆ ಆಚಾರವಂತರಿಗೆ ಅಪಮೃತ್ಯುವಿನ ಭಯವಿಲ್ಲ. ' ಆಚಾರಹೀನಂ ನ ಪುನಂತಿ ವೇದಾಃ ' ಆಚಾರಹೀನರನ್ನು ವೇದಗಳು ಉದ್ಧರಿಸುವುದಿಲ್ಲ.

## ೪೭೬. ಅಕುಲೀನೋಽಪಿ ವಿನೀತಃ ಕುಲೀನಾತ್ ವಿಶಿಷ್ಟಃ

ವಿನಯಸಂಪನ್ನನಾದ ಕೆಳಜಾತಿಯವನು, ವಿನಯವಿಲ್ಲದ ಮೇಲ್ಜಾತಿಯವನಿಗಿಂತಲೂ ಶ್ರೇಷ್ಠನೆಂದು ಹೇಳುವ ಈ ಸೂತ್ರವು ಗುಣಕ್ಕೆ ಮರ್ಯಾದೆಯನ್ನು ಕೊಡುತ್ತದೆಯೇ ಹೊರತು ಕುಲಕ್ಕಲ್ಲ. ಇದು ಚಾಣಕ್ಯನ ದೊಡ್ಡ ಮನಸ್ಸು ಅರ್ಥಾತ್ ಔದಾರ್ಯಕ್ಕೆ ಒಂದು ನಿದರ್ಶನ. ವರ್ಣಾಶ್ರಮ ಧರ್ಮಕ್ಕೆ ಮಹತ್ವವನ್ನು ಕೊಡುವ ಚಾಣಕ್ಯನು ಚಾರಿತ್ರ್ಯಕ್ಕೆ ಅದಕ್ಕೂ ಹೆಚ್ಚಿನ ಬೆಲೆಯನ್ನು ಕೊಡುತ್ತಾನೆಂಬುದಕ್ಕೆ ಈ ಸೂತ್ರವೇ ಸಾಕ್ಷಿ. ಈ ಅಭಿಪ್ರಾಯವನ್ನು ದೃಢೀಕರಿಸಲು—

## ೪೭೭. ಸರ್ವಸ್ಯ ಭೂಷಣಂ ವಿನಯಃ

ಆಯಾ ವರ್ಣಗಳಿಗಾಗಿ ವಿಧಿಸಿದ ಕರ್ಮಗಳು ಅವುಗಳಿಗೆ ಮಾತ್ರ ಭೂಷಣಪ್ರಾಯವಾಗಿದ್ದರೆ, ವಿನಯವು ಎಲ್ಲರಿಗೂ (ವರ್ಣಾಶ್ರಮ ಭೇದವಿಲ್ಲದೆ) ಭೂಷಣಪ್ರಾಯವಾದದ್ದು. ಅದಿಲ್ಲದ ಮನುಷ್ಯನು ಮನುಷ್ಯತ್ವಕ್ಕೆ ಪಾತ್ರನಾಗಲಾರನೆಂಬುದೇ ಇಲ್ಲಿ ಧ್ವನಿತವಾಗಿದೆ. ಐದನೆಯ ಸೂತ್ರದಲ್ಲಿ ವಿನಯವೇ ಎಲ್ಲ ಸುಖಕ್ಕೂ ಆಧಾರವೆಂಬ ಆಶಯವನ್ನು ಸೂತ್ರಕಾರನು ಹೇಳಿದ್ದನ್ನು ಮರೆಯಕೂಡದು.

## ೪೭೮. ಲೋಕಯಾತ್ರಾ ದರಿದ್ರಂ ಬಾಧತೇ

ಬಡವನಿಗೆ ನಿತ್ಯ ಎರಡುಹೊತ್ತು ಊಟ ಮಾಡಿಕೊಂಡಿರುವುದು ಕೂಡ ಕಠಿಣವಾಗಿರುತ್ತದೆ ಎಂದು ಈ ಸೂತ್ರವು ಬಡತನದ ಭೀಕರತೆಯನ್ನು ಚಿತ್ರಿಸುತ್ತದೆ. ಪ್ರತಿಯೊಬ್ಬರು ಉದ್ಯೋಗಶೀಲರಾದರೆ, ಚರಿತಾರ್ಥಕ್ಕೆ

ಬಾಧೆಯಿಲ್ಲ. ತೃಪ್ತಿಯೊಂದಿದ್ದರೆ ಸಾಕು. ಅದು ಸುಖವನ್ನು ತರಬಲ್ಲದು. ಆದರೆ ಮನುಷ್ಯರು ಬಡತನದಿಂದ ಪಾರಾಗಲು ತಮ್ಮ ಪಾಲಿನ ಕರ್ತವ್ಯ-ವನ್ನು ನಿರ್ವಹಿಸಬೇಕಾದಂತೆಯೇ, ಸರಕಾರವು ಆ ದಿಸೆಯಲ್ಲಿ ಯತ್ನಿಸು-ವುದು ಧರ್ಮ. ಕೇವಲ 'ಗರೀಬಿ ಹಟಾವೋ' ಎಂದು ಘೋಷಣೆಯನ್ನು ಕೂಗುವುದರಿಂದ ಕಾರ್ಯವಾಗಲಾರದು. ಲೋಕಯಾತ್ರಾ ಶಬ್ದಕ್ಕೆ ಹೊಟ್ಟೆ ತುಂಬಿಕೊಳ್ಳುವುದು ಎಂಬರ್ಥವೇ ಇಲ್ಲಿ ಉದ್ದಿಷ್ಟವಾಗಿದೆ.

## ೪೭೯. ಬಹುಜನ ವಿರುದ್ಧಂ ಏಕಂ ನಾನುವರ್ತೇತ

'ಈ ಸೂತ್ರದಲ್ಲಿ ಬಹುಜನರಿಗೆ ವಿರುದ್ಧ ಹೋಗಿ ಒಬ್ಬನನ್ನು ಎತ್ತಿ ಕಟ್ಟಬಾರದು ಎಂದು ವ್ಯಾವಹಾರಿಕ ಚಾತುರ್ಯವನ್ನು ಬೋಧಿಸಲಾಗಿದೆ. ಯಾವಾಗಲೂ ಪ್ರವಾಹದೊಂದಿಗೆ ಈಸಬೇಕೇ ಹೊರತು, ಪ್ರವಾಹಕ್ಕೆ ವಿರುದ್ಧವಾಗಿ ಈಸುವವರಿಗೆ ಅಸಾಧ್ಯವಾದ ಪ್ರತಿರೋಧವನ್ನು ಎದುರಿಸ-ಬೇಕಾಗುತ್ತದೆ. ಬಹುಜನರೊಂದಿಗೆ ಇರುವುದೂ, ಪ್ರವಾಹದಗುಂಟ ಈಸು-ವುದೂ ಒಂದೇ. ಆದ್ದರಿಂದ ಬೇಕೆಂತಲೇ ಬಹುಜನರ ವಿರೋಧವನ್ನು ಕಟ್ಟಿ-ಕೊಂಡು ತೊಂದರೆಗೀಡಾಗುವುದು ಜಾಣತನವೇನಲ್ಲ. 'ಬಹುಜನ ಹಿತಾಯ, ಬಹುಜನ ಸುಖಾಯ' ಎಂದು ಸಾರುವ ಲೋಕಸಂಗ್ರಹ ತತ್ವವನ್ನು ನೆನಪಿ-ನಲ್ಲಿಟ್ಟಿದ್ದು ಯೋಗ್ಯ.

## ೪೮೦. ನ ದುರ್ಜನೇಷು ಭಾಗಧೇಯಃ ಕರ್ತವ್ಯಃ

ದುಷ್ಟರ ಜೊತೆಗೆ ನಮ್ಮ ದೈವವನ್ನು ಜೋಡಿಸಿಕೊಳ್ಳಬಾರದು ಎಂದು ಬೋಧಿಸುವ ಈ ಸೂತ್ರವು ಅತಿ ಮಹತ್ವದ ಉಪದೇಶವನ್ನೊಳಗೊಂಡಿದೆ. ಪಾಪಿಯ ಸಹವಾಸದಿಂದ ಸಂಗಡಿಗರಿಗೆಲ್ಲ ಕಷ್ಟವನ್ನನುಭವಿಸಬೇಕಾಗುತ್ತದೆ ಎಂಬ

ಒಂದು ಸತ್ಯವು ಇಲ್ಲಿ ಗೂಢವಾಗಿದೆ. ಒಂದು ವಾಹನದಲ್ಲಿ ಪ್ರವಾಸ ಮಾಡು-ವಾಗ, ಪಾಲುಗಾರಿಕೆಯಿಂದ ವ್ಯಾಪಾರ ಮಾಡುವಾಗ, ಸಂಘ-ಸಂಸ್ಥೆಗಳಲ್ಲ ಬೆರೆತು ಕಾರ್ಯಮಾಡುವಾಗ ದುಷ್ಟರ ಸಹವಾಸವು ಕೇವಲ ಅವರ ಕುಕೃ-ತಿಯ ಪರಿಣಾಮವಾಗಿ ಎಲ್ಲರಿಗೂ ಕೆಟ್ಟ ಹೆಸರನ್ನು ತರುತ್ತದೆ. ಇದಲ್ಲದೆ ಅವರ ಉತ್ಕಟ ಪಾಪದಿಂದ ನಮ್ಮನ್ನು ವಿನಾಶದ ದಾರಿಯಲ್ಲಿ ಎಳೆಯುತ್ತದೆ. ಒಬ್ಬರ ಪಾಪದ ಫಲ ಕಾರಣವಿಲ್ಲದೆ ಇನ್ನೊಬ್ಬರಿಗೆ ಲಭಿಸುವುದೆಂತು ? ಎಂದು ಕೇಳಬಹುದು. ಅದರ್ಶಿಷ್ಟರಿಗಳ ಸಹವಾಸ ಮಾಡುವುದೂ ಪಾಪವೇ ಎಂಬುದೇ ಅದಕ್ಕೆ ಉತ್ತರ. ವಿವೇಕಿಗಳು ಇದನ್ನರಿತು ಜಾಗ್ರತರಾಗಿ ವ್ಯವ-ಹರಿಸಬೇಕೆಂಬುದು ಸೂತ್ರಕಾರನ ಅಭಿಪ್ರಾಯ.

## ೪೮೧. ನ ಕೃತಾರ್ಥೇಷು ನೀಚೇಷು ಸಂಬಂಧಃ

ಮೇಲಿನ ಸೂತ್ರದ ವಿಚಾರವನ್ನು ಪರ್ಯಾಯವಾಗಿ. ಇಲ್ಲಿ ಕೃತಾರ್ಥರು ಎಂದರೆ ಜೀವನದಲ್ಲಿ ಸಾಧಿಸಬೇಕಾದ್ದನ್ನೆಲ್ಲ ಸಾಧಿಸಿದವರು. ನೀಚರೊಂದಿಗೆ ಯಾವ ಸಂಬಂಧವನ್ನೂ ಇಟ್ಟುಕೊಳ್ಳಬಾರದು. ಏಕೆಂದರೆ ಅಂಥ ಸಂಬಂಧಕ್ಕೆ ಅವರಿಬ್ಬರಲ್ಲಿ ಯಾವ ಸಾಮ್ಯಗಳೂ ಇರಲಾರವು. ' ಸಮಾನಶೀಲ ವ್ಯಸ-ನೇಷು ಸಖ್ಯಮ್ ' ಎಂಬ ತತ್ವದಂತೆ ಅವರಲ್ಲಿ ಸಖ್ಯವು ಬೆಳೆಯಲು ಮಾರ್ಗವೇ ಇಲ್ಲ. ಒಂದು ವೇಳೆ ಆ ದಿಶೆಯಲ್ಲಿ ಪ್ರಯತ್ನಿಸಿದರೆ ಅದು ವ್ಯರ್ಥ ವಾಗುತ್ತದೆ.

## ೪೮೨. ಋಣ, ಶತ್ರು, ವ್ಯಾಧಿಷು ಅಶೇಷಃ ಕರ್ತವ್ಯಃ

ಸಾಲದ ಹಣ, ಶತ್ರು ಹಾಗು ರೋಗ ಇವುಗಳನ್ನು ಬೇರುಸಹಿತ-ವಾಗಿ ಕಿತ್ತೆಸೆಯಬೇಕು ಎನ್ನುವುದು ಅತ್ಯಂತ ಸಮಂಜಸವಾದ ಹಿತೋಪ-

ದೇಶ. ಸಾಹುಕಾರನು ಸಾಲದಲ್ಲಿಯ ಸ್ವಲ್ಪ ಹಣವನ್ನು ಮರಳಿಕೊಟ್ಟರೆ. ಅದು ಬಡ್ಡಿ ಮಾತ್ರ ಆಯಿತೆಂದು. ಅಸಲನ್ನು ಕೊನೆಯ ವರೆಗೂ ಉಳಿಸುತ್ತ ಹೋಗುತ್ತಾನೆ. ಸಾಲಗಾರನ ಸರ್ವಸ್ವವನ್ನು ಹರಣ ಮಾಡುವುದೇ ಅವನ ಉದ್ದೇಶವಾಗಿರುತ್ತದೆ. ಶತ್ರುವು ನಮ್ಮನ್ನು ನಾಶಮಾಡುವುದೇ ತನ್ನ ಗುರಿ ಎಂದು ತಿಳಿದಂತೆ. ನಮ್ಮ ದೇಹದಲ್ಲಿ ಸೇರಿಕೊಂಡ ವ್ಯಾಧಿಯು ನಮ್ಮನ್ನು ಹಣ್ಣುಮಾಡಲಿಕ್ಕೇ ಯತ್ನಿಸುತ್ತದೆ. ಹೀಗಾಗಿ ಅವರ ಶೇಷವು ಅತ್ಯಲ್ಪ-ವಾಗಿದ್ದರೂ, ಪುನಃ ಬೆಳೆಯುತ್ತ ಹೋಗುವುದೇ ಅವರ ಸ್ವಭಾವವಾದ್ದರಿಂದ, ಅವನ್ನು ಸಮೂಲವಾಗಿ ನಾಶಮಾಡದೇ ಗತ್ಯಂತರವಿಲ್ಲ.

## ೪೮೩. ಭೂತ್ಯಾನುವರ್ತನಂ ಪುರುಷಸ್ಯ ರಸಾಯನಮ್

ಆಯುರ್ವೇದ ಶಾಸ್ತ್ರದಲ್ಲಿ ‘ರಸಾಯನ’ ಶಬ್ದಕ್ಕೆ ಶರೀರದಲ್ಲಿಯ ಸಪ್ತಧಾತುಗಳನ್ನು ಬಲಪಡಿಸಿ, ನವಚೈತನ್ಯವನ್ನು ತಂದುಕೊಡುವ ಔಷಧ-ವೆಂಬ ಅರ್ಥವಿದೆ. ‘ಭೂತಿ’ ಶಬ್ದಕ್ಕೆ ‘ಕಲ್ಯಾಣಪ್ರದವಾದ ಐಶ್ವರ್ಯ’ ಎಂದು ಅರ್ಥವಾಗುತ್ತದೆ. ಸನ್ಮಾರ್ಗದಿಂದ ನಡೆದು ಕಲ್ಯಾಣಕ್ಕಾಗಿ ಪನಿ-ಸುವುದು. ಆದರಿಂದ ದೊರಕಿದ್ದರಲ್ಲಿಯೇ ತೃಪ್ತಿಯಿಂದ ಜೀವನವನ್ನು ನಡೆಸುವುದು ಮಾನವಜೀವನಕ್ಕೆ ರಸಾಯನವಿದ್ದಂತೆ. ಅರ್ಥಾತ್ ಎಲ್ಲ ವಿಧ-ದಿಂದಲೂ ಶುಭಪ್ರದವಾಗಿ ಕೀರ್ತಿಯನ್ನು ತರುವುದು ಎಂದು ಇಲ್ಲಿ ಬೋಧಿಸ-ಲಾಗಿದೆ. ತಾತ್ಪರ್ಯವೆಂದರೆ ಅಭ್ಯುದಯಕ್ಕಾಗಿ ಯತ್ನಿಸುವುದು ಕರ್ತವ್ಯ-ವಾದರೂ ಅದರಲ್ಲಿ ಕುಟಿಲತನ ಮಾತ್ರ ಇರತಕ್ಕದ್ದಲ್ಲ.

## ೪೮೪. ನಾರ್ಥಿಷು ಅವಜ್ಞಾ ಕಾರ್ಯಾ

ನಮ್ಮಲ್ಲಿ ಯಾರೇ ಆಗಲಿ, ಏನಾದರೂ ಬೇಡಿದರೆ ಅವರೊಂದಿಗೆ ತಿರಸ್ಕಾರದಿಂದ ನಡೆದುಕೊಳ್ಳಬಾರದು. ನಮಗೆ ಕೊಡುವ ಮನಸ್ಸು, ಅವ-

ಕಾಶ. ಯೋಗ್ಯತೆ ಇರಲಿಲ್ಲವಾದಲ್ಲಿ ಒಳ್ಳೆಯ ಮಾತಿನಲ್ಲಿ ಆ ಸಮಸ್ಯೆಯನ್ನು ಬಗೆಹರಿಸಬೇಕು. ಬಿರುಸು ಮಾತುಗಳು ಕಾಲಾಂತರದಲ್ಲಿಯಾದರೂ ವಿಪ-ರೀತ ಪರಿಣಾಮವನ್ನುಂಟುಮಾಡುತ್ತವೆ. ಭಿಕ್ಷುಕರೊಂದಿಗೂ ಕೂಡ ಇದೇ ರೀತಿ ನಡೆದುಕೊಳ್ಳಬೇಕೆಂದು ಸೂಚಿಸಿದ್ದು, ವ್ಯವಹಾರದಲ್ಲಿ ಸೌಜನ್ಯವಿರ-ಬೇಕೆಂಬ ತತ್ವವನ್ನು ದೃಢಪಡಿಸುತ್ತದೆ.

## ೪೮೫. ಜಿಹ್ವಾಯತ್ತೌ ವೃದ್ಧಿ ವಿನಾಶೌ

ಮನುಷ್ಯನ ಅಭ್ಯುದಯ ಹಾಗು ವಿನಾಶಗಳು ನಾಲಗೆಯನ್ನೇ ಅವ-ಲಂಬಿಸಿರುತ್ತವೆ ಎಂದು ಆಲಂಕಾರಿಕವಾಗಿ ಹೇಳುವ ಈ ಸೂತ್ರವು ಮನು-ಷ್ಯನು ಅಪ್ರಿಯ ಮಾತುಗಳನ್ನು ಆಡಬಾರದು: ಕೇವಲ ಕೆಟ್ಟಮಾತುಗಳ-ನ್ನಾಡಿ ಸಹಜವಾಗಿ ಆಗಬೇಕಾದ ಕಾರ್ಯವನ್ನು ಮೂರ್ಖರು ಕೆಡಿಸಿಬಿಡು-ತ್ತಾರೆ ಎಂಬ ಅರ್ಥವು ಇಲ್ಲಿ ಗರ್ಭಿತವಾಗಿದೆ. ಸವಿ ಮಾತುಗಳಿಂದ ಏನನ್ನೂ ಸಾಧ್ಯವಾಗುವುದರಿಂದ ಮನುಷ್ಯನು ನಾಲಗೆಯ ಮೇಲೆ ನಿಯಂತ್ರಣವನ್ನಿಟ್ಟು ಪ್ರಿಯವಾಗಿ ವ್ಯವಹರಿಸಬೇಕು.

ಇಷ್ಟೆಲ್ಲ ಹೇಳಿದರೂ, ಈ ಒಂದೆ ಸತ್ಯದ ಮಹತ್ವವನ್ನು ಹೇಳುವಾಗ ಪ್ರಿಯವೆನಿಸಿದರೂ. ಅಸತ್ಯವನ್ನಾಡಬಾರದು ಎಂದು ಹೇಳಿದ್ದನ್ನು ಮರೆಯ ಲಾಗದು. ಒಟ್ಟಿನ ಮೇಲೆ ಮಾತು ಮನುಷ್ಯನಿಗೆ ಭೂಷಣ. `ವಾಗ್ಭೂಷಣಂ ಭೂಷಣಮ್' ವಾದ್ದರಿಂದ, ಅಪ್ರಿಯ ಮಾತುಗಳನ್ನಾಡಬಾರದೆಂಬುದು ತಾತ್ಪರ್ಯ.

## ೪೮೬. ವಿಷಾಮೃತಯೋರಾಕರೀ ಜಿಹ್ವಾ

ನಾಲಗೆಯು ವಿಷ ಹಾಗು ಅಮೃತ ಎರಡಕ್ಕೂ ಉಗಮಸ್ಥಾನವಿದ್ದಂತೆ. ಪ್ರಿಯ ವಚನಗಳನ್ನಾಡಿದರೆ ಅದು ಅಮೃತಕ್ಕೆ ಉಗಮವಾದರೆ, ಅಪ್ರಿಯ

ಮಾತುಗಳನ್ನಾಡುವುದು ವಿಷದ ಉಗಮಸ್ಥಾನವೆನಿಸಿಕೊಳ್ಳುತ್ತದೆ. ಎಷ್ಟೋ ಜನ ಸರಳಹೃದಯದವರು ತಮ್ಮ ಒರಟು ಮಾತಾಡುವ ಸ್ವಭಾವದಿಂದಾಗಿ ಅಪ್ರಿಯರಾಗುತ್ತಾರೆ. ಇದಕ್ಕೇ 'ಬಾಯಿಪ್ರಸಾದ' ಎಂದು ರೂಢಿಯಲ್ಲಿ ಕರೆಯುವುದುಂಟು.

## ೪೮೭. ಪ್ರಿಯವಾದಿನೋ ನ ಶತ್ರುಃ

ಇಲ್ಲಿಯ ವರೆಗಿನ ಚರ್ಚೆಯ ಆಧಾರದ ಮೇಲೆ ಪ್ರಸ್ತುತ ಸೂತ್ರದಲ್ಲಿ ಪ್ರಿಯವಾದಿಗೆ ಶತ್ರುಗಳೇ ಇಲ್ಲ ಎಂದು ಹೇಳಲಾಗಿದೆ. ನಿಷ್ಕಾರಣವಾಗಿ ಕೇವಲ ಅಪಶಬ್ದಗಳ ಪ್ರಯೋಗದಿಂದ ಮೈತ್ರಿಯನ್ನು ಕೆಡಿಸಿಕೊಂಡ ಉದಾಹರಣೆಗಳಿಗೆ ಕೊರತೆಯಿಲ್ಲ.

ಇಲ್ಲಿ ಇನ್ನೊಂದು ಮಾತನ್ನು ನಾವು ಮರೆಯಕೂಡದು. ಕೇವಲ ಸವಿಮಾತುಗಳನ್ನಾಡಿ, ಹೃದಯದಲ್ಲಿ ವಿಷವನ್ನು ತುಂಬಿಕೊಂಡಿರುವುದು ಪರಮನೀಚರ ಲಕ್ಷಣ. 'ಮಧು ತಿಷ್ಠತಿ ಜಿಹ್ವಾಗ್ರೇ. ಹೃದಯೇ ತು ಹಲಾಹಲಮ್' ಆದ್ದರಿಂದ, ಇಂಥ ಸವಿಮಾತುಗಳನ್ನು ಆಡುವುದಕ್ಕಾಗಿ ಚಾಣಕ್ಯನು ಇಲ್ಲಿ ಬೋಧಿಸಿಲ್ಲ.

ಹೃದಯ ಪರಿಶುದ್ಧತೆ. ಸತ್ಯದ ಪಾಲನೆ. ಮಾತುಗಳಲ್ಲಿ ಸೌಜನ್ಯ, ನಾಲಗೆಯ ಮೇಲೆ ನಿಯಂತ್ರಣ—ಇವೆಲ್ಲವೂ ಅವಶ್ಯವೆಂಬುದು ನಿಜವಾದ ತಾತ್ಪರ್ಯ.

## ೪೮೮. ಅನೃತಮಪಿ ದುರ್ವಚನಂ ಚಿರಂ ತಿಷ್ಠತಿ

ಸುಮ್ಮನೆ ತಮಾಷೆಗಾಗಿ ಅಥವಾ ಇನ್ನಾವ ಕಾರಣದಿಂದಲೇ ಆಗಲಿ, ಸತ್ಯವಲ್ಲದಿದ್ದರೂ ಅಪ್ರಿಯ ಮಾತುಗಳನ್ನಾಡಿದ್ದು ಅಳಿಸಿಹೋಗಲಾರದು.

ಆದ್ದರಿಂದ ಯಾವ ಸಂದರ್ಭದಲ್ಲಿಯೂ ಅಪ್ರಿಯ ಅಥವಾ ದುರ್ವಚನಗಳ-ನ್ನಾಡಬಾರದು.

## ೪೮೯. ಶ್ರುತಿ ಸುಖಾತ್ ಕೋಕಿಲಾಲಾಪಾತ್ ತುಷ್ಯತಿ

ಪ್ರಿಯವಚನದಿಂದ ಸಂತೋಷವಾಗುತ್ತದೆಂಬುವಕ್ಕೆ ದೃಷ್ಟಾಂತರೂಪ-ವಾಗಿ, ಕೋಗಿಲೆಯ ಮಧುರಾಲಾಪವು ಸಂತಸವನ್ನುಂಟುಮಾಡುತ್ತದೆಂದು ಇಲ್ಲಿ ಹೇಳಲಾಗಿದೆ.

## ೪೯೦. ಸ್ವಧರ್ಮ ಹೇತುಃ ಸತ್ಪುರುಷಃ

ಸ್ವಧರ್ಮವನ್ನಾಚರಿಸುವುದು ಸತ್ಪುರುಷರ ಮುಖ್ಯ ಲಕ್ಷಣ. ಧರ್ಮಾಚರಣೆಯೆಂದರೆ, ಅವರಲ್ಲಿ ಅಧರ್ಮದ ಪರಿತ್ಯಾಗವೂ ಅಡಕವಾಗಿರುತ್ತದೆ ಎಂಬುದನ್ನು ಮರೆಯಲಾಗದು. ಯಾವುದೇ ಧರ್ಮದ ಗುರಿಯಾಗಲಿ ಮನುಷ್ಯನ ಕಲ್ಯಾಣಕ್ಕಾಗಿಯೇ ಇರುತ್ತದೆ. ಕೇವಲ ದೇಶ, ಕಾಲ ಭೇದ-ದಿಂದಾಗಿ ಕೆಲವೊಂದು ಸಂಪ್ರದಾಯಗಳಲ್ಲಿ ಭೇದ ತೋರಬಹುದು. ಆದರೆ ಸದಾಚಾರವೇ ಧರ್ಮಕ್ಕೆ ತಳಹದಿ. ಯಾವ ಧರ್ಮವೂ ಪರಪೀಡೆಯನ್ನು ಬೋಧಿಸುವುದಿಲ್ಲ, ಅಸತ್ಯವನ್ನೂ ಎತ್ತಿಹಿಡಿಯುವುದಿಲ್ಲ. ಕೇವಲ ಸಾಧನೆ-ಗಳಲ್ಲಿ ಮಾತ್ರ ವೈವಿಧ್ಯವು ಕಂಡುಬರಬಹುದು. ಅತಿಯಾದ ಅಭಿಮಾನದಿಂದ ( ದುರಭಿಮಾನ ) ಪರಧರ್ಮಸಹಿಷ್ಣುತೆ ಲುಪ್ತಪ್ರಾಯವಾಗುವ ಸಂಭವ ಹೆಚ್ಚು. ಅವಕ್ಕೆ ದೃಷ್ಟಾಂತಗಳು ಅಲ್ಲಲ್ಲಿ ದೊರೆಯುತ್ತವೆ. ಇದು ಆಯಾ ಧರ್ಮದ ದೋಷವಲ್ಲ, ಅದನ್ನು ದುರಭಿಮಾನದಿಂದ ನೋಡುವ ಧರ್ಮಾಂಧರ ದೋಷ. ಆದರೆ ಧರ್ಮವು ಕಲ್ಯಾಣಕ್ಕಾಗಿ ಇರುವುದರಿಂದ ಅದರ ಆಚರಣೆಯು ಮನುಷ್ಯನನ್ನು ಸತ್ಪುರುಷನನ್ನಾಗಿ ಪರಿವರ್ತಿಸುತ್ತದೆ ಎಂಬುದು ಅಬಾಧಿತವಾದ ಸತ್ಯ.

## ೪೯೦. ನಾಸ್ತ್ಯರ್ಥಿನೋ ಗೌರವಮ್

ಯಾಚಕನಿಗೆ ಅಥವಾ ಬೇರೊಬ್ಬರಿಂದ ಸಹಾಯ ಅಥವಾ ಉಪ-ಕಾರವನ್ನು ಬಯಸುವವನಿಗೆ ಗೌರವವನ್ನು ಕಳೆದುಕೊಳ್ಳಬೇಕಾಗುತ್ತದೆ. ' ಯಾಚನೆ ' ಎಂಬ ಕ್ರಿಯೆಯಲ್ಲಿ ಬೇಡುವವನ ಕಡಿಮೆತನ ಹಾಗು ಕೊಡು-ವವನ ದೊಡ್ಡಸ್ತಿಕೆ ಅಡಕವಾಗಿರುತ್ತದೆ. ಅಂತೆಯೇ ಯಾಚನೆ ಮಾಡು-ವವನ ಬಾಯಿಯಿಂದ ' ದೇಹಿ ' ಎಂಬ ಶಬ್ದ ಹೊರಬಂದೊಡನೆ, ಅದನ್ನು ಹಿಂಬಾಲಿಸಿಯೇ ಅವನ ದೇಹದಲ್ಲಿ ನೆಲೆಸಿದ ಲಜ್ಜೆ, ಧೈರ್ಯ, ಬುದ್ಧಿ, ಕೀರ್ತಿ ಹಾಗು ಸ್ವಪತ್ತುಗಳ ಅಧಿಷ್ಠಾತ್ರಿ ದೇವತೆಗಳು ಹೊರಬರುತ್ತವೆ ಎಂದು ಆಲಂಕಾರಿಕವಾಗಿ ಹೇಳಲ್ಪಡುತ್ತದೆ. ಅಯಾಚಿತ ವೃತ್ತಿಯಿಂದ ಜೀವಿ-ಸುವುದೇ ಮನುಷ್ಯನ ಘನತೆಯನ್ನು ಉಳಿಸಬಲ್ಲದು.

## ೪೯೧. ಶತ್ರೋರಪಿ ನ ಪಾತನೀಯಾ ವೃತ್ತಿಃ

ಶತ್ರುವಿನ ಜೀವನೋಪಾಯವನ್ನು ಕೂಡ ನಾಶಮಾಡದಿರುವುದೇ ಒಳ್ಳೆಯತನದ ಲಕ್ಷಣ ಎಂಬ ಭಾವನೆ ಈ ಸೂತ್ರದಲ್ಲಿ ಅಡಕವಾಗಿದೆ. ' ಲೋಕಾ ಸಮಸ್ತಾಃ ಸುಖಿನೋ ಭವಂತು ' ಎಂಬ ಉದಾತ್ತ ತತ್ವದ ಪ್ರಕಾರ ನಮ್ಮ ಶತ್ರುವಿಗೆ ಕೂಡ ' ಉಂಡುಟ್ಟು ಸುಖದಿಂದಿರುವ ' ಅಧಿಕಾರ-ವಿದೆ. ಅದಕ್ಕಿಂದೇ ನಾವು ಮನುಷ್ಯರೆಂದೆನಿಸಿಕೊಳ್ಳಲು ಅರ್ಹರಾಗಬೇಕಾದರೆ, ಶತ್ರುವಿನ ವೃತ್ತಿಚ್ಛೇದನೆಯನ್ನು ( ಹೊಟ್ಟೆಯ ಮೇಲೆ ಕಾಲು ಕೊಡುವು-ದನ್ನು ) ಮಾಡಬಾರದು. ಇದರಿಂದ ಭಗವಂತನು ಪ್ರೀತನಾಗುತ್ತಾನೆ. ಗೀತೆಯ ಹನ್ನೊಂದನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ' ನಿರ್ವೈರಃ ಸರ್ವಭೂತೇಷು ' ಎಂದು ಹೇಳಿದ್ದು ಇದೇ ಉದ್ದೇಶದಿಂದ. ಇದು ಧಾರ್ಮಿ-ಕತೆಯ ಪರಾಕಾಷ್ಠತೆ. ರಾಜಕಾರಣದಲ್ಲಿ ಮಾತ್ರ ಇದಕ್ಕೆ ಅವಕಾಶವಿಲ್ಲ.

## ೪೯೩. ಅಪ್ರಯತ್ನೋದಕಂ ಕ್ಷೇತ್ರಮ್

ಸರ್ವಜ್ಞಪ್ರಾಯನಾದ ಚಾಣಕ್ಯನು ಪ್ರಸಂಗಾನುಸಾರವಾಗಿ ಎಲ್ಲ ವಿಷಯಗಳ ಮೇಲೂ ತನ್ನ ಅಭಿಪ್ರಾಯವನ್ನು ಕೊಟ್ಟಿದ್ದಾನೆ. ಪ್ರಸ್ತುತ ಸೂತ್ರದಲ್ಲಿ ನೀರಿನ ಅನುಕೂಲತೆಯಿದ್ದ ಭೂಮಿಯೇ ಸಾಗುವಳಿಗೆ ಯೋಗ್ಯ-ವಾದದ್ದು ಎಂದು ಅಭಿಪ್ರಾಯ ಕೊಡಲಾಗಿದೆ. ನೀರಿಲ್ಲದೆ ಹುಲುಸಾಗಿ ಬೆಳೆ ಬರಲಾರದು. ಪ್ರತಿವರ್ಷವೂ ಮಳೆಗಾಲವು ಸರಿಯಾಗಿ ಆಗುವುದೆಂಬ ಭರ-ವಸೆ ಇರುವುದಿಲ್ಲ. ಆದ್ದರಿಂದ ಕೆರೆ, ಬಾವಿ, ಆಣೆಕಟ್ಟು ಇತ್ಯಾದಿಗಳ ಮೂಲಕ ಬೆಳೆಗಳಿಗೆ ನೀರಿನ ಅನುಕೂಲತೆಯಿದ್ದರೇನೇ ಅದು ಸುಕ್ಷೇತ್ರ-ವೆನಿಸಿಕೊಳ್ಳುವುದು. ಕೃಷಿಪ್ರಧಾನವಾದ ಭಾರತದಲ್ಲಿ ಮಳೆಯಾಗಲಿಲ್ಲವೆಂದರೆ ರೈತರು ಕಂಗಾಲಾಗುವ ಸಂಗತಿ ಗೊತ್ತಿಲ್ಲದ್ದೇನಲ್ಲ. ಇದರಲ್ಲಿ ಸರಕಾರವು ನೀರಾವರಿ ಯೋಜನೆಗಳ ಕಡೆಗೆ ಲಕ್ಷ್ಯಕೊಡಬೇಕು ಎಂಬ ಧ್ವನಿ ಇಲ್ಲದಿಲ್ಲ.

## ೪೯೪. ನ ಪ್ರವೃದ್ಧತ್ವಂ ಹೇತುಃ

ಸುಮ್ಮನೆ ಬೆಳವಣಿಗೆ ಹೆಚ್ಚಾಗಿದ್ದ ಮಾತ್ರಕ್ಕೆ ಸಾಮರ್ಥ್ಯ ಅಥವಾ ಯೋಗ್ಯತೆ ಬರುತ್ತದೆಂಬ ಅರ್ಥವಲ್ಲ ಎನ್ನುವ ಧಾಟಿಯಲ್ಲಿ ಈ ಸೂತ್ರವು ಹೇಳಲ್ಪಟ್ಟಿದೆ. ಆಕಾರಕ್ಕೂ, ಸಾಮರ್ಥ್ಯಕ್ಕೂ ಅನ್ಯೋನ್ಯ ಸಂಬಂಧವಿಲ್ಲ ಸಿಕ್ಕಾಪಟ್ಟೆ ಬೆಳೆದ ಚಿಕ್ಕವಯಸ್ಸಿನವನು ಬೆಳವಣಿಗೆಯಿಲ್ಲದಿದ್ದರೂ, ಗಟ್ಟಿ-ಮುಟ್ಟಾಗಿದ್ದ ಪ್ರಾಯದವನೊಂದಿಗೆ ಮಲ್ಲಯುದ್ಧಕ್ಕೆ ಇಳಿಯಲಾರ. ಹಾಗೆಯೇ ಬಹಳಷ್ಟು ' ಉಪಾಧಿ ' ( ಡಿಗ್ರಿ ) ಗಳನ್ನು ಪಡೆದವನು ಉಪಾಧಿ ಗಳಿಲ್ಲದ ನಿಜವಾದ ಬುದ್ಧಿವಂತನಿಗೆ ಸಮಾನವೆನಿಸಲಾರ. ಸಾಮರ್ಥ್ಯವು ವಸ್ತುವಿನ ವೈಶಿಷ್ಟ್ಯವನ್ನವಲಂಬಿಸಿರುತ್ತದೆ ಎಂಬುದಕ್ಕೆ ಮುಂದಿನ ಸೂತ್ರ-ಗಳಲ್ಲಿ ದೃಷ್ಟಾಂತಗಳನ್ನು ಕೊಡಲಾಗಿದೆ.

## ೪೯೫, ಏರಂಡಮವಲಂಬ್ಯ ಕುಂಜರಂ ನ ಕೋಪಯೇತ್

ಅತಿಯಾಗಿ ಬೆಳೆದ ಔಡಲಗಿಡದ ಆಶ್ರಯದ ಬಲದ ಮೇಲೆ ಆನೆಯ ದ್ರೋಹವನ್ನು ಕಟ್ಟಿಕೊಳ್ಳಬಾರದು. ಔಡಲಕ್ಕಿಂತ ಬಲಹೀನ ಗಿಡವಿಲ್ಲ. ಆನೆಗಿಂತ ಶಕ್ತಿವಂತ ಪ್ರಾಣಿಯಿಲ್ಲ. ಹೀಗಿರುವಾಗ ಅತಿ ಶಕ್ತಿಶಾಲಿಯಾದ ಆನೆಯನ್ನು ಸಿಟ್ಟಿಗೆಬ್ಬಿಸಿದರೆ. ಔಡಲಗಿಡವು ಎಂತಹ ರಕ್ಷಣೆಯನ್ನು ಕೊಟ್ಟೀತು ? ಆದ್ದರಿಂದ ಕೇವಲ ಬೆಳವಣಿಗೆಯ ಮೇಲೆ ಭರವಸೆಯಿಟ್ಟು, ಔಡಲಗಿಡಕ್ಕೆ ಶರಣುಹೋಗುವುದು ಮೂರ್ಖರ ಲಕ್ಷಣವೆಂದು ತಿಳಿಸುವುದ-ಕ್ಕಾಗಿ, ಹಾಗು ಅತಿ ಕ್ಷುಲ್ಲಕ ಆಶ್ರಯ ಅಥವಾ ಭರವಸೆಯ ಆಧಾರದ ಮೇಲೆ ಬಲಿಷ್ಠರೊಂದಿಗೆ ಕದನಕ್ಕಿಳಿಯಬಾರದೆಂದು ಈ ಸೂತ್ರವು ಸೂಚಿಸುತ್ತದೆ.

## ೪೯೬. ಅತಿ ಪ್ರವೃದ್ಧಾ ಶಾಲ್ಮಲೀ ವಾರಣಸ್ತಂಭೋ ನ ಭವತಿ

ಬೇಕಾದಷ್ಟು ಬೆಳೆದಿದ್ದರೂ. ಬೂರಲಗಿಡಕ್ಕೆ ಆನೆಯನ್ನು ಬಂಧಿಸಿ. ಕಟ್ಟಲು ಸಾಧ್ಯವಿಲ್ಲ. ಪೊಳ್ಳು ಬೂರಲಗಿಡದ ಶಕ್ತಿಯು ಆನೆಯನ್ನು ನಿಗ್ರಹಿಸ-ಲಾರದು. ತಾತ್ಪರ್ಯವೆಂದರೆ, ಸಣ್ಣ ಬಾಯಿಯಿಂದ ದೊಡ್ಡ ತುತ್ತನ್ನು ನುಂಗಲು ಪ್ರಯತ್ನಿಸಬಾರದು. ತಮ್ಮ ಯೋಗ್ಯತೆಯನ್ನರಿತು ಕಾರ್ಯ-ನಿರ್ವಹಣೆಯ ಹೊಣೆಗಾರಿಕೆಯನ್ನು ಸ್ವೀಕರಿಸಬೇಕು.

## ೪೯೭. ಅತಿ ದೀರ್ಘೋಽಪಿ ಕರ್ಣಿಕಾರೋ ನ ಮುಸಲೀ

ಕರ್ಣಿಕಾರವೆಂದರೆ. ಒಂದು ಜಾತಿಯ ಹೂವಿನ ಗಿಡ. ಇದರ ಕಟ್ಟಿಗೆ-ಯಿಂದ ಒನಕೆಯನ್ನು ಮಾಡಲು ಸಾಧ್ಯವಿಲ್ಲ. ಅದಕ್ಕೆ ಅವಶ್ಯವಿದ್ದ ಗಟ್ಟಿ-

ತನ ಈ ಹೂವಿನ ಗಿಡದಲ್ಲಿ ಇರಲಾರದು. ಮೇಲಿನ ಎರಡು ಸೂತ್ರಗಳಂತೆಯೇ ಇಲ್ಲಿಯೂ ಅಲ್ಪ ಸಾಮರ್ಥ್ಯ ಅಥವಾ ಸಹಾಯದ ಬಲದಿಂದ ದೊಡ್ಡ ಸಾಹಸಕ್ಕಿಳಿಯಬಾರದೆನ್ನುವ ಧ್ವನಿಯೇ ಇದೆ.

## ೪೯೮. ಅತಿ ದೀಪ್ತೋಽಪಿ ಖದ್ಯೋತೋ ನ ಪಾವಕಃ

ಎಷ್ಟೇ ಮಿನುಗುತ್ತಿದ್ದರೂ ದೀಪದಹುಳವು ಬೆಂಕಿಯೆನಿಸಲಾರದು—ಎಂಬ ಈ ದೃಷ್ಟಾಂತವು ಕೂಡ ಈ ಹಿಂದಿನ ವಿಚಾರವನ್ನೇ ಸಮರ್ಥಿಸುತ್ತದೆ.

## ೪೯೯. ಸುಜೀರ್ಣೋಽಪಿ ಪಿಚುಮಂದೋ ನ ಶಂಕುಲಾಯತೇ

ಎಷ್ಟೇ ಹಳೆಯದಾಗಿದ್ದರೂ, ಬೇವಿನ ಕಟ್ಟಿಗೆಯಿಂದ ಕತ್ತರಿಯನ್ನು ತಯಾರಿಸಲು ಸಾಧ್ಯವಿಲ್ಲ. ಅದಕ್ಕೆ ಕಬ್ಬಿಣದ ತುಂಡುಗಳೇ ಬೇಕು. ಹಳೆಯದಿದ್ದ ಮಾತ್ರಕ್ಕೆ ಗುಣ ಬದಲಾಗದು. ಅತಿ ವೃದ್ಧನಾದ ಮಾತ್ರಕ್ಕೆ, ಚಿಕ್ಕ ವಯಸ್ಸಿನಲ್ಲಿಯೇ ಅಸಾಧಾರಣ ಪಾಂಡಿತ್ಯವನ್ನು ಗಳಿಸಿದ ವ್ಯಕ್ತಿಗೆ ಅವನು ಸರಿಯೆನಿಸಲಾರ.

## ೫೦೦. ಯಥಾ ಬೀಜಃ ತಥಾ ನಿಷ್ಪತ್ತಿಃ

ಬೀಜಕ್ಕೆ ತಕ್ಕಂತೆ ಫಲ. ಗೋಧಿಯನ್ನು ಬಿತ್ತಿ ಕಡಲೆಯ ಬೆಳೆಯನ್ನು ತೆಗೆದುಕೊಳ್ಳಬೇಕೆಂದರೆ ಸಾಧ್ಯವಾಗಲಾರದು. ಬಿತ್ತಿದ್ದನ್ನೇ ಬೆಳೆದುಕೊಳ್ಳಬೇಕಲ್ಲವೇ ? ಇದರ ಗರ್ಭಿತಾರ್ಥವೆಂದರೆ, ನಮ್ಮ ಕರ್ಮಕ್ಕೆ ತಕ್ಕಂತೆ ಫಲ

ದೊರೆಯುವುದು. ಅಥವಾ ತಂದೆಯಂತೆ ಮಕ್ಕಳು, ಕಾರಣದಂತೆ ಕಾರ್ಯ. ಈ ತತ್ತ್ವದ ಮೇಲೆಯೇ ವೇದಾಂತದರ್ಶನವು ಪ್ರತಿಪಾದಿತವಾಗಿದೆ.

## ೫೦೧. ಯಥಾ ಶ್ರುತಂ ತಥಾ ಬುದ್ಧಿಃ

ನಮ್ಮ ಅಧ್ಯಯನಕ್ಕೆ ತಕ್ಕಂತೆ ಬುದ್ಧಿ ಇರುವುದು ಸಹಜ. ವೇದಾಂತ ಶಾಸ್ತ್ರವನ್ನು ಅಧ್ಯಯನ ಮಾಡಿದವನ ವಿಚಾರಗಳು ಹೆಚ್ಚಾಗಿ ಪಾರಲೌಕಿಕವೆನಿಸಿದರೆ, ರಾಜಕಾರಣದ ವಿದ್ಯಾರ್ಥಿಯ ದೃಷ್ಟಿಕೋನವು ಲೌಕಿಕವೆನಿಸುತ್ತದೆ. ಹೀಗೆಯೇ ಆಯುರ್ವೇದ, ಜ್ಯೋತಿಷ್ಯ, ಕರ್ಮಮೀಮಾಂಸಾ—ಇತ್ಯಾದಿ ವಿಭಿನ್ನ ಶಾಸ್ತ್ರಗಳನ್ನು ಅಧ್ಯಯನ ಮಾಡಿದವರ ವಿಚಾರಗಳು ಆ ಶಾಸ್ತ್ರಗಳಲ್ಲಿಯ ಮರ್ಮಕ್ಕನುಗುಣವಾಗಿಯೇ ಇರುತ್ತವೆ. ವ್ಯಾಪಾರಿಗಳ ಬುದ್ಧಿಯು ಯಾವಾಗಲೂ ಲಾಭವನ್ನೇ ಗುರಿಯಾಗಿಟ್ಟುಕೊಂಡಿರುತ್ತದೆ.

## ೫೦೨. ಯಥಾ ಕುಲಂ ತಥಾಚಾರಃ

ಕುಲಕ್ಕನುಗುಣವಾಗಿ ಮನುಷ್ಯರಲ್ಲಿ ಆಚಾರವಿರುತ್ತದೆ. ಒಳ್ಳೆಯ ಕುಲದವರಲ್ಲಿ ಶುಚಿತ್ವ, ಸೌಜನ್ಯ, ಸರಳತೆ—ಇವೆಲ್ಲ ಇದ್ದರೆ, ದುಷ್ಕುಲದಲ್ಲಿ ಜನಿಸಿದವರಿಗೆ ಪ್ರಕೃತಿಸಿದ್ಧವಾಗಿ ಕ್ರೌರ್ಯ, ಅವಾಚ್ಯ ಶಬ್ದಗಳನ್ನಾಡುವುದು, ಸುಳ್ಳು, ಮೋಸ -ಇವೆಲ್ಲ ಬರುತ್ತವೆ. ಇಲ್ಲಿ ' ಕುಲ ' ಶಬ್ದವು ಜಾತಿಯನ್ನು ಬೋಧಿಸದೆ, ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ ಎಂಬುದನ್ನು ಮರೆಯಲಾಗದು. ನಮ್ಮ ಸುತ್ತಮುತ್ತಲಿನ ಸಮಾಜದಲ್ಲಿ ಇದಕ್ಕೆ ಬೇಕಾದಷ್ಟು ದೃಷ್ಟಾಂತಗಳು ದೊರೆಯಬಹುದು.

## ೫೦೩. ಸಂಸ್ಕೃತಃ ಪಿಚುಮಂದಃ ಸಹಕಾರೋ ನ ಭವತಿ

ಎಷ್ಟೇ ಸಂಸ್ಕಾರ ಮಾಡಿದರೂ ಬೇವಿನಗಿಡವು ಮಾವಿನಮರವಾಗಲಾರದು. ಸಂಸ್ಕಾರವೆಂದರೆ ದೋಷಗಳನ್ನು ತೆಗೆದುಹಾಕಿ. ಗುಣಗಳನ್ನು ಹುಟ್ಟಿಸುವುದು. ಅನ್ನಸಂಸ್ಕಾರವೆಂದರೆ, ಅಕ್ಕಿಯನ್ನು ಸ್ವಚ್ಛಮಾಡಿ ( ದೋಷವನ್ನು ತೆಗೆದು ) ನೀರಿನಲ್ಲಿ ಕುದಿಸುವುದು. ( ಗುಣಗಳನ್ನು ಸೃಷ್ಟಿಸುವುದು ). ಅಂದರೆ ಊಟಕ್ಕೆ ಅದು ಯೋಗ್ಯವಾಗುತ್ತದೆ. ಈ ದೃಷ್ಟಾಂತದ ಮೂಲಕ ಹುಟ್ಟುಗುಣಗಳು ಎಷ್ಟೇ ಸಂಸ್ಕಾರ ಮಾಡಿದರೂ ಬದಲಾಗುವುದು ಸುಲಭವಲ್ಲವೆಂದು ಪ್ರತಿಪಾದಿಸಲಾಗಿದೆ.

## ೫೦೪. ನ ಚ ಆಗತಂ ಸುಖಂ ತ್ಯಜೇತ್

ತಾನಾಗಿ ಬಂದ ಸುಖವನ್ನು ಎಂದೂ ತ್ಯಜಿಸಬಾರದು. ಇವೆಲ್ಲ ಅನಿರೀಕ್ಷಿತ ಘಟನೆಗಳು. ದೈವಾನುಗ್ರಹದಿಂದ ಒದಗಿಬಂದಂಥವುಗಳು. ಮೇಲಿಂದ ಮೇಲೆ ಬರುವುದು ಇವುಗಳ ಸ್ವಭಾವವಲ್ಲ. ಆದ್ದರಿಂದ ಇವನ್ನು ತಿರಸ್ಕರಿಸಿದರೆ ಜನ್ಮವಿರುವ ವರೆಗೆ ಪಶ್ಚಾತ್ತಾಪಪಡಬೇಕಾಗುವುದು. ಇಲ್ಲಿ ತಿಳಿದುಕೊಳ್ಳಬೇಕಾದ ಮಹತ್ವದ ವಿಷಯವೆಂದರೆ, ಇಂಥ ಅನಿರೀಕ್ಷಿತ ಘಟನೆಗಳ ಹಿಂದೆ ಅಥವಾ ಮುಂದೆ ಅಧರ್ಮದ ತೊಡಕಿರಬಾರದು. ಅರ್ಥಾತ್ ಪರಸ್ತ್ರೀ ಅಥವಾ ಪರಧನವು ಅನಾಯಾಸವಾಗಿ ಲಭ್ಯವಾದರೆ, ಅದನ್ನು ಸ್ವೀಕರಿಸುವುದು ಅನ್ಯಾಯವೆಂಬುದು ಶತಸ್ಸಿದ್ಧ. ಆದ್ದರಿಂದ ಧರ್ಮಕ್ಕೆ ಅವಿರೋಧವಾಗಿ ಒದಗಿಬಂದ ಅನಿರೀಕ್ಷಿತ ಸುಖವನ್ನು ಉಪಭೋಗಿಸಬಹುದು.

## ೫೦೫. ರಾತ್ರಿ ಚರಣಂ ನ ಕುರ್ಯಾತ್

ರಾತ್ರಿಯಲ್ಲಿ ಕಾರಣವಿಲ್ಲದೆ ತಿರುಗಾಡಬಾರದು. ಅದು ರಾಕ್ಷಸರ ಲಕ್ಷಣ. ಅದಕ್ಕೆಂದೇ ಅವರಿಗೆ ನಿಶಾಚರರೆಂದು ಕರೆಯುವುದು. ಇನ್ನೊಂದು

ಕಾರಣವೆಂದರೆ, ಚೌರ್ಯ, ವ್ಯಭಿಚಾರ ಇತ್ಯಾದಿ ದುಷ್ಕರ್ಮಗಳು ರಾತ್ರಿಯಲ್ಲಿಯ ಕಾರ್ಯಗಳೆಂದೇ ಅವನ್ನು 'ರಜನೀಚರಿತ' ಎಂದು ಕರೆಯಲಾಗುತ್ತದೆ. ರಾತ್ರಿಯಲ್ಲಿಯ ತಿರುಗಾಟವು ಮನುಷ್ಯನನ್ನು ಚರಿತ್ರಹೀನನನ್ನಾಗಿ ಚಿತ್ರಿಸುತ್ತದೆಂದು ಅದು ತ್ಯಾಜ್ಯ.

## ೫೦೬. ನ ಚ ಅರ್ಧರಾತ್ರಂ ಸ್ವಪೇತ್

ಮಧ್ಯರಾತ್ರಿ ಅಥವಾ ಅದಕ್ಕೂ ತಡವಾಗಿ ಮಲಗಬಾರದು. ರಾತ್ರಿಗೆ 'ತ್ರಿಯಾಮಾ' (ಒಂಬತ್ತು ಗಂಟೆಗಳ ಅವಧಿ) ಎಂದು ಹೆಸರು. ಸೂರ್ಯಾಸ್ತದ ನಂತರ ಮೂರು ಗಂಟೆಗಳಲ್ಲಿ ಎಲ್ಲ ಕೆಲಸಗಳನ್ನು ಮುಗಿಸಿ ಮಲಗಬೇಕು. ಅಂದರೆ ಬೆಳಗಾಗುವ ವರೆಗೆ ಮೂರು ಯಾಮಗಳು ಕಳೆದು, ಸೂರ್ಯೋದಯಕ್ಕೆ ಮುಂಚೆ ಪ್ರಾತಃರ್ವಿಧಿಗಳನ್ನು ಮುಗಿಸಿಕೊಳ್ಳಲು ಅನುಕೂಲವಾಗುತ್ತದೆ. ನಿದ್ರೆಗಿಂತ ಹೆಚ್ಚಿನ ವಿಶ್ರಾಂತಿಯಿಲ್ಲ, ತಿರುಗಾಟಕ್ಕಿಂತ ಹೆಚ್ಚಿನ ವ್ಯಾಯಾಮವಿಲ್ಲ ಎಂದು ಹೇಳುವುದು ಇದಕ್ಕಾಗಿಯೇ. ಪ್ರತಿನಿತ್ಯವೂ ನಿದ್ರೆಯ ಪ್ರಮಾಣವನ್ನು ಕಡಿಮೆಮಾಡುತ್ತ ಹೋದರೆ, ಆರೋಗ್ಯವು ಕೆಟ್ಟು, ಮನಃಸ್ಥಿತಿ ಶಾಂತವಾಗಿ ಉಳಿಯಲಾರದು. ಆದ್ದರಿಂದ ಬೇಗನೆ ಮಲಗಿ, ಬೇಗನೆ ಏಳುವುದು ಒಳ್ಳೆಯ ಲಕ್ಷಣ.

## ೫೦೭. ಶಾಸ್ತ್ರಪ್ರಧಾನಾ ಲೋಕವೃತ್ತಿಃ

ಲೋಕವ್ಯವಹಾರವು ಶಾಸ್ತ್ರಪ್ರಮಾಣಕ್ಕನುಗುಣವಾಗಿ ನಡೆಯಬೇಕಾದದ್ದು ಅವಶ್ಯ. ತದ್ವಿರುದ್ಧವಾದ ಅಶಾಸ್ತ್ರ ವ್ಯವಹಾರವು ಕಲ್ಯಾಣಪ್ರದವಲ್ಲ ಎಂಬ ಅಭಿಪ್ರಾಯದಲ್ಲಿ ಈ ಸೂತ್ರವು ರಚಿಸಲ್ಪಟ್ಟಿದೆ. ಭಗವದ್ಗೀತೆಯ ಹದಿನಾರನೆಯ ಅಧ್ಯಾಯದ ಕೊನೆಗೆ, ಭಗವಂತನು—

ತಸ್ಮಾತ್ ಶಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯ ವ್ಯವಸ್ಥಿತಾ ।
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮಕರ್ತುಮಿಹಾರ್ಹಸಿ ॥

ಯಾವುದು ಕಾರ್ಯ, ಯಾವುದು ಅಕಾರ್ಯವೆಂಬುದನ್ನು ನಿರ್ಧರಿಸಬೇಕಾದಾಗ, ಶಾಸ್ತ್ರಪ್ರಮಾಣವೆ ಅದಕ್ಕೆ ಪರಮಾಧಾರ. ಆದ್ದರಿಂದ ಅದಕ್ಕನುಗುಣವಾಗಿ ನೀನು ನಡೆದುಕೊಳ್ಳತಕ್ಕದ್ದು ಎಂದು ಅರ್ಜುನನಿಗೆ ಉಪದೇಶಿಸಿದ್ದನ್ನೇ ಈ ಸೂತ್ರವು ಪುನರುಚ್ಚರಿಸುತ್ತದೆ.

## ೫೦೮. ತದ್ವಿದ್ವದ್‌ಭಿಃ ಪರೀಕ್ಷೇತ

ಶಾಸ್ತ್ರದಲ್ಲಿ ಹೇಳಿದ್ದೆಲ್ಲ ಸಾಮಾನ್ಯರಿಗೆ ಅರ್ಥವಾಗುತ್ತದೆ ಎಂದಲ್ಲ. ಆದ್ದರಿಂದ ನಮಗೆ ಕಾರ್ಯಾಕಾರ್ಯಗಳ ವಿಷಯದಲ್ಲಿ ಸಂಶಯ ಬಂದಾಗ, ಶಾಸ್ತ್ರಜ್ಞರಿಂದ ಪರೀಕ್ಷಿಸಿ, ಅವರ ಆದೇಶದಂತೆ ನಡೆದುಕೊಳ್ಳಬೇಕು. ನಾವೇನು ಕಡಿಮೆಯವರಲ್ಲ ಎಂಬ ದುರಭಿಮಾನದಿಂದ ಗ್ರಂಥದ ಪಾಠಗಳನ್ನು ತಿರುತಿರುವಿ ಅರ್ಥೈಸಲು ಮುನ್ನುಗ್ಗಬಾರದು. ಶಾಸ್ತ್ರತಾತ್ಪರ್ಯವನ್ನು ನಿರ್ಣಯಿಸುವುದಕ್ಕಾಗಿಯೇ ಪೂರ್ವಮೀಮಾಂಸಾದರ್ಶನದ ಒಂದು ಭಾಗವು ಮೀಸಲಾಗಿದೆ. ಅದನ್ನು ಅಭ್ಯಸಿಸಿದವರಿಂದ ನಿರ್ಣಯ ಪಡೆದು, ಧರ್ಮಕ್ಕೆ ವಿರೋಧವಾಗದಂತೆ ನಡೆದುಕೊಳ್ಳಬೇಕು.

## ೫೦೯. ಶಾಸ್ತ್ರಾಭಾವೇ ಶಿಷ್ಟಾಚಾರಮನುಗಚ್ಛೇತ್

ಒಮ್ಮೊಮ್ಮೆ ಕಾಲಮಾನಪರಿಸ್ಥಿತಿಗನುಸಾರವಾಗಿ ಹೊಸ-ಹೊಸ ಸಮಸ್ಯೆಗಳು ಉದ್ಭವಿಸಿದಾಗ, ಪ್ರಾಚೀನ ಕಾಲದಲ್ಲಿ ಅಂಥ ಸಮಸ್ಯೆಗಳು ಇಲ್ಲದ್ದರಿಂದಾಗಿ ಋಷಿಗಳು ಅವನ್ನು ಚರ್ಚಿಸದೆ ಇದ್ದ ಸಾಧ್ಯತೆಯು ಇದೆ. ಅಂಥ ಪ್ರಸಂಗಗಳಲ್ಲಿ ಸಮದರ್ಶಿಗಳು, ಸಮನ್ವಯ ಭಾವನೆ ತಳೆದವರು,

ಮತಾಂಧತೆ ಇಲ್ಲದವರು ಆದ ಜ್ಞಾನಿಗಳ ಆಚಾರವನ್ನು ಅನುಸರಿಸಿ, ಅವರ ಸೂಚನೆಯಂತೆ ನಡೆದುಕೊಳ್ಳಬೇಕೆಂದು ಈ ಸೂತ್ರವು ಉಪದೇಶಿಸುತ್ತದೆ. ಏಕೆಂದರೆ—

## ೫೧೦. ನಾ ಚರಿತಾತ್ ಶಾಸ್ತ್ರಂ ಗರೀಯಃ

ಪ್ರತ್ಯಕ್ಷ ಆಚರಣೆಯಲ್ಲಿರುವಂಥ, ರೀತಿ–ರಿವಾಜುಗಳಿಗಿಂತ ಎಂದೋ ಬರೆದ ಶಾಸ್ತ್ರಗಳು ಒಮ್ಮೊಮ್ಮೆ ಕಾಲಬಾಹ್ಯವೆಂದೆನಿಸಬಹುದು. ಆದ್ದರಿಂದ ಸಮದರ್ಶಿಗಳ ಆಚಾರ ಹಾಗು ಉಪದೇಶಗಳು ಇಂಥ ಪ್ರಸಂಗಗಳಲ್ಲಿ ಶಾಸ್ತ್ರ-ಪ್ರಮಾಣಕ್ಕಿಂತ ಪ್ರಬಲವಾದ ಆಧಾರಗಳೆನಿಸುತ್ತವೆ. ಮನುಸ್ಮೃತಿಯಲ್ಲಿ ಶ್ರಾದ್ಧದ ಕಾಲಕ್ಕೆ ಮಾಂಸದ ಅಡಿಗೆಯನ್ನು ಮಾಡಬೇಕೆಂದು ಹೇಳಿದ್ದರೂ, ಕಲಿಯುಗದಲ್ಲಿ ಅದು ನಿಷಿದ್ಧವಾದ್ದರಿಂದ ಶಿಷ್ಟರ ಆಚಾರದಲ್ಲಿ ಪ್ರಚಲಿತ-ವಿರುವುದಿಲ್ಲ. ಆದ್ದರಿಂದ ಶಿಷ್ಟಾಚಾರವೇ ಹೆಚ್ಚು ಪ್ರಬಲವಾದ ಪ್ರಮಾಣ ಎಂಬುದು ಈ ಸೂತ್ರದ ತಾತ್ಪರ್ಯ. ಇದನ್ನೇ ' ಶಾಸ್ತ್ರಾದ್ ರೂಢಿರ್ಬ-ಲಿಯಸೀ ' ಎಂದು ಹೇಳುವುದುಂಟು.

ಮೇಲಿನ ನಾಲ್ಕು ಸೂತ್ರಗಳಲ್ಲಿಯ ತತ್ತ್ವೋಪದೇಶವು ತೈತ್ತರೀಯೋ-ಪನಿಷತ್ತಿನಲ್ಲಿ, " ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ ವೃತ್ತಿವಿಚಿಕಿತ್ಸಾ ವಾ-ಸ್ಯಾತ್, ಯೇ ತತ್ರ ಬ್ರಾಹ್ಮಣಾಃ ಸಮ್ಮರ್ಶಿನಃ ಯುಕ್ತಾ ಆಯುಕ್ತಾಃ ಅಲೂಕ್ಷಾ ಧರ್ಮಕಾಮಾಸ್ಯುಃ, ಯಥಾ ತೇ ವರ್ತೇರನ್ ತಥಾ ತತ್ರ ವರ್ತೇಥಾಃ " ಎಂಬ ಶಬ್ದಗಳಲ್ಲಿ ಸ್ಪಷ್ಟಪಡಿಸಲ್ಪಟ್ಟಿದೆ. ಇದರ ತಾತ್ಪರ್ಯವೆಂದರೆ— " ಇನ್ನು ಕರ್ಮದ ವಿಷಯಕ್ಕೆ ( ಕರ್ಮಾಕರ್ಮಗಳ ವಿಷಯಕ್ಕೆ ) ಅಥವಾ ಆಚಾರದ ವಿಷಯಕ್ಕೆ ( ಆಚಾರ, ಅನಾಚಾರಗಳ ವಿಷಯಕ್ಕೆ ) ನಿನ್ನ ಮನ-ದಲ್ಲಿ ಸಂಶಯವು ತಲೆದೋರಿದರೆ, ಆಯಾ ವಿಷಯಗಳಲ್ಲಿ ಒಳ್ಳೇ ವಿಚಾರ ಮಾಡುವ, ಏಕಾಗ್ರಚಿತ್ತವುಳ್ಳ, ವಿಚಾರಕ್ಷಮರಾದ, ದಯಾಶೀಲರಾದ, ಧರ್ಮೇಚ್ಛೆಯುಳ್ಳ ಬ್ರಾಹ್ಮಣರು ಆ ಸಂದರ್ಭಗಳಲ್ಲಿ ಹೇಗೆ ವರ್ತಿಸು-ವರೋ ಹಾಗೆಯೇ ನೀನಾದರೂ ವರ್ತಿಸು " ಎಂಬುದು.

## ೫೧೧. ಗತಾನುಗತಿಕೋ ಲೋಕಃ

ಬಹುಜನರು ನಡೆಸುಕೊಳ್ಳುವ ರೀತಿಯನ್ನೇ ಅನುಸರಿಸುವುದು ಲೋಕದ ಸ್ವಭಾವ. ಸಾಮಾನ್ಯ ಜನರು ಪ್ರತ್ಯೇಕವಾಗಿ ಪರಮಾರ್ಥ ಚಿಂತನೆಯನ್ನು, ತಾವೇ ಶಾಸ್ತ್ರಗಳನ್ನು ಓದಿ ಮಾಡುವುದು ಸುಲಭಸಾಧ್ಯವಲ್ಲ. ಅಂತೆಯೇ, ' ಗತಾನುಗತಿಕೋ ಲೋಕಃ ನ ಲೋಕಃ ಪಾರಮಾರ್ಥಿಕಃ ' ಎಂಬ ಉಕ್ತಿಯು ಪ್ರಸಿದ್ಧವಿದೆ. ಆದ್ದರಿಂದ ತಮ್ಮ ಆಚಾರ–ವಿಚಾರಗಳ ಮೂಲಕ ಒಳ್ಳೆಯ ಸಂಪ್ರದಾಯವನ್ನು ಹಾಕಿಕೊಡುವುದು ಶಿಷ್ಟರ ಹೊಣೆಗಾರಿಕೆ. ಇದನ್ನೇ ಶ್ರೀಕೃಷ್ಣನು ಗೀತೆಯಲ್ಲಿ, ' ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ ' ಎಂದು ಹೇಳಿದ್ದಾನೆ.

## ೫೧೨. ಜ್ಞಾತ್ವಾಪಿ ದೋಷಮೇವ ಕರೋತಿ ಲೋಕಃ

ತಿಳಿದೂ ತಿಳಿದೂ ತಪ್ಪು ಮಾಡುವುದು ಲೋಕದ ಸ್ವಭಾವ. ಸತ್ಯ ಮಾತನ್ನಾಡಬೇಕು ಎಂಬುದು ಎಲ್ಲರಿಗೂ ಗೊತ್ತಿದ್ದರೂ, ಪ್ರಸಂಗವಶಾತ್ ಸುಳ್ಳಾಡುವುದನ್ನು ಯಾರೂ ಬಿಟ್ಟಿಲ್ಲ. ಅದಕ್ಕಾಗಿ ಶಿಷ್ಟರು ತಮ್ಮ ವ್ಯವ-ಹಾರದ ಮೂಲಕ ಆದರ್ಶವನ್ನು ಹಾಕಿಕೊಟ್ಟು, ರಾಜರು ತಮ್ಮ ಶಾಸನದ ಮುಖಾಂತರ ಸಮಾಜದಲ್ಲಿ ಸುವ್ಯವಸ್ಥೆಯನ್ನು ಕಾಯ್ದುಕೊಂಡು ಹೋಗಬೇಕೆಂಬ ಧ್ವನಿಯು ಈ ಸೂತ್ರದಲ್ಲಿದೆ.

## ೫೧೩. ಪರಗೃಹಮಕಾರಣತೋ ನ ಪ್ರವಿಶೇತ್

ನಿಷ್ಕಾರಣವಾಗಿ ಬೇರೊಬ್ಬರ ಮನೆಗೆ ಹೋಗಿ ಅವರಿಗೆ ಸಮಸ್ಯೆ-ಯಾಗಬಾರದು. ವಿಶೇಷವಾಗಿ ನಿವೃತ್ತಿ ಜೀವನವನ್ನು ಸಾಗಿಸುವವರು ಈ

ವಿಚಾರವನ್ನು ನೆನಪಿಡಬೇಕು. ವೇಳೆ ಹೋಗುವುದಿಲ್ಲವೆಂದು ಅಕಾರಣವಾಗಿ ಅವರು ಬೇರೊಬ್ಬರ ಮನೆಗೆ ಹೋಗುವ ಅಭ್ಯಾಸವನ್ನು ಬೆಳೆಸಿಕೊಂಡು ಪರಪೀಡೆಯಾಗುವ ಉದಾಹರಣೆಗಳು ದುರ್ಲಭವೇನಲ್ಲ. ಹಾಗೆಯೇ ನಿರುದ್ಯೋಗಿಗಳು ಪರಪೀಡಕರೆನಿಸುತ್ತಾರೆ. ತಾವೂ ಕೆಟ್ಟು, ಕೊನೆಗೆ ಸಂಗಡಿಗರನ್ನೂ ಕೆಡಿಸುತ್ತಾರೆ. ಆದ್ದರಿಂದ ಕೆಲಸವಿಲ್ಲದ ಬೇರೆಯವರ ಮನೆಗೆ ಹೋಗಬಾರದೆಂಬ ಒಂದು ಒಳ್ಳೆಯ ತತ್ತ್ವವನ್ನು ಈ ಸೂತ್ರವು ಉಪದೇಶಿಸುತ್ತದೆ.

## ೫೧೪. ಯಮನುಜೀವೇ ತ್ತಂ ನಾಪವದೇತ್

ನಮ್ಮ ಚರಿತಾರ್ಥವು ಯಾರಿಂದ ನಡೆಯುತ್ತದೆಯೋ ಅರ್ಥಾತ್ ಯಾರಲ್ಲಿ ನಾವು ನೌಕರಿಗಾಗಿ ಇರುವೆವೋ ಅಂಥ ಧನಿಯನ್ನು ಎಂದೂ ನಿಂದಿಸಬಾರದು. ಅವನು ಅಯೋಗ್ಯನೆನಿಸಿದರೆ ಬಿಟ್ಟುಹೋಗಬಹುದು. ಆದರೆ ಆವನ ಅನ್ನವನ್ನೇ ಉಂಡು, ಅವನನ್ನೇ ನಿಂದಿಸುವುದು ನೀಚತನದ ಪರಮಾವಧಿ. ಹಿಂದೀ ಭಾಷೆಯಲ್ಲಿ ಇಂಥವರನ್ನು 'ಬೇಈಮಾನ್' ಅಥವಾ 'ನಮಕ್ ಹರಾಮ್' ಎಂಬ ಶಬ್ದಗಳಿಂದ ಕರೆಯುತ್ತಾರೆ. ಇದು ಕೃತಘ್ನತೆಯ ಒಂದು ಮುಖವೇ ಸರಿ. ಕೃತಘ್ನನ ಮೃತದೇಹವನ್ನು ಮುಟ್ಟಬಾರದೆಂಬ ವಿಷಯ ಈಗಾಗಲೇ ಬಂದಿದೆ.

## ೫೧೫. ಸ್ವಾಮೀ ಸ್ತೋತವ್ಯೋ ಅನುಜೀವಿಭಿಃ

ನಮ್ಮ ಆಶ್ರಯದಾತನಾದ ಸ್ವಾಮಿ ಅರ್ಥಾತ್ ನಾವು ಯಾರಲ್ಲಿ ನೌಕರಿಯನ್ನು ಮಾಡುತ್ತಿರುವೆವೋ ಅಂಥವನನ್ನು ಯಾವಾಗಲೂ ಗೌರವದಿಂದ ಕಾಣತಕ್ಕದ್ದು ಎಂದು ಹಿಂದಿನ ಸೂತ್ರದಲ್ಲಿಯ ವಿಚಾರವನ್ನೇ ಇಲ್ಲಿ ಪರ್ಯಾಯವಾಗಿ ಹೇಳಲಾಗಿದೆ. ಪರಿಸ್ಥಿತಿಯ ಒತ್ತಡದಿಂದಾಗಿ ಮಾನಸಿಕ

ಉದ್ವೇಗದಿಂದ ಆಕಸ್ಮಾತ್ತಾಗಿ ಅವನು ಒಂದೆರಡು ಅಪಶಬ್ದಗಳನ್ನಾಡಿದರೂ ಸಹನ ಮಾಡಿಕೊಂಡು ಸ್ವಾಮಿನಿಷ್ಠೆಯಿಂದಲೇ ಇರಬೇಕು. ಅವನು ಮಾಡಿದ ಉಪಕಾರವನ್ನು ಸ್ಮರಿಸಬೇಕೇ ಹೊರತು, ಘಟಿಸಿದ ಒಂದೆರಡು ತಪ್ಪು-ಗಳನ್ನೇ ಎತ್ತಿಹಿಡಿಯಬಾರದು.

## ೫೧೬, ಧರ್ಮಕೃತ್ಯೇಷ್ವಪಿ ಸ್ವಾಮಿನ ಏವ ಘೋಷಯೇತ್

ಧರ್ಮಕಾರ್ಯಗಳನ್ನು ಮಾಡಿದಾಗ ಕೂಡ ಇದು ಸ್ವಾಮಿಯ ಸಹಾಯ ಹಾಗು ಔದಾರ್ಯದಿಂದಲೇ ಸಾಧ್ಯವಾಯಿತು ಎಂದು ಅವನಿಗೆ ದೊಡ್ಡಸ್ತಿಕೆಯನ್ನು ಕೊಡಬೇಕು. ಆತ್ಮಪೌರುಷವನ್ನೇ ತೋಡಿಕೊಳ್ಳಬಾರದು.

## ೫೧೭. ಯಜ್ಞಫಲಜ್ಞಾಃ ತ್ರಿವೇದವಿದಃ

ಋಕ್, ಯಜುಃ, ಸಾಮವೇದಗಳಿಗೆ 'ತ್ರಯೀ' ಎನ್ನುವುದು ಪರಿ-ಪಾಠ. ಅವನ್ನು ಅಧ್ಯಯನ ಮಾಡಿದವರೇ 'ತ್ರಿವೇದವಿದಃ' ಎಂದು ಎನಿಸಿಕೊಳ್ಳುತ್ತಾರೆ. ಇಂಥವರಿಗೆ ಮಾತ್ರ ಯಜ್ಞಗಳ ಫಲವೇನು ಎಂಬ ವಿಷಯದಲ್ಲಿ ನಿಜವಾದ ಜ್ಞಾನವಿರಲು ಸಾಕು. ಇದಕ್ಕೆ ಮುಖ್ಯ ಆಧಾರ-ವೆಂದರೆ, ವೇದಾಂಗ ಜ್ಯೋತಿಷ್ಯದಲ್ಲಿ, 'ವೇದಾ ಹಿ ಯಜ್ಞಾರ್ಥಂ ಅಭಿ-ಪ್ರವೃತ್ತಾಃ' ಎಂದು ಪ್ರತಿಪಾದಿಸಲಾಗಿದೆ. ವೇದಗಳು ಯಜ್ಞಕ್ಕಾಗಿಯೇ ಇವೆ. ಕೇವಲ ಅಧ್ಯಯನ ಮಾಡಿ, ಯಜ್ಞಾದಿ ಕರ್ಮಗಳನ್ನು ಆಚರಿಸ-ದಿದ್ದರೆ, ಅವುಗಳ ಉದ್ದೇಶ ಸಫಲವಾಗುವುದಿಲ್ಲ. ಆದ್ದರಿಂದ ವೇದಾ-ಧ್ಯಾಯಿಗಳಿಗೆ ಮಾತ್ರ ಯಜ್ಞಫಲದ ಜ್ಞಾನ. ವೇದಾಧ್ಯಯನ ಮಾಡು-ವವನು ಸಾಕ್ಷಾತ್ ಶಿವನಿಗೇ ಸಮಾನನೆಂಬ ಮಾತು ಈಗಾಗಲೇ ಬಂದಿದೆ.

ಯಜ್ಞದಲ್ಲಿ ಅಡಕವಾಗಿರುವ ಮುಖ್ಯ ತತ್ವವೆಂದರೆ, ದೇವತೆಗಳ ಉದ್ದಿಶ್ಯ-ವಾಗಿ ಮಾಡುವ ತ್ಯಾಗ. ಇಂಥ ತ್ಯಾಗದಿಂದ ಮಾತ್ರ ಸಮೃದ್ಧಿ ಹಾಗು ಭೋಗಗಳು ದೇವತಾನುಗ್ರಹರೂಪವಾಗಿ ದೊರೆಯುತ್ತವೆ.

## ೫೧೮. ನ ಚ ಸ್ವರ್ಗಪತನಾತ್ ಪರಂ ದುಃಖಮ್

ಅಶಾಶ್ವತವಾದ ಸ್ವರ್ಗಕ್ಕಿಂತ ಶಾಶ್ವತವಾದ ಮೋಕ್ಷವೇ ಶ್ರೇಯಸ್ಕರ-ವೆಂಬ ಮಾತು ಈಗಾಗಲೇ ಬಂದುಹೋಗಿದೆ. ಆದರೆ ಸುಖಾಪೇಕ್ಷಿಗಳಾದ ಹಲವರು ಸ್ವರ್ಗವನ್ನು ಬಯಸುವ ಉದಾಹರಣೆಗಳಿಗೇನೂ ಕೊರತೆಯಿಲ್ಲ. ಅಂಥವರು ಪುಣ್ಯ ತೀರಿದ ಮೇಲೆ ಮೃತ್ಯುಲೋಕಕ್ಕೆ ಮರಳಲೇಬೇಕು. ಇದೇ ಸ್ವರ್ಗಪತನ. ಸಿರಿವಂತನಿಗೆ ಬಡತನ ಬಂದರೆ ಹೇಗೆ ಅಪಾರವಾದ ದುಃಖವಾಗುತ್ತದೆಯೋ ಹಾಗೆಯೇ ಸ್ವರ್ಗಸುಖವನ್ನನುಭವಿಸಿದವರಿಗೆ ಪುಣ್ಯ ಕ್ಷಯವಾದ ಮೇಲೆ ಅಲ್ಲಿಂದ ಕೆಳಕ್ಕೆ ನೂಕಲ್ಪಡುವುದು ಅತ್ಯಂತ ದುಃಖ-ದಾಯಕವಾಗುವುದು.

ಇದರ ಅಂಶತಃ ಅನುಭವವು ಮಂತ್ರಿಪದವಿಯನ್ನು ಕಳೆದುಕೊಂಡವ-ರಿಗೆ, ರೆವೆನ್ಯೂ ( ಕಂದಾಯ ) ಹಾಗು ಪೋಲೀಸ ಇಲಾಖೆಯಿಂದ ದೊಡ್ಡ ಹುದ್ದೆಯಿಂದ ನಿವೃತ್ತರಾದವರಿಗೆ ಬರುವುದು ಎಲ್ಲರ ಅನುಭವಕ್ಕೂ ಗಮ್ಯವಾದದ್ದು.

## ೫೧೯. ದೇಹೀ ದೇಹಂ ತ್ಯಕ್ತ್ವಾ ಐಂದ್ರಂ ಪದಂ ನ ಕಾಂಕ್ಷತಿ

ಪ್ರತಿಯೊಬ್ಬ ಮನುಷ್ಯನು ದೇಹಪಾತವಾದ ನಂತರ ಸ್ವರ್ಗಕ್ಕೆ [illegible] ( ಐಂದ್ರಪದ ) ಬಯಸುವುದಿಲ್ಲ ಎನ್ನುವ ಈ

ಸೂತ್ರವು ಮನುಷ್ಯಸ್ವಭಾವದ ವೈಚಿತ್ರ್ಯಗಳನ್ನು ಸೂಚಿಸುತ್ತದೆ. ಹಲವರಿಗೆ ಕೇವಲ ಸ್ವರ್ಗವು ಸಾಕಾದರೆ, ಮಹತ್ವಾಕಾಂಕ್ಷಿಗಳಾದ ನಹುಷ, ಬಲಿಯಂಥ-ವರು ಇಂದ್ರಪದವಿಯನ್ನೇ ಬೇಡಬಹುದು. ಜ್ಞಾನಿಗಳು ಸ್ವರ್ಗಕ್ಕೆ ವಿಮುಖ-ರಾಗಿ ಮೋಕ್ಷಕ್ಕಾಗಿಯೇ ಯತ್ನಿಸಬಹುದು. ಇನ್ನು ರಂತಿದೇವನಂತಹ ಕೆಲ ಪರೋಪಕಾರ ಬುದ್ಧಿಯವರು ಪುನರ್ಜನ್ಮವನ್ನು ಪಡೆದು, ದುಃಖಿಗಳ ದುಃಖನಿವಾರಣಕ್ಕಾಗಿ ತ್ಯಾಗಬುದ್ಧಿಯಿಂದ ಸಮಾಜಸೇವೆಯಲ್ಲಿ ನಿರತರಾಗ-ಬೇಕೆಂದು ಬಯಸಬಹುದು.

ನತ್ವಹಂಕಾರಿಮಯೇ ರಾಜ್ಯಂ ನ ಸ್ವರ್ಗಂ ನಾ ಪುನರ್ಭವಮ್ ।
ಕಾಮಯೇ ದುಃಖತಪ್ತಾನಾಂ ಪ್ರಾಣಿನಾಂ ಆರ್ತನಾಶನಮ್ ॥

ನನಗೆ ರಾಜ್ಯ, ಸ್ವರ್ಗ, ಮೋಕ್ಷ ಏನೂ ಬೇಡ. ದೀನದಲಿತರ ಸೇವೆಯ ಅವಕಾಶವಿದ್ದರೆ ಸಾಕು—ಎನ್ನುವ ಈ ಶ್ಲೋಕವು ಇದಕ್ಕೆ ಸಾಕ್ಷಿ. ಇನ್ನೂ ಕೆಲವು ಸ್ವಮತಾಭಿಮಾನಿಗಳು, 'ಆಚಾರ್ಯಾಃ ಶಂಕರಾಚಾರ್ಯಾಃ ಸಂತು ಮೇ ಜನ್ಮ ಜನ್ಮನಿ', 'ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮ ಜನ್ಮನಿ' ಎಂದು ಬೇಡಿಕೊಳ್ಳಬಹುದು. ಮಂತ್ರಿಪದದ ಸವಿ-ಯುಂಡವರು ಜನ್ಮ ಜನ್ಮಗಳಲ್ಲಿ ಮಂತ್ರಿಯಾಗಬೇಕೆಂದು ಬಯಸಬಹುದು. ಹೀಗೆ ವಿಚಿತ್ರ ಸ್ವಭಾವದ 'ಬಹುರಂಗೀ, ಬಹುರೂಪೀ' ಜನರು ಈ ಲೋಕದಲ್ಲಿ ದೊರೆಯುತ್ತಾರೆ.

## ೫೨೦. ಅನಾರ್ಯ ಸಂಬಂಧಾತ್ ವರಂ ಆರ್ಯಶತ್ರುತಾ

ಆಂಗ್ಲ ಭಾಷೆಯಲ್ಲಿ 'It is better to have a good enemy than a bad frind' ಎಂದು ಹೇಳುವ ಮಾತನ್ನೇ ಈ ಸೂತ್ರವು ಬೋಧಿಸುತ್ತದೆ. ಅನಾರ್ಯರ ಬಾಂಧವ್ಯಕ್ಕಿಂತ ಆರ್ಯರ ಶತ್ರುತ್ವವೇ ಲೇಸೆಂದು

ಹೇಳಿದ್ದು ಉದಾತ್ತತೆಯ ದ್ಯೋತಕ. ಆರ್ಯ ಹಾಗು ಅನಾರ್ಯ ಶಬ್ದಗಳ ವಿಚಾರ ಈ ಮೊದಲೇ ಬಂದಿದೆ. ತಾತ್ಪರ್ಯಗಲ್ಲಿ ದುಷ್ಟರ ಸಹವಾಸದಲ್ಲಿ ತಾತ್ಕಾಲಿಕವಾಗಿ ಸ್ವಲ್ಪ ಲಾಭ ಎನಿಸಿದರೂ ಅದು ಶ್ರೇಯಸ್ಕರವಲ್ಲ. ಆದ್ದ-ರಿಂದ ಸಜ್ಜನರ ಶತ್ರುತ್ವವು ಕೂಡ ಅದಕ್ಕಿಂತ ಲೇಸು ಎಂದು ಹೇಳಿದ್ದು ಸತ್ಸಂಗದ ಮಹಿಮೆಯನ್ನೇ ಪರ್ಯಾಯವಾಗಿ ತಿಳಿಸುತ್ತದೆ.

## ೪೨೧. ಸತ್ಸಂಗಃ ಸ್ವರ್ಗವಾಸಃ

ಸತ್ಸಂಗವು ಸ್ವರ್ಗವಾಸದಂತೆ ಅಪರಿಮಿತವಾದ ಆನಂದವನ್ನು ತಂದು-ಕೊಡುತ್ತದೆ ಎನ್ನುವುದೇ ಈ ಸೂತ್ರದ ತಾತ್ಪರ್ಯ. ಈ ಮಾತನ್ನು ಕನ್ನ-ಡದ ಖ್ಯಾತ ಕವಿ ಸರ್ವಜ್ಞನು 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ' ಎಂಬ ಶಬ್ದಗಳಲ್ಲಿ ಬಣ್ಣಿಸಿದ್ದಾನೆ. ಪ್ರಸಿದ್ಧ ಸುಭಾಷಿತವೊಂದರಲ್ಲಿ—

ಗಂಗಾಪಾಪಂ ಶಶೀತಾಪಂ ದೈನ್ಯಂ ಕಲ್ಪತರುಸ್ತಥಾ ।
ಪಾಪಂ ತಾಪಂ ಚ ದೈನ್ಯಂ ಚ ಘ್ನಂತಿ ಸಂತೋ ಮಹಾಶಯಾಃ ॥

ಗಂಗೆಯು ಪಾಪವನ್ನು, ಚಂದ್ರನು ತಾಪವನ್ನು, ಕಲ್ಪವೃಕ್ಷವು ದಾರಿದ್ರ್ಯವನ್ನು ಪರಿಹರಿಸಿದರೆ, ಸತ್ಸಂಗವು ಪಾಪ, ತಾಪ ಹಾಗು ದೈನ್ಯ ಗಳೆಲ್ಲವನ್ನೂ ನಿವಾರಿಸುತ್ತದೆ. ಅವರ ಸಹವಾಸದಲ್ಲಿ ನಮ್ಮ ಆಚಾರ-ವಿಚಾರಗಳು ಸುಧಾರಿಸಿ, ಪಾಪನಿವಾರಣೆಯಾಗಿ ಮನಶ್ಶಾಂತಿ ದೊರೆಯುತ್ತ-ವಷ್ಟೇ ಅಲ್ಲ, ತೃಪ್ತಜೀವನವನ್ನು ನಡೆಸಿಕೊಂಡು ಹೋಗಲಿಕ್ಕೆ ಪ್ರೋತ್ಸಾಹನೆ ದೊರೆತು, ದೈನ್ಯಭಾವವು ಅಳಿಸಿಹೋಗುತ್ತದೆ.

## ೪೨೨. ನಿಹಂತಿ ದುರ್ವಚನಂ ಕುಲಮ್

ಒಳ್ಳೆಯ ಮಾತುಗಳಿಂದ ಏನೆಲ್ಲವನ್ನೂ ಜಯಿಸಬಹುದು. ನಾಲ-

ಗೆಯೇ ಮನುಷ್ಯನ ಮಿತ್ರ ಹಾಗು ಶತ್ರು ಎಂದು ಮುಂತಾಗಿ ಈಗಾಗಲೇ ಚರ್ಚಿಸಲಾಗಿದೆ. ಪ್ರಸ್ತುತ ಸೂತ್ರದಲ್ಲಿ ಅಪ್ರಿಯ ಹಾಗು ದುರ್ವಚನಗಳು ಮನುಷ್ಯನ ಸರ್ವನಾಶಕ್ಕಷ್ಟೇ ಅಲ್ಲ, ಅವನ ಕುಲವನ್ನೇ ಹಾಳುಮಾಡುತ್ತವೆ. ನಿಷ್ಕಾರಣವಾಗಿ ತನ್ನ ನಾಶಕ್ಕೆ ತಾನೇ ಕಾರಣನಾಗಬೇಕೆಂದು ಬಯಸುವ ಮೂರ್ಖನಿಗೆ ಇದು ಒಳ್ಳೆಯ ಉಪಾಯವೆಂದು ವ್ಯಂಗ್ಯವಾಗಿ ಹೇಳಬಹುದು. ಹೊಡೆತದ ಪೆಟ್ಟು ಕೆಲ ಕಾಲದ ಮೇಲೆ ಉಳಿಯುವುದಿಲ್ಲ. ಆದರೆ ಮಾತಿನ ಪೆಟ್ಟು ಮಾತ್ರ ಕೊನೆಯ ವರೆಗೂ ಮರೆಯುವುದಿಲ್ಲ. ನಾಲಗೆಯ ಮೇಲಿನ ನಿಯಂತ್ರಣವೊಂದೇ ಇದಕ್ಕೆ ಮದ್ದು.

## ೫೨೩. ನಿಶಾಂತೇ ಕಾರ್ಯಂ ಚಿಂತಯೇತ್

ರಾತ್ರಿಯು ಕಳೆದ ಮೇಲೆ ಅಂದರೆ ಬೆಳಗುಮುಂಜಾವಿನಲ್ಲಿ ಅಂದು ಮಾಡತಕ್ಕ ಅಥವಾ ಅನ್ಯ ಮಹತ್ತ್ವದ ಕಾರ್ಯಗಳ ವಿಷಯಕ್ಕೆ ಚಿಂತನೆ ಮಾಡಬೇಕು. ಇದು ಅತೀ ಪ್ರಶಾಂತ ಹಾಗು ಪವಿತ್ರವಾದ ಕಾಲ. ರಾಜಕಾರ್ಯಕ್ಕೆ ಹೇಗೋ ಹಾಗೆಯೇ ಲೌಕಿಕ ವ್ಯವಹಾರದಲ್ಲಿಯೂ ಚಿಂತನಕ್ಕೆ ಈ ಕಾಲವು ಒಳ್ಳೇ ಮಹತ್ವದ್ದು. ನಿದ್ರೆ ಮುಗಿದದ್ದರಿಂದ ಮನಸ್ಸು ಪ್ರಸನ್ನವಾಗಿರುತ್ತದೆ, ದಣಿವೂ ಆರಿರುತ್ತದೆ. ಮೆದುಳು ಚುರುಕಾಗಿರುತ್ತದೆ. ಈ ಎಲ್ಲ ಕಾರಣಗಳಿಂದಾಗಿ ನಮ್ಮ ಹಿರಿಯರು ಈ ಸಮಯಕ್ಕೆ ಬಹಳೇ ಮಹತ್ತ್ವವನ್ನು ಕೊಟ್ಟಿರುತ್ತಾರೆ. ಬ್ರಾಹ್ಮೀ ಮುಹೂರ್ತವೆಂದೂ ಇದಕ್ಕೆ ಹೆಸರು.

ಈಗ ಮಧ್ಯರಾತ್ರಿಯ ವರೆಗೆ ದೂರದರ್ಶನದ ಅಶ್ಲೀಲ ಕಾರ್ಯಕ್ರಮಗಳನ್ನು ನೋಡಿ, ಬೆಳಿಗ್ಗೆ ಬೇಗ ಏಳುವ ಅಭ್ಯಾಸವನ್ನು ಮರೆತುಬಿಟ್ಟಿದ್ದಾರೆ. ಸರಕಾರವು ಜನರು ಚಿಂತನಶೀಲರಾಗಬಾರದು, ನಮ್ಮ ಹಕ್ಕು-ಬಾಧ್ಯತೆಗಳ ವಿಷಯಕ್ಕೆ ವಿಚಾರವನ್ನು ಕೂಡ ಮಾಡದೆ, ಟಿ. ವಿ. ಗುಂಗಿನಲ್ಲಿಯೇ ಉಳಿಯುವಂತೆ ಹಂಚಿಕೆ ಹಾಕಿವೆಯೇನೋ ಎಂದು ಸಂಶಯ-

ಪಡುವಂತಾಗಿದೆ ಈಗಿನ ಪರಿಸ್ಥಿತಿ. ಹಗಲಿರುಳೂ ಮಹಾತ್ಮಾ ಗಾಂಧಿಯವರ ಹೆಸರು ತೆಗೆದುಕೊಂಡರೂ, ಅವರಿಗೆ ಅತ್ಯಂತ ಪ್ರಿಯವಾದ ಮದ್ಯಪಾನ-ನಿರೋಧವನ್ನು ಮರೆತು, ಎಲ್ಲೆಲ್ಲಿಯೂ ಸರಾಯಿ ಅಂಗಡಿಗಳೇ ಕಾಣುತ್ತವೆ. ಭಾರತೀಯ ಪರಂಪರೆ, ಧರ್ಮ ಎಂದು ಮಾತನಾಡಿದರೆ—ಇದೆಲ್ಲ ಜಾತೀಯತೆ ( Anti-Secular ) ಎಂದು ಮೂದಲಿಸುವ ಮಟ್ಟಿಗೆ ಹೋಗಿ ಮುಟ್ಟಿದೆ. ಅಧಿಕಾರವನ್ನು ಚಲಾಯಿಸುವವರ ಕುತಂತ್ರ.

## ೫೨೪. ಪ್ರದೋಷೇ ನ ಸಂಯೋಗಃ ಕರ್ತವ್ಯಃ

ಪ್ರದೋಷವೆಂದರೆ ಸೂರ್ಯಾಸ್ತದ ನಂತರದ ಆರು ಘಳಿಗೆಗಳು ಅರ್ಥಾತ್ ಎರಡು ಗಂಟೆ ಇಪ್ಪತ್ನಾಲ್ಕು ನಿಮಿಷಗಳು. ಈ ಕಾಲದಲ್ಲಿ ಸಂಯೋಗ ಅರ್ಥಾತ್ ಸ್ತ್ರೀಸಂಯೋಗ ನಿಷಿದ್ಧವಾಗಿದೆಯೆಂದು ಈ ಸೂತ್ರವು ಸೂಚಿಸುತ್ತದೆ. ಈ ವೇಳೆಯಲ್ಲಿ, ಸಾಯಂಕಾಲದಲ್ಲಿ ವಿಹಿತವೆಂದು ಪರಿಗಣಿಸಲ್ಪಟ್ಟ ಕರ್ಮಗಳನ್ನು ಮಾಡುವುದು ಯೋಗ್ಯ. ಈ ರಾತ್ರಿಯ ಪ್ರಥಮ ಯಾಮದಲ್ಲಿ ಬರುವುದರಿಂದ ಇದರ ಸಮಾಪ್ತಿಯ ನಂತರವೇ ಮಲಗುವುದು ಯೋಗ್ಯವೆಂಬುದು ಇಲ್ಲಿ ಗರ್ಭಿತವಾಗಿದೆ.

ನಿಜವಾಗಿಯೂ ಪ್ರದೋಷವು ಶಿವಾರ್ಚನೆಗೆ ಅತಿ ಪ್ರಶಸ್ತವಾದ ಕಾಲ. 'ಭಾನೋರಸ್ತಮಯೇ ಪ್ರದೋಷ ಸಮಯೇ ಪಂಚಾಕ್ಷರಾರಾಧನಮ್' ಎಂದು ವಿಧಿಸಲ್ಪಟ್ಟಿದೆ. ಆದ್ದರಿಂದ ಕಾಮುಕರಿಗೆ ಸೂರ್ಯಾಸ್ತವಾದ ನಂತರ ಸ್ತ್ರೀಸಮಾಗಮವನ್ನೇ ಚಿಂತಿಸಬಾರದೆಂಬ ಎಚ್ಚರಿಕೆ ಈ ಸೂತ್ರದಲ್ಲಿದೆ.

## ೫೨೫. ಉಪಸ್ಥಿತ ವಿನಾಶೋ ದುರ್ನಯಂ ಮನ್ಯತೇ

ವಿನಾಶ ಸನ್ನಿಹಿತವಾದವರು ಅನ್ಯಾಯದ ಕೃತಿಗೆ ಇಳಿಯುತ್ತಾರೆ

ಎಂದು ಸೂಚಿಸುವ ಈ ಸೂತ್ರವು ಈ ಹಿಂದೆ ಬಂದ ವಿಚಾರಗಳಲ್ಲಿ, ಅಲ್ಪ-ಸ್ವಲ್ಪ ಬದಲಾವಣೆ ಮಾಡಿ ಪುನಃ ಹೇಳಲ್ಪಟ್ಟಿದೆ. ಏನೇ ಆಗಲಿ, ದುಷ್ಕೃತ್ಯ-ಗಳನ್ನು ಮಾಡುವ ಬುದ್ಧಿ ಉತ್ಪನ್ನವಾಗುವುದು ಮುಂಬರುವ ವಿನಾಶ-ವನ್ನು ಸೂಚಿಸುತ್ತದೆಂಬುದೇ ತಾತ್ಪರ್ಯ. ಮನುಷ್ಯನು ಹಾಳಾಗಬೇಕಾದರೆ ಮೊದಲು ಅವನ ಬುದ್ಧಿ ಕೆಡುತ್ತದೆ, ಆಮೇಲೆ ಸಂಪತ್ತು ಹೋಗುತ್ತದೆ ಎಂದು ಬಲ್ಲವರು ಹೇಳುತ್ತಾರೆ. ಇದನ್ನೇ ಬೇರೆ ಶಬ್ದಗಳಲ್ಲಿ—

ನ ದೇವಾ ಯಷ್ಟಿಮಾದಾಯ ರಕ್ಷಂತಿ ಪಶುಪಾಲವತ್ ।
ಯಂ ರಕ್ಷಿತುಮಿಚ್ಛಂತಿ ಬುದ್ಧ್ಯಾ ಸಂಯೋಜಯತಿ ತಮ್ ॥

ಎಂದು ಹೇಳಲಾಗಿದೆ. ದೇವರು ಮನುಷ್ಯನನ್ನು ಕಾಯುತ್ತಾನೆಂಬು-ದರ ಅರ್ಥ, ದನಗಾಹಿಯಂತೆ ಕೈಯಲ್ಲಿ ದೊಣ್ಣೆಯನ್ನು ಹಿಡಿದು, ನಮ್ಮನ್ನು ರಕ್ಷಿಸುತ್ತಾನೆಂದೇನಲ್ಲ. ನಮಗೆ ಸದ್ಬುದ್ಧಿಯನ್ನು ದಯಪಾಲಿಸುತ್ತಾನೆಂಬುದೇ ತಾತ್ಪರ್ಯ. ಆದ್ದರಿಂದ ದುಷ್ಟಬುದ್ಧಿ ಉಂಟಾಗುವುದು ದೇವರ ಅವಕೃಪೆಗೆ ಪಾತ್ರರಾದವರ ಲಕ್ಷಣ.

## ೫೨೬. ಪರಾಯತ್ತೇಷು ಉತ್ಕಂಠಾಂ ನ ಕುರ್ಯಾತ್

ನಮ್ಮದಲ್ಲದ ( ಅರ್ಥಾತ್ ಬೇರೆಯವರ ) ವಸ್ತುಗಳ ಮೇಲೆ ನಾವು ಕಣ್ಣಿಡಬಾರದು—ಅಂದರೆ ಆಸೆಪಡಬಾರದು. ನಮಗೆ ದೇವರು ದಯಪಾಲಿ-ಸಿದ್ದರಲ್ಲಿಯೇ ಸಂತೋಷದಿಂದಿರಬೇಕು. ಇನ್ನೊಬ್ಬರಿಗೆ ಒಳ್ಳೆಯ ನೌಕರಿ, ವರದಕ್ಷಿಣೆ, ಸುಲಕ್ಷಣವಾದ ಕನ್ಯೆ, ಆಸ್ತಿ—ಹೀಗೆಲ್ಲ ದೊರೆತಾಗ ಹೊಟ್ಟೆಕಿಚ್ಚು ಪಡುವುದು ಕೆಲವರ ಸ್ವಭಾವ. ಹಾಗೆಯೇ ಎರಡನೆಯವರಲ್ಲಿ ಇರುವ ಒಳ್ಳೆಯ ವಸ್ತುಗಳು ನಮಗಾಗಬೇಕು ಎಂಬ ಲೋಭವು ಅಲ್ಲಲ್ಲಿ ಕಂಡು-ಬರುತ್ತದೆ. ಇದೆಲ್ಲ ಹೀನ ಸ್ವಾರ್ಥ ಹಾಗು ಕ್ಷುದ್ರ ಮನಃಪ್ರವೃತ್ತಿಯನ್ನು ತೋರ್ಪಡಿಸುತ್ತದೆ. ಇಂಥ ವಿಕಾರಗಳಿಗೆ ವಶರಾಗದೆ ತೃಪ್ತಿ, ಸಂತೋಷ-

ಗಳಿಂದಿರುವುದೇ ಸಜ್ಜನರ ಲಕ್ಷಣವೆಂಬುದು ಇಲ್ಲಿ ಧ್ವನಿತವಾಗಿದೆ. ಆದ್ದರಿಂದ ಹೆರವರ ವಸ್ತುಗಳ ಮೇಲೆ ಕಣ್ಣಿಡುವುದು ಅಧರ್ಮ.

## ೫೨೭. ಕ್ಷೀರಾರ್ಥಿನಃ ಕಿಂ ಕರಿಣ್ಯಾ

ಹಾಲು ಬೇಕಾದವನಿಗೆ ಆನೆಯನ್ನು ಕೊಟ್ಟರೆ ಏನು ಪ್ರಯೋಜನ-ವೆನ್ನುವ ಈ ಸೂತ್ರದಲ್ಲಿ ಗರ್ಭಿತವಾದ ವಿಚಾರವೆಂದರೆ, ಸಹಾಯಮಾಡುವ ಪ್ರಸಂಗದಲ್ಲಿಯೇ ಆಗಲಿ. ದಾನವನ್ನು ಕೊಡುವಾಗಲಾಗಲಿ ಯಾವುದರಿಂದ ಜನರಿಗೆ ಉಪಯೋಗವಾಗುತ್ತದೆಯೋ ಅದನ್ನು ವಿಚಾರಮಾಡಿ ಕೊಡಬೇಕು. ಇಲ್ಲವಾದಲ್ಲಿ ನಾವು ಕೊಟ್ಟದ್ದೇನೋ ನಿಜ. ಆದರೆ ಅದರ ಉಪಯೋಗ-ವಾಗದಿದ್ದರೆ ಕರ್ಮ ನಿಷ್ಫಲವಾಗುತ್ತದೆ. ಯಾವುದೇ ಕಾರ್ಯವನ್ನು ಮಾಡುವ ಮೊದಲು ಪೂರ್ಣ ವಿಚಾರವು ಅಗತ್ಯ ಎಂಬುದು ಸೂತ್ರಕಾರನ ಅಭಿಪ್ರಾಯ.

## ೫೨೮. ಅಸತ್ ಸಮೃದ್ಧಿಃ ಅಸದ್ಭಿರೇವ ಭುಜ್ಯತೇ

ದುಷ್ಟರ ಸಂಪತ್ತನ್ನು ದುಷ್ಟರೇ ಉಪಭೋಗಿಸುತ್ತಾರೆ. ಇದರರ್ಥ ಅನ್ಯಾಯದಿಂದ ಒಳ್ಳೆಯವರು ಎಂದೂ ಹಣವನ್ನು ಗಳಿಸುವುದಿಲ್ಲ. ಒಂದು ವೇಳೆ ಒಳ್ಳೆಯವರೆಂದೆನ್ನಿಸಿಕೊಳ್ಳುವವರಲ್ಲಿ ಅನ್ಯಾಯದ ಸಂಪತ್ತು ಇದ್ದುದು ಕಂಡುಬಂದರೆ ಅವರು ನಿಜಕ್ಕೂ ಒಳ್ಳೆಯವರಲ್ಲವೆಂದೇ ಅರ್ಥ. ಆದ್ದರಿಂದ 'ಪಾಪೀ ಕಾ ಮಾಲ ಚಾಂಡಾಲ ಖಾಯಾ' ಎಂಬರ್ಥದಲ್ಲಿ ಈ ಸೂತ್ರವು ನೀಚರ ಹಣವು ನೀಚರಿಂದಲೇ ದುಷ್ಕರ್ಮಗಳಿಗಾಗಿಯಾಗಲಿ, ಧರ್ಮಬಾಹಿರ-ವಾದ ಭೋಗಕ್ಕಾಗಲೀ ಹಾಳಾಗಿಹೋಗುತ್ತದೆ ಎಂದು ಹೇಳುತ್ತದೆ. ಧರ್ಮ-ಕಾರ್ಯ ಅಥವಾ ಸತ್ಕರ್ಮಗಳಿಗೆ ಇಂಥ ಹಣವು ತಪ್ಪಿ ಕೂಡ ವ್ಯಯ-

ವಾಗುವುದಿಲ್ಲ. ಇಂತಹ ಹಣವನ್ನು ಧರ್ಮಸಂಸ್ಥೆಗಳೇ ಆಗಲಿ. ಧಾರ್ಮಿಕ ಪ್ರವೃತ್ತಿಯ ಜನರೇ ಆಗಲಿ ಸ್ವೀಕರಿಸುವುದು ಕೂಡ ಅಷ್ಟು ಯೋಗ್ಯ-ವೆನಿಸುವುದಿಲ್ಲ.

## ೫೨೯. ನಿಂಬಫಲಂ ಕಾಕೈರೇವ ಭುಜ್ಯತೇ

ಬೇವಿನ ಹಣ್ಣುಗಳನ್ನು ಕಾಗೆಗಳು ಮಾತ್ರ ತಿನ್ನುತ್ತವೆ ಎಂದು ಉದಾ-ಹರಿಸುವ ಈ ಸೂತ್ರವು ಹಿಂದಿನ ಸೂತ್ರದ ಆಶಯವನ್ನು ಸಮರ್ಥಿಸುತ್ತದೆ. ಮುಂದಿನ ಸೂತ್ರದಲ್ಲಿ ಕೂಡ....

## ೫೩೦. ನಾಂಬೋಧಿಃ ತೃಷ್ಣಾಂ ಅಪೋಹತಿ

ಸಮುದ್ರದ ಉಪ್ಪುನೀರು ನೀರಡಿಕೆಯನ್ನು ಕಳೆಯಲಾರದು ಎಂದು ಪರ್ಯಾಯವಾಗಿ ಹೇಳಿ. ನೀಚರ ಹಣವು ಒಳ್ಳೆಯ ಕಾರ್ಯಕ್ಕೆ ಉಪಯೋಗ-ವಾಗಿ ಸಾರ್ಥಕವಾಗಲಾರದೆಂದೇ ತಿಳಿಯಪಡಿಸಲಾಗಿದೆ.

## ೫೩೧. ವಾಲುಕಾ ಅಪಿ ಸ್ವಗುಣಮಾಶ್ರಯತೇ

ಈ ಸೂತ್ರದಲ್ಲಿಯ ದೃಷ್ಟಾಂತವು ಅಷ್ಟು ಸ್ಪಷ್ಟವಾಗಿಲ್ಲ. ಉಸುಕು ತನ್ನ ಗುಣವನ್ನೇ ಆಶ್ರಯಿಸುತ್ತದೆ ಎಂದು ಹೇಳುವಲ್ಲಿ, ಅದರಲ್ಲಿ ನೀರು ಇಂಗಿಹೋಗುವ ಸ್ವಭಾವವನ್ನು ಎತ್ತಿತೋರಿಸಿ, ಸ್ವಭಾವಕ್ಕೆ ತಕ್ಕಂತೆ ಕೃತಿ ಇರುತ್ತದೆ ಎಂದು ಸೂಚಿಸುವುದು ಸೂತ್ರಕಾರನ ಅಭಿಪ್ರಾಯವಾಗಿರ-ಬಹುದು.

## ೫೩೨. ಸಂತೋ ಅಸತ್ಸು ನ ರಮಂತೇ

ಸಜ್ಜನರು ದುಷ್ಟರ ಸಹವಾಸವನ್ನೆಂದೂ ಬಯಸುವುದಿಲ್ಲ. ಅವರಲ್ಲಿ ಅವರಿಗೆ ಯಾವ ಸಂತಸವೂ ದೊರೆಯಲಾರದು. ದುಷ್ಟರ ಸ್ವಭಾವಕ್ಕೆ ಸಜ್ಜನರ ನಡೆವಳಿಕೆಯು ಸಂಪೂರ್ಣ ವಿರುದ್ಧವಾಗಿರುವಾಗ, ಯಾವ ವಿಷಯ-ದಲ್ಲಿಯೂ ಅವರಲ್ಲಿ ಹೊಂದಾಣಿಕೆಯಾಗಲಾರದು. ಹೀಗಾಗಿ ಅವರೆಂದೂ ಕೂಡಿ ಇರಲು ಸಾಧ್ಯವಿಲ್ಲ. ಕತ್ತಲೆ ಹಾಗು ಬೆಳಕು ಹೇಗೆ ಏಕಕಾಲಕ್ಕೆ ಒಂದೇ ಸ್ಥಳದಲ್ಲಿ ಇರಲಾರವೋ, ಅದರಂತೆ ಇವರ ಪರಿಸ್ಥಿತಿ. ಇದಕ್ಕೆ ದೃಷ್ಟಾಂತ-ವೆಂದು—

## ೫೩೩. ಹಂಸಃ ಪ್ರೇತವನೇ ನ ರಮತೇ

ಹಂಸಪಕ್ಷಿಯು ಸ್ಮಶಾನದಲ್ಲಿ ಕ್ರೀಡಿಸಿ ಆನಂದಪಡಲಾರದು. ಅದು ಕಮಲಗಳಿಂದ ತುಂಬಿ ಶೋಭಿಸುವ ಸರೋವರವನ್ನೇ ಆಶ್ರಯಿಸುವುದು ಎಂದು ಉದಾಹರಿಸಲಾಗಿದೆ.

## ೫೩೪. ಮಾಂಸಭಕ್ಷಣಂ ಅಯುಕ್ತಂ ಸರ್ವೇಷಾಮ್

ಮಾಂಸಭಕ್ಷಣವನ್ನು ಮಾಡುವುದು ಯಾರಿಗೂ ಒಳ್ಳೆಯದಲ್ಲ ಎಂದು ಸೂತ್ರಕಾರನು ಇಲ್ಲಿ ಬೋಧಿಸುತ್ತಾನೆ. ಇದರ ಗರ್ಭಿತಾರ್ಥವೆಂದರೆ, ಪಶು-ವಿನ ಮಾಂಸವು ನಮ್ಮ ದೇಹದಲ್ಲಿ ಸೇರಿ, ಪಾಶವೀವೃತ್ತಿಯನ್ನೇ ಬೆಳೆಸು-ತ್ತದೆ. ಆದ್ದರಿಂದ ಸಾತ್ವಿಕ ವೃತ್ತಿಯನ್ನು ಬೆಳೆಸಿಕೊಳ್ಳಬೇಕೆನ್ನುವವರು ಎಂದೂ ಮಾಂಸವನ್ನು ಸೇವಿಸಬಾರದು. ಅದು ತಾಮಸೀ ಆಹಾರ. ಭೀಷ್ಮ-ಪಿತಾಮಹನು ಶಾಂತಿಪರ್ವದಲ್ಲಿ ಮಾಂಸಭಕ್ಷಣದ ದುಷ್ಪರಿಣಾಮಗಳನ್ನು ಯುಧಿಷ್ಠಿರನಿಗೆ ತಿಳಿಸಿಹೇಳಿ—

ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಸ್ವಸ್ತ್ಯಯನಂ ಮಹತ್ ।
ಮಾಂಸಸ್ಯಾ ಭಕ್ಷಣಂ ಪ್ರಾಹುಃ ನಿಯತಾಃ ಪರಮರ್ಷಯಃ ॥

ಮಾಂಸವನ್ನು ಭಕ್ಷಿಸದಿರುವುದು ಆಯುಷ್ಯ, ಕೀರ್ತಿ, ಸುಖ ಹಾಗು ಧನ್ಯತೆಗಳನ್ನು ತಂದುಕೊಡುತ್ತದೆಯೆಂದು ಬೋಧಿಸಿದ್ದಾನೆ.

## ೫೩೫. ನ ಮಾತ್ರಾಸಹವಾಸಃ ಕರ್ತವ್ಯಃ

ಇಲ್ಲಿ ಯೌವನಾವಸ್ಥೆಯಲ್ಲಿರುವ ಮನುಷ್ಯನು ತಾಯಿಯೊಂದಿಗೆ ಕೂಡ ಏಕಾಂತವಲ್ಲಿರಬಾರದು ಎಂದು ಹೇಳಿದ್ದು ಮನಸ್ಸಿನ ಚಂಚಲತೆಯನ್ನು ಹಾಗು ಯೌವನಾವಸ್ಥೆಯು ಮನುಷ್ಯನನ್ನು ಹೇಗೆ ಹುಚ್ಚು-ಹುಚ್ಚಾಗಿ ಕುಣಿಸುವ ಸಾಧ್ಯತೆಯಿರುತ್ತದೆ ಎಂಬುದನ್ನು ಅತಿ ಸೂಕ್ಷ್ಮವಾಗಿ ತಿಳಿಯಪಡಿಸಲಾಗಿದೆ. ಇವರರ್ಥ ಜಾಗರೂಕತೆಯನ್ನು ವಹಿಸಬೇಕೆಂಬುದು ಮಾತ್ರ. ಎಷ್ಟೇ ಕಾಮುಕನಾಗಿದ್ದರೂ ತಾಯಿಯ ವಿಷಯಕ್ಕೆ ಕೂಡ ಒಳ್ಳೆಯ ಭಾವನೆಯನಿಟ್ಟುಕೊಳ್ಳದಷ್ಟು ನಮ್ಮ ಸಂಸ್ಕೃತಿಯು ಪಾಶವೀವೃತ್ತಿಯದಾಗಿಲ್ಲ ಎಂಬುದನ್ನು ಅಭಿಮಾನದಿಂದ ಹೇಳಬಹುದು.

## ೫೩೬. ಅರ್ಥಾರ್ಥಂ ಪ್ರವರ್ತತೇ ಲೋಕಃ

ಹಣಕ್ಕಾಗಿ ಹವಣಿಸುವುದು ಅಥವಾ ಆಸೆಪಡುವುದು ಲೋಕದ ಸ್ವಭಾವ. ಅದರಲ್ಲಿಯೂ ಹೆಚ್ಚು-ಹೆಚ್ಚು ಹಣ ಗಳಿಸಿದಂತೆ ಅದರ ಹುಚ್ಚು ಹೆಚ್ಚಾಗುತ್ತಲೇ ಹೋಗುತ್ತದೆ. ತೃಪ್ತಿಯು ಪರಮೇಶ್ವರನ ಮೋಸಲಾಗಿದ್ದ ಆರು ಗುಣಗಳಲ್ಲಿ ಒಂದು. ಆದ್ದರಿಂದ ಮಾನವರು ಅದನ್ನು ಅಳವಡಿಸಿಕೊಳ್ಳುವುದು ಸುಲಭವಲ್ಲ. ಆದರೂ ದೇವತ್ವವನ್ನೇ ಗುರಿಯಾಗಿಟ್ಟುಕೊಂಡು ತೃಪ್ತಿಯಿಂದಿರುವುದು ಜೀವನದಲ್ಲಿ ಯಾವಾಗಲೂ ಸಮಾಧಾನವನ್ನು ತರು-

ತ್ರದೆ, ಈ ಹಿಂದೆ ಅತ್ಯವಶ್ಯವಿದ್ದ ಪ್ರಮಾಣವಲ್ಲಿಯಾದರೂ ಹಣ ದೊರೆಯ-ದಿದ್ದರೆ, ಜೀವನ ಸಾಗುವುದೇ ಕಷ್ಟವಾಗಿ, ಧರ್ಮಪ್ರವೃತ್ತಿಯು ಕೂಡ ಬೆಳೆಯಲಾರದೆಂದು ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು. ಆದರೆ ಅತ್ಯಾಸೆ-ಯಿಂದ ವ್ಯವಹರಿಸಬಾರದೆಂಬುದನ್ನು ಬೋಧಿಸಲು ಅವಶ್ಯವಾದ ಭೂಮಿಕೆ-ಯನ್ನು ಈ ಸೂತ್ರದಲ್ಲಿ ಚಾಣಕ್ಯನು ಮಂಡಿಸಿದ್ದಾನೆ.

## ೫೩೭. ಆಶಯಾ ಬಧ್ಯತೇ ಲೋಕಃ

ಆಸೆಯು ಮನುಷ್ಯನನ್ನು ಬಂಧನದಲ್ಲಿ ಇಡುತ್ತದೆ. ಆಸೆಬುರುಕನು ನಿಸ್ಪೃಹ ಮನುಷ್ಯನಂತೆ ಸ್ವಾಭಿಮಾನದಿಂದ ಇರಲಾರನು. ನಿಸ್ಪೃಹಿಯಾದವ ನಿಗೆ ಈ ಜಗತ್ತು ಒಂದು ಹುಲ್ಲುಕಡ್ಡಿಯೆನಿಸುತ್ತದೆ–ಎಂದು ಸುಭಾಷಿತವೊಂದು ಹೇಳುತ್ತದೆ. 'ನಿಸ್ಪೃಹಸ್ಯ ತೃಣಂ ಜಗತ್' ಆಸೆಯುಳ್ಳವನಿಗೆ ತೃಪ್ತಿ-ಯಿಲ್ಲದ್ದರಿಂದ ತನ್ನ ಆಶಾಪೂರ್ತಿಗಾಗಿ ಸ್ವಾಭಿಮಾನವನ್ನು ಅದಬಿಟ್ಟು, ದೈನ್ಯ ಹಾಗು ದಾಸಭಾವದಿಂದ ನಡೆದುಕೊಳ್ಳಬೇಕಾಗುತ್ತದೆ. ಇದು ಮನುಷ್ಯತ್ವಕ್ಕೆ ದುಃಖದಾಯಕವೇ ವಿನಃ ಭೂಷಣಪ್ರಾಯವಲ್ಲ. 'ಆಶಾಯಾಃ ಪರಮಂ ದುಃಖಂ, ನಿರಾಶಾಯಾಃ ಪರಮಂ ಸುಖಮ್'.

## ೫೩೮. ನ ಚ ಆಶಾಪರೈಃ ಸಹ ಶ್ರೀಃ ತಿಷ್ಠತಿ

ಲಕ್ಷ್ಮಿಯು ಆಸೆಬುರುಕನಲ್ಲಿ ವಾಸಿಸುವುದಿಲ್ಲ ಎಂಬುದು ಸೂತ್ರಕಾರನ ಅಭಿಪ್ರಾಯ. ಜಿಪುಣರಲ್ಲಿ ಒಂದು ವೇಳೆ ಅವಳು ವಾಸಿಸಿದರೂ, ತಮ್ಮನ್ನು ತಾವೇ ಕಳಕ್ಕೊಳೆಯಲು ಹೇಸದ ಆಶಾಪರರಲ್ಲಿ ವಾಸಮಾಡುವುದನ್ನು ಅವಳು ಮೆಚ್ಚುವುದಿಲ್ಲ. ಇದಕ್ಕೆ ಅಪವಾದಗಳು ದೊರೆಯಬಹುದು.

## ೫೩೯. ಆಶಾಪರೇ ನ ಧೈರ್ಯಮ್

ಸ್ವಾಭಿಮಾನವನ್ನೇ ಅಡವಿಟ್ಟ ಆಶಾಪರನಿಗೆ ಧೈರ್ಯವೆಲ್ಲಿಂದ ಬಂದೀತು ? ಆತ್ಮವಿಶ್ವಾಸವಿದ್ದವನಿಗೆ ಮಾತ್ರ ಧೈರ್ಯ, ಸಾಹಸಗಳು ಬೆನ್ನಟ್ಟಿ ಬರುತ್ತವೆ. ಕೇವಲ ಕೈ ಮುಂದಕ್ಕೆ ಚಾಚಿ ಅಥವಾ ಬೇರೆಯವರಲ್ಲಿಯ ತಿಂಡಿ-ತಿನಿಸುಗಳಿಗಾಗಿ ಹಾತೊರೆಯುವವರ ಸಮೀಪಕ್ಕೆ ಧೈರ್ಯವು ಸುಳಿಯಲಾರದು.

## ೫೪೦. ಆಶಾ ಲಜ್ಜಾಂ ವ್ಯಪೋಹತಿ

ಆತ್ಮಾಸೆಯುಳ್ಳವನ ಮೊದಲನೆಯ ವೈಶಿಷ್ಟ್ಯವೆಂದರೆ, ಅವನು ನಿರ್ಲಜ್ಜನಾಗಿರುತ್ತಾನೆ. ಇಲ್ಲವಾದಲ್ಲಿ ಅವನ ಅಪೇಕ್ಷೆ ಪೂರೈಸುವುದೆಂತು ? ಯಾರು ಎಷ್ಟೇ ತೆಗಳಲಿ. ಮಾನ-ಮರ್ಯಾದೆಯನ್ನು ಬದಿಗಿಟ್ಟು ತನ್ನ ಆಸೆಯನ್ನು ಪೂರ್ತಿಗೊಳಿಸುವುದಕ್ಕೆ ಶತಪ್ರಯತ್ನ ಮಾಡುವುದೇ ಅವನ ಸ್ವಭಾವ. ಹೀಗಾಗಿ ನಿರ್ಲಜ್ಜತೆಯು ಅವನ ಕುಲದೈವತವಿದ್ದಂತೆ.

## ೫೪೧. ದೈನ್ಯಾತ್ ಮರಣಂ ಉತ್ತಮಮ್

ಆತ್ಮಾಸೆಯುಳ್ಳವನಿಗಿಂತ ಹೀನರಿಲ್ಲ ಎಂದು ಸೂಚಿಸುವುದಕ್ಕಾಗಿಯೇ, ದೈನ್ಯಕ್ಕಿಂತಲೂ ಮರಣವೇ ಲೇಸು ಎಂದು ಸೂತ್ರಕಾರನು ಇಲ್ಲಿ ಆಲಂಕಾರಿಕವಾಗಿ ಹೇಳಿದ್ದಾನೆ. ದೈನ್ಯದಿಂದ ಇನ್ನೊಬ್ಬರ ಮುಂದೆ ತಲೆಬಾಗಿ ಜೀವನವನ್ನು ಸಾಗಿಸುವುದು ಮರಣಕ್ಕಿಂತಲೂ ತುಚ್ಛವಾದುದು. ಸ್ವಾಭಿಮಾನಿಯಾದವನು ಆತ್ಮವಿಶ್ವಾಸ ಹಾಗು ತೃಪ್ತಿಯಿಂದ ಜೀವನ ಸಾಗಿಸುವುದು ಭೂಷಣ. ದೈನ್ಯವು ತುಣುಕು ರೊಟ್ಟಿಗಾಗಿ ನಾಲಗೆಯನ್ನು ಚಾಚಿ, ಬಾಲವನ್ನು ಅಲ್ಲಾಡಿಸುವ ನಾಯಿಯ ಪ್ರವೃತ್ತಿಯನ್ನು ಸೂಚಿಸುತ್ತದೆ.

## ೫೪೨. ಆತ್ಮಾ ನ ಸ್ತೋತವ್ಯಃ

ತನ್ನ ಪ್ರಶಂಸೆಯನ್ನು ತಾನೇ ಮಾಡಿಕೊಳ್ಳಬಾರದು. ನಿಜವಾಗಿಯೂ ಮನುಷ್ಯನಲ್ಲಿ ಯೋಗ್ಯತೆ ಇದ್ದರೆ, ಅವನ ಶತ್ರುವೂ ಕೂಡ, ಮುಂದೆ ಶತ್ರುತ್ವವನ್ನು ತೋರಿದರೂ, ಮನಸ್ಸಿನಲ್ಲಿ ಅವನ ಒಳ್ಳೆಯತನವನ್ನು ಮನ್ನಿಸಲೇಬೇಕಾಗುತ್ತದೆ. ಆದರೆ ತಾನೇ ತನ್ನ ಪ್ರಶಂಸೆಯನ್ನು ಮಾಡಿಕೊಳ್ಳುವುದು ಮೂರ್ಖನ ಲಕ್ಷಣ. ಅವರಿಂದಾಗಿ ಅಪಹಾಸ್ಯಕ್ಕೆ ಈಡಾಗುತ್ತಾನೆ. ಇನ್ನೊಬ್ಬರು ತನ್ನನ್ನು ದೊಡ್ಡವನೆಂದು ಕರೆಯಲಿ ಎಂದು ಆತ್ಮಪೌರುಷವನ್ನು ಮಾಡಿಕೊಂಡರೆ, ಇವನನ್ನು ಯಾರೂ ಲೆಕ್ಕಿಸಿಲ್ಲವೆಂದೇ ತಾನೇ ಈ ಕಾರ್ಯವನ್ನು ಮಾಡಿಕೊಳ್ಳುತ್ತಿದ್ದಾನೆಂದು ಎಲ್ಲರಿಗೂ ಅನ್ನಲಿಕ್ಕೆ ಅವಕಾಶ ದೊರೆಯುತ್ತದೆ. ವಿದ್ವಾಂಸರೇ ಆಗಲಿ, ಶೂರರೇ ಆಗಲಿ ತಮ್ಮನ್ನು ತಾವೇ ಹೊಗಳಿಕೊಳ್ಳದಿರುವುದೇ ಭೂಷಣ.

## ೫೪೩. ನ ದಿವಾ ಸ್ವಪ್ನಂ ಕುರ್ಯಾತ್

ಹಗಲು ಮಲಗಿಕೊಳ್ಳಬಾರದೆಂದು ಇಲ್ಲಿ ಉಪದೇಶಿಸಿದ್ದು ಆರೋಗ್ಯಶಾಸ್ತ್ರದ ದೃಷ್ಟಿಯಿಂದ ವಿಹಿತವಾದದ್ದು. ಹಗಲು ನಿದ್ರೆ ಮಾಡಿದರೆ ರಕ್ತದಲ್ಲಿ ದೋಷವುಂಟಾಗಿ, ಚಿತ್ತಮಾಲಿನ್ಯ ಉಂಟಾಗುತ್ತದೆ. ಮುಂದೆ ರಾತ್ರಿ ಸರಿಯಾಗಿ ನಿದ್ರೆ ಬರುವುದಿಲ್ಲ. ಉಪನಯನ ಕಾಲಕ್ಕೆ ಬ್ರಹ್ಮಚಾರಿಗೆ ಹಗಲು ಮಲಗಬಾರದೆಂದು '–ದಿವಾಮಾ ಸ್ವಾಪ್ಸೀಃ '–ಉಪದೇಶ ಮಾಡುವ ಹಿನ್ನೆಲೆಯು ಇದೇ.

' ದಿವಾಸ್ವಪ್ನ ' ಶಬ್ದಕ್ಕೆ ಹಗಲುಗನಸುಗಳನ್ನು ಕಾಣುವುದು ಎಂಬ ಅರ್ಥಮಾಡುವುದೂ ಉಂಟು. ಇದರ ಪ್ರಕಾರ ಮನಸ್ಸಿನಲ್ಲಿ ಮಂಡಿಗೆಯನ್ನು ಮಾಡುವುದು ವಾಸ್ತವವಾದದ ಲಕ್ಷಣವಲ್ಲವೆಂಬುದೇ ತಾತ್ಪರ್ಯ.

## ೫೪೪. ನ ಚ ಆಸನ್ನಮಪಿ ಪಶ್ಯತಿ ಐಶ್ವರ್ಯಾಂಧೋ ನ ಶೃಣೋತೀಷ್ಟಂ ವಾಕ್ಯಮ್

ಐಶ್ವರ್ಯದ ಮದದಿಂದ ಕುರುಡಾದವನು ಹತ್ತಿರವಿದ್ದವನನ್ನು ನೋಡುವುದಿಲ್ಲ. ಹಿತವಚನಗಳನ್ನು ಆಲಿಸುವುದಿಲ್ಲ ಎಂದು ಈ ಸೂತ್ರದಲ್ಲಿ ಲಕ್ಷ್ಮೀಮದದ ಪ್ರಭಾವವನ್ನು ಬಣ್ಣಿಸಲಾಗಿದೆ. ಐಶ್ವರ್ಯವು ಮನುಷ್ಯ-ನನ್ನು ಪಿಶಾಚಿಯನ್ನಾಗಿ ಪರಿವರ್ತಿಸುತ್ತದೆ ಎಂದು ಈ ಹಿಂದೆ ಚರ್ಚಿಸಿದ್ದನ್ನು ಇಲ್ಲಿ ಸ್ಮರಿಸಬಹುದು. ವಿವೇಕವಿಲ್ಲದ ಐಶ್ವರ್ಯವು ಹೀಗೆಲ್ಲ ಮಾಡಿಸುತ್ತದೆ. ಈ ವಿಷಯಕ್ಕೆ—

ವಿದ್ಯಾಮದೋ ಧನಮದೋ ಅಭಿಜಾತ್ಯಮದಸ್ತಥಾ ।
ಮದಾಏತೇಽ ವಲಿಪ್ತಾನಾಂ ತ ಏವ ಮಹತಾಂ ದಮಃ ॥

ಎಂಬ ಸುಂದರವಾದ ಸುಭಾಷಿತವೊಂದಿದೆ. ವಿದ್ಯೆ, ಐಶ್ವರ್ಯ ಹಾಗು ದೊಡ್ಡಸ್ತಿಕೆಯುಳ್ಳ ಮನೆತನದಲ್ಲಿ ಜನ್ಮ—ಇವು ಅವಿವೇಕಿಗಳಲ್ಲಿ ಮದಕ್ಕೆ (ಸೊಕ್ಕಿಗೆ) ಕಾರಣವಾದರೆ, ವಿವೇಕಿಗಳಿಗೆ ತದ್ವಿಪರೀತವಾಗಿ ದಮಕ್ಕೆ ಎಂದರೆ ನಿಗ್ರಹಕ್ಕೆ ಕಾರಣವಾಗುತ್ತದೆ. ಅಂತೆಯೇ ಅವರು ಸತ್ಪುರುಷ-ರಾಗುತ್ತಾರೆ. ಅವಿವೇಕಿಯಾದ ಸಿರಿವಂತನು ಬಳಗದವರು, ಹಿರಿಯರು ಯಾರನ್ನೂ ಲೆಕ್ಕಿಸುವುದಿಲ್ಲ. ಅವರ ಮಾತಿಗೆ ಬೆಲೆ ಕೊಡುವುದಿಲ್ಲ ಎನ್ನು-ವುದೇ ಈ ಸೂತ್ರದ ತಾತ್ಪರ್ಯ.

## ೫೪೫. ಅತಿಥಿ ಅಭ್ಯಾಗತಂ ಪೂಜಯೇತ್ ಯಥಾ ವಿಧಿ

ನಮ್ಮ ಸಂಸ್ಕೃತಿಯಲ್ಲಿ ತಾಯಿ, ತಂದೆ, ಗುರು, ಅತಿಥಿ–ಇವರೆಲ್ಲರನ್ನೂ ದೇವರಿಗೆ ಸಮಾನವಾಗಿ ಕಾಣಬೇಕು ಎಂದು ಉಪದೇಶಿಸಲಾಗಿದೆ. 'ಅತಿಥಿ ದೇವೋ ಭವ'—ಅತಿಥಿ ಸತ್ಕಾರದ ಮಹತ್ವವನ್ನು ವಿವರಿಸುವ ಆಖ್ಯಾನಗಳು ಇತಿಹಾಸ, ಪುರಾಣಗಳಲ್ಲಿ ಸಾಕಷ್ಟು ದೊರೆಯುತ್ತವೆ. ಕಠೋಪನಿಷತ್ತಿನಲ್ಲಿ

ನಚಿಕೇತನು ಯಮನ ಬಾಗಿಲಲ್ಲಿ ಮೂರು ರಾತ್ರಿ ಸತ್ಕಾರವಿಲ್ಲದೆ ಕುಳಿತಿದ್ದ-ರಿಂದ, ಯಮನಿಗೂ ಕೂಡ ಭಯವಾಗಿ, ನಚಿಕೇತನಿಗೆ ಮೂರು ವರಗಳನ್ನು ದಯಪಾಲಿಸುತ್ತಾನೆ. ಅತಿಥಿಯನ್ನು ಅವಮರ್ಯಾದೆ ಮಾಡಕೂಡದು. ಅವನ ಸತ್ಕಾರದಿಂದ ದೇವತೆಗಳು ಸುಪ್ರೀತರಾಗುತ್ತಾರೆ. ಅತಿಥಿಗಳನ್ನು ದೇವರೆಂದೇ ಸತ್ಕರಿಸುವ ಸಂಪ್ರದಾಯದ ರೂಢಿಯು ಧಾರವಾಡ ಜಿಲ್ಲೆ-ಯಲ್ಲಿರುವ ಆನಂದವನ ಅಗಡಿ ಕ್ಷೇತ್ರದಲ್ಲಿ ಇಂದಿಗೂ ಪ್ರಚಲಿತವಿದೆ.

ಅತಿಥಿಯ ಲಕ್ಷಣವನ್ನು ಹೇಳುವಾಗ, 'ಏಕರಾತ್ರಸ್ತು ನಿವಸನ್ ಅತಿಥಿಃ ಸ್ಮೃತಃ' ಎಂದು ಹೇಳಲಾಗುತ್ತದೆ. ಯಥೇಷ್ಟವಾದ ಸತ್ಕಾರ ದೊರೆಯುವುದೆಂದು ಬಹಳ ದಿವಸಗಳ ವರೆಗೆ ತಳವೂರಿದರೆ, ಅವನು ಅತಿಥಿ-ಯಾಗಿ ಉಳಿಯುವುದಿಲ್ಲ. ಒಂದು ರಾತ್ರಿಯ ಮಟ್ಟಿಗೆ ಮಾತ್ರ ವಾಸ್ತವ್ಯ ಮಾಡಿದವರಿಗೆ ಅತಿಥಿ ಸತ್ಕಾರವು ಅವಶ್ಯವಾದದ್ದು. ಇಲ್ಲವಾದಲ್ಲಿ ಈ ಶಾಸ್ತ್ರದ ದುರುಪಯೋಗವಾಗುತ್ತದೆ. ಅತಿಥಿ ಸತ್ಕಾರವು ಪಂಚಮಹಾ-ಯಜ್ಞಗಳಲ್ಲಿ ಮನುಷ್ಯಯಜ್ಞವೆಂದು ಪರಿಗಣಿಸಲ್ಪಡುತ್ತದೆ.

## ೫೪೬. ನಾಸ್ತಿ ಹವ್ಯಸ್ಯ ವ್ಯಾಘಾತಃ

ದೇವತೆಗಳಿಗೆ ಯಜ್ಞದಲ್ಲಿ ಅರ್ಪಿಸಲ್ಪಡುವುದೇ ಹವಿಸ್ಸು. ಆದರೆ ಪಿತೃಗಳನ್ನು ಉದ್ದೇಶಿಸಿ ಮಾಡಿದ ಕರ್ಮವು ಕವ್ಯವೆನಿಸುತ್ತದೆ. ಪ್ರಸ್ತುತ ಸೂತ್ರವು ದೇವತೆಗಳಿಗೆ 'ವಿಹಿತ ಕರ್ಮ' (ಹವ್ಯ)ಗಳ ಮುಖಾಂತರ ಸಮರ್ಪಿಸಿದ ಹವಿಸ್ಸು ವ್ಯರ್ಥಹೋಗುವುದಿಲ್ಲ ಎಂದು ಹೇಳುತ್ತದೆ. ಅರ್ಥಾತ್ ಯಾವ ವಿಧ್ಯುಕ್ತ ಕರ್ಮವೂ ನಿಷ್ಫಲವಾಗುವುದಿಲ್ಲ. ಅದು ಸರಿಯಾಗಿ ನೆರ-ವೇರದಿದ್ದರೆ ಆ ಮಾತು ಬೇರೆ. ಆದರೆ ಕರ್ಮಕ್ಕೆ ತಕ್ಕಂತೆ ಫಲ ಬರಲೇ-ಬೇಕು.

ಇನ್ನೊಂದು ಬಗೆಯಾಗಿ ಈ ಸೂತ್ರಕ್ಕೆ 'ಧರ್ಮಕಾರ್ಯಗಳು ಲೋಪ ವಾಗಬಾರದು' ಎಂದೂ ಅರ್ಥಮಾಡಬಹುದು. ಶಾಸ್ತ್ರಗಳಲ್ಲಿ ವಿಧಿಸಿದಂತೆ ಕಾಲಕ್ಕೆ ಸರಿಯಾಗಿ ಅವುಗಳನ್ನು ಆಚರಿಸುವುದೇ ಧರ್ಮ.

## ೫೪೭. ಶತ್ರುರ್ಮಿತ್ರವದ್ಭಾತಿ

ಶತ್ರುವು ಮಿತ್ರನಂತೆ ತೋರುತ್ತಾನೆ. ಬಹಿರಂಗವಾಗಿ ಶತ್ರುತ್ವವನ್ನು ಪ್ರಕಟಿಸಿ, ದ್ವೇಷಮಾಡುವ ಜನ ದುರ್ಲಭ. ಆದರೆ ಮಿತ್ರರಂತೆಯೇ ನಟಿಸಿ, ಅಂತರಂಗದಲ್ಲಿ ಶತ್ರುತ್ವವನ್ನು ಬಚ್ಚಿಡುವವರೇ ಬಹಳ. ಇಂಥವರಿಂದ ಅಪಾಯ ಹೆಚ್ಚು. ಆದ್ದರಿಂದ ಯಾವನು ನಿಜವಾದ ಶತ್ರು ಎಂಬುದನ್ನು ಅತಿ ಸೂಕ್ಷ್ಮವಾಗಿ ಪರೀಕ್ಷಿಸಿ ವ್ಯವಹರಿಸಬೇಕು. ಮೋಸಹೋದ ಮೇಲೆ ಬುದ್ಧಿಬಂದರೆ ಏನೂ ಪ್ರಯೋಜನವಿಲ್ಲ.

## ೫೪೮. ಮೃಗತೃಷ್ಣಾ ಜಲವದ್ ಭಾತಿ

ಬಿಸಿಲ್ಗುದುರೆಯು ನೀರಿನ ಪ್ರವಾಹದಂತೆಯೇ ಕಾಣುವಂತೆ ಶತ್ರುಗಳು ತೋರಿಕೆಗೆ ಮಿತ್ರರಂತೆ ಅನಿಸುತ್ತಾರೆ ಎಂಬ ದೃಷ್ಟಾಂತವು ಈ ಸೂತ್ರದಲ್ಲಿ ಇದೆ. ಬಿಸಿಲ್ಗುದುರೆಯ ಬೆನ್ನುಹತ್ತಿ ಕೊನೆಗೆ ನಿರಾಸೆಯಿಂದ ಪ್ರಾಣ ತೆರಬೇಕಾಗುವುದು. ಮಿತ್ರನಂತೆ ತೋರುವ ಶತ್ರುವಿನ ಸಹವಾಸದ ಫಲವೂ ಹೀಗೆಯೇ ಆಗುವುದು.

## ೫೪೯. ದುರ್ಮೇಧಸಾಂ ಅಸಚ್ಛಾಸ್ತ್ರಂ ಮೋಹಯತಿ

ವಿಪರೀತ ಬುದ್ಧಿ ಅಂದರೆ ಅರ್ಥಕ್ಕೆ ಅಪಾರ್ಥ ಮಾಡುವವರಿಗೆ ನಾಸ್ತಿಕ ಮತವು ಒಳ್ಳೆಯದೆಂದು ತೋರುತ್ತದೆ. ಇವರು ತಮ್ಮ ಬುದ್ಧಿಯನ್ನು ಒಳ್ಳೆಯದಕ್ಕಾಗಿ ಉಪಯೋಗಿಸುವ ಅಭ್ಯಾಸವನ್ನು ಇಟ್ಟುಕೊಂಡಿರುವುದಿಲ್ಲ. ಯಾವಾಗಲೂ ಲೋಕವಿರುದ್ಧವಾಗಿ ವ್ಯವಹರಿಸುವುದು, ಒಳ್ಳೆಯವರ ವಿಚಾರಗಳಲ್ಲಿ ತಪ್ಪು ಹುಡುಕುವುದು ಇವರ ಸ್ವಭಾವ. ಆದ್ದರಿಂದ ಎಲ್ಲರೂ ದೇವರು, ಧರ್ಮವೆಂದರೆ ಇವರು ಅದೆಲ್ಲ ಸುಳ್ಳು ಎಂದು ವಾದಿಸಿ, ನಾಸ್ತಿಕ ದರ್ಶನ-

ಗಳಿಗೆ ಮೋಹಗೊಂಡು ತಾವು ಹಾಳಾಗುತ್ತಾರೆ: ಹೆರವರನ್ನೂ ದುರ್ಮಾ-
ರ್ಗಕ್ಕೆ ಎಳೆಯುತ್ತಾರೆ.

## ೫೫೦. ದೈವಾಯತ್ತಂ ನ ಶೋಚೇತ್

ಯಾವುದು ದೈವದ ಅಧೀನವಾಗಿರುವುದೋ ಅಂಥದರ ವಿಷಯವಾಗಿ ದುಃಖಿಸಬಾರದು. ತನ್ನ ಪ್ರಯತ್ನಗಳನ್ನು ಮೀರಿದ ಕಾರ್ಯಕ್ಕೆ ಮನುಷ್ಯನು ಹೊಣೆಗಾರನಾಗಲಾರ. ತಾನು ಮಾಡಬೇಕಾದ ಪ್ರಯತ್ನಗಳನ್ನು ಮಾಡಿದ ಮೇಲೆ ಅವನ ಕರ್ತವ್ಯ ತೀರಿತು. ಕಾರ್ಯ ಸಿದ್ಧಿಸದಿರುವುದು ಅವನ ದೋಷವಲ್ಲ. ' ಯತ್ನೇ ಕೃತೇ ಯದಿ ನ ಸಿದ್ಧ್ಯತಿ ಕೋತ್ರ ದೋಷಃ ' ಈ ಹಿಂದೆ ದೈವ ಹಾಗು ಪುರುಷಪ್ರಯತ್ನಗಳ ವಿಷಯವಾಗಿ ಸಾಕಷ್ಟು ಚರ್ಚೆಯಾಗಿದೆ. ಪ್ರಸ್ತುತ ಸೂತ್ರದಲ್ಲಿ ಚಾಣಕ್ಯನಿಗೆ ಪುರುಷಪ್ರಯತ್ನಕ್ಕೆ ಮೀರಿದ ವಿಷಯಗಳ ಬಗ್ಗೆ ಚಿಂತೆ ಅಥವಾ ದುಃಖ ಮಾಡುವುದರಲ್ಲಿ ಅರ್ಥವಿಲ್ಲವೆಂದು ತಿಳಿಸಬೇಕಾಗಿದೆ, ಇಷ್ಟೆ.

## ೫೫೧. ಹೃದ್ಗತಮಾಚ್ಛಾದ್ಯಾನ್ಯದ್ವದತ್ಯನಾರ್ಯಃ

ಅನಾರ್ಯರು ಅರ್ಥಾತ್ ಧರ್ಮಕ್ಕೆ ವಿರೋಧವಾಗಿ ನಡೆದುಕೊಳ್ಳುವವರು ತಮ್ಮ ಹೃದಯದಲ್ಲಿದ್ದುದನ್ನು ಬಚ್ಚಿಟ್ಟು, ಬೇರೆ ಎಂಥದೋ ಸುಳ್ಳುಹೇಳಿ, ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾರೆ. ಮಾತು, ಕೃತಿ ಹಾಗು ಮನಸ್ಸು ಇವುಗಳಲ್ಲಿ ಐಕಮತ್ಯವಿಲ್ಲದ ತತ್ವಶೂನ್ಯರಾದ ಇವರನ್ನು ಎಂದಿಗೂ ನಂಬಲಾಗದು. ' ಮನಸ್ಯನ್ಯತ್ ವಚಸ್ಯನ್ಯತ್ ಕರ್ಮಣ್ಯನ್ಯತ್ ದುರಾತ್ಮನಾಮ್ ' ಎಂದು ಇದಕ್ಕಾಗಿಯೇ ಹೇಳಿರುವುದುಂಟು.

## ೫೫೨. ಬುದ್ಧಿಹೀನಃ ಪಿಶಾಚತುಲ್ಯಃ

ಬುದ್ಧಿಹೀನನಾದವನು ಪಿಶಾಚಿಗೆ ಸಮಾನನು. ಅರ್ಥಾತ್ ಮನುಷ್ಯ-ನೆನಿಸಿಕೊಳ್ಳುವ ಯೋಗ್ಯತೆ ಅವನಿಗಿರುವುದಿಲ್ಲ. ಬುದ್ಧಿ–ಎಂದರೆ ಸದ-ಸದ್ವಿವೇಕಬುದ್ಧಿಯು—ಇಲ್ಲದಿರುವಾಗ ಅವನು ಅವಿವೇಕಿಯೇ. ಆದ್ದರಿಂದ ಪಶುಗಳಂತೆ ಅಜ್ಞಾನಿಯೂ ಅಲ್ಲ, ಮನುಷ್ಯನ ವಿವೇಕವೂ ಇಲ್ಲ. ಹೀಗಾಗಿ ಪಿಶಾಚಯೋನಿಗೆ ಸೇರಿದವನೆಂದೆನಿಸಿಕೊಳ್ಳುತ್ತಾನೆ. ಹಿಂದೆ ಐಶ್ವರ್ಯವು ಮನುಷ್ಯನನ್ನು ಪಿಶಾಚಿಯನ್ನಾಗಿ ಮಾಡುತ್ತದೆ ಎಂದು ಹೇಳಲಾಗಿದೆ. ಈಗ ವಿವೇಕಶೂನ್ಯತೆಯೂ ಅದೇ ಪರಿಣಾಮವನ್ನುಂಟುಮಾಡುವುದೆಂದು ಇಲ್ಲಿ ಹೇಳಿದೆ. ಅರ್ಥಾತ್ ಐಶ್ವರ್ಯದಿಂದ ವಿವೇಕವನ್ನು ಕಳೆದುಕೊಂಡು, ದುರ್ಬುದ್ಧಿಯಿಂದ ಪಿಶಾಚಿಯಂತೆ ವರ್ತಿಸುವುದು ಇಲ್ಲಿ ಸೂಚಿತವಾಗಿದೆ.

## ೫೫೩. ಅಸಹಾಯಃ ಪಥಿ ನ ಗಚ್ಛೇತ್

ಒಬ್ಬೊಂಟಿಗನಾಗಿ ಯಾತ್ರೆಗೆ ಹೋಗಬಾರದು ಅಥವಾ ಸಂಗಡಿಗ-ರಿಲ್ಲದೆ ದೀರ್ಘಪ್ರವಾಸವನ್ನು ಮಾಡಬಾರದು ಎಂದು ಹೇಳುವ ಈ ಸೂತ್ರವು ವ್ಯವಹಾರ ಜಾಣ್ಮೆಯನ್ನು ಉಪದೇಶಿಸುತ್ತದೆ. ಪ್ರಾಚೀನ ಭಾರತದಲ್ಲಿ ಪ್ರವಾಸವು ದುಷ್ಕರವಾಗಿತ್ತು. ಈಗಿನಂತೆ ವಾಹನಸೌಕರ್ಯಗಳು ಇರಲಿಲ್ಲ, ಕಳ್ಳಕಾಕರ ಭಯವೂ ಹೆಚ್ಚಾಗಿತ್ತು. ಆದ್ದರಿಂದ ಏಕಾಕಿಯಾಗಿ ಪ್ರವಾಸ ಮಾಡುವುದು ಗಂಡಾಂತರಕಾರಿ. ನೋವು, ಆಪತ್ತುಗಳು ಅಕಸ್ಮಾತ್ತಾಗಿ ಉಂಟಾದರೆ, ಸಹಾಯಕ್ಕೆಂದು ಯಾರಾದರೂ ಜೊತೆಗೆ ಬೇಕೇಬೇಕು. ಹೀಗಾಗಿ ಸಹಾಯವಿಲ್ಲದೆ ಏಕಾಕಿಯಾಗಿ ಪ್ರವಾಸ ಮಾಡಕೂಡದು ಎಂದು ಬೋಧಿಸಲಾಗಿದೆ.

## ೫೫೪. ನಾಸ್ತಿ ಬುದ್ಧಿಮತಾಂ ಶತ್ರುಃ

ವಿವೇಕದಿಂದ ನಡೆದುಕೊಳ್ಳುವವನಿಗೆ ಶತ್ರುಗಳಿಲ್ಲ. ಈ ವಿಷಯವನ್ನು

ಪರ್ಯಾಯವಾಗಿ ಈ ಮೊದಲೇ ಚರ್ಚಿಸಲಾಗಿದೆ. ಒಟ್ಟಿನ ಮೇಲೆ ಮಾತು–ಕೃತಿಗಳಲ್ಲಿ ಸೌಜನ್ಯವನ್ನು ಇಟ್ಟುಕೊಂಡು, ಸ್ವಚ್ಛ ಮನಸ್ಸಿನಿಂದ ನಡೆದು-ಕೊಳ್ಳುವ ಬುದ್ಧಿವಂತನಿಗೆ ಶತ್ರುಗಳಿಲ್ಲವೆಂಬುದೇ ತಾತ್ಪರ್ಯ.

## ೫೫೫. ಆತ್ಮಚ್ಛಿದ್ರಂ ನ ಪ್ರಕಾಶಯೇತ್

ಇಲ್ಲಿ ಛಿದ್ರ ಶಬ್ದಕ್ಕೆ ತಪ್ಪುಗಳು, ನ್ಯೂನತೆಗಳು, ಸಾಮಾನ್ಯ ದೋಷ-ಗಳು ಎಂದು ಅರ್ಥಮಾಡಬಾರದು. ಗುಪ್ತ ವ್ಯವಹಾರಗಳು ಅಥವಾ ಯಾವುದನ್ನು ಪ್ರಕಟಿಸುವುದರಿಂದ ನಮ್ಮ ಮೂರ್ಖತನವೇ ಹೊರಬೀಳು-ತ್ತದೆಯೋ, ಅಂಥ ವಿಷಯಗಳನ್ನು ಹೊರಗೆಡಹಬಾರದು ಎಂದು ಮಾತ್ರ ಅರ್ಥಮಾಡಬೇಕು.

ತಪ್ಪೊಪ್ಪಿಕೊಳ್ಳುವುದು ಮಹಾತ್ಮರ ಲಕ್ಷಣ. ಗಾಂಧೀಜಿಯವರ ಜೀವನದಲ್ಲಿ ಇದಕ್ಕೆ ಸಾಕಷ್ಟು ನಿದರ್ಶನಗಳು ದೊರೆಯುತ್ತವೆ. ಈ ಸೂತ್ರದ ನಿಜವಾದ ತಾತ್ಪರ್ಯವು ತಿಳಿಯಬೇಕಾದರೆ ಕೆಳಗಿನ ಶ್ಲೋಕವೇ ಸಾಕು—

> ಆಯುರ್ವಿತ್ತಂ ಗೃಹಚ್ಛಿದ್ರಂ ಮಂತ್ರಮೈಥುನ ಭೇಷಜಮ್ ।
> ದಾನ ಮಾನಾಪಮಾನೌ ಚ ನವಗೋಪ್ಯಾನಿ ಕಾರಯೇತ್ ॥

ನಮ್ಮ ವಯಸ್ಸು, ಆಸ್ತಿ, ಮನೆಯಲ್ಲಿಯ ಜಗಳ, ಮಂತ್ರಶಕ್ತಿ ( Occult powers ), ಸ್ತ್ರೀಸಮಾಗಮ, ದಿವ್ಯೌಷಧ, ಜ್ಞಾನ, ದಾನ ಮಾಡಿದ್ದು ಅಥವಾ ಸ್ವೀಕರಿಸಿದ್ದು, ಮಾನಾಪಮಾನದ ಪ್ರಸಂಗಗಳು— ಇವನ್ನು ರಹಸ್ಯವಾಗಿ ಇಟ್ಟದ್ದು ಜಾಣತನ ಎಂದು ಹೇಳಿದ್ದು ಲೌಕಿಕ ವ್ಯವ-ಹಾರ. ಇದರಲ್ಲಿ ಪಾರಮಾರ್ಥಿಕ ದೃಷ್ಟಿಯಿಲ್ಲ. ಜೀವನದಲ್ಲಿ ಯಶವು ದೊರೆಯಬೇಕಾದರೆ ಇಷ್ಟು ವ್ಯವಹಾರಚಾತುರ್ಯ ( Intellectual Shrewdness or enlightened self interest ) ಅವಶ್ಯ-

## ೫೫೬. ಕ್ಷಮಾವಾನೇವ ಸರ್ವಂ ಸಾಧಯತಿ

ಕ್ಷಮಾಗುಣವುಳ್ಳವನೇ ಏನೆಲ್ಲವನ್ನೂ ಸಾಧಿಸಬಲ್ಲ. ಇವನಿಗೆ ಶತ್ರು-ಗಳು ಕೂಡ ಮಿತ್ರರಾಗುತ್ತಾರೆ. ಕ್ಷಮೆಗೆ ದೊಡ್ಡ ಮನಸ್ಸು ಬೇಕು. ಸ್ವಾರ್ಥ-ದಷ್ಟೇ ಪರಾರ್ಥಕ್ಕೂ ಮಹತ್ವ ಕೊಡುವ ಮಾನವೀಯತೆ ಬೇಕು. ಈ ವಿಷ-ಯವು ಈ ಹಿಂದೆ ಅಂಶತಃ ಚರ್ಚಿಸಲ್ಪಟ್ಟಿದೆ.

## ೫೫೭. ಆಪದರ್ಥಂ ಧನಂ ರಕ್ಷೇತ್

ಗಳಿಸಿದ ಹಣದಲ್ಲಿ ಮುಂಬರುವ ಆಪತ್ತುಗಳಿಗೆಂದು ಸ್ವಲ್ಪ ಭಾಗ-ವನ್ನು ಸಂಗ್ರಹಿಸಿ ಇಡಬೇಕೆಂದು ಈ ಸೂತ್ರವು ವ್ಯವಹಾರವನ್ನು ಬೋಧಿ-ಸುತ್ತದೆ. ಬಂದದ್ದನ್ನೆಲ್ಲ ತಿಂದು ಹಾಳುಮಾಡುವುದು, ಇಲ್ಲವೆ ಸಿಕ್ಕಾಪಟ್ಟೆ ದುಂದುಗಾರಿಕೆ ಮಾಡಿ, ಯಾವಾಗಲೂ ಬರಿಗೈಯಿಂದ ಇರುವುದು ಜಾಣ-ತನವಲ್ಲ. ಸಂನ್ಯಾಸಿಗಳು ಮಾತ್ರ ಸಂಗ್ರಹ ಮಾಡಕೂಡದು. ಆದ್ದರಿಂದ ಪ್ರಾಪಂಚಿಕರಿಗೆ ಆಪದ್ಧನವು ಬೇಕೇಬೇಕು. ಈ ವಿಷಯಕ್ಕೆ ಮನುಸ್ಮೃತಿ-ಯಲ್ಲಿ—

> ಆಪದರ್ಥಂ ಧನಂ ರಕ್ಷೇತ್ ದಾರಾನ್ರಕ್ಷೇತ್ ಧನೈರಪಿ ।
> ಆತ್ಮಾನಂ ಸತತಂ ರಕ್ಷೇತ್ ದಾರೈರಪಿ ಧನೈರಪಿ ॥

ವಿಪತ್ತುಗಳನ್ನು ದಾಟಬೇಕಾದರೆ ಹಣವು ಬೇಕು. ಆದಕ್ಕಾಗಿ ಧನ-ಸಂಗ್ರಹ ಮಾಡಬೇಕು. ಸ್ತ್ರೀಯರ ಮರ್ಯಾದೆಯು ಹಣಕ್ಕಿಂತಲೂ ಹೆಚ್ಚಿನ-ದಾದುದರಿಂದ ಹಣ ಹೋದರೂ ಅಡ್ಡಿಯಿಲ್ಲ. ಅದನ್ನು ರಕ್ಷಿಸಬೇಕು. ಆತ್ಮ-ಹಿತ ಅರ್ಥಾತ್ ಆತ್ಮೋದ್ಧಾರಕ್ಕೆ ಸ್ತ್ರೀ ಅಥವಾ ಧನದಿಂದ ಬಾಧೆಯಾಗು-ವಂತಿದ್ದರೆ, ಅವನ್ನು ತ್ಯಾಗಮಾಡಿಯಾದರೂ ಪಾರಮಾರ್ಥ ಸಾಧಿಸಬೇಕು ಎಂದು ಉಪದೇಶಿಸಲಾಗಿದೆ.

## ೫೫೮. ಸಾಹಸವತಾಂ ಕರ್ತವ್ಯಂ ಪ್ರಿಯಮ್

ಸಾಹಸೀ ಜನರಿಗೆ ಕರ್ತವ್ಯವು ಪ್ರಿಯವಾಗಿರುತ್ತದೆ. ಕಾರ್ಯಗಳನ್ನು ಕೈಕೊಳ್ಳುವುದು ಮುಗಿಯುವ ವರೆಗೆ ಬೆನ್ನುಬಿಡದೆ ಪ್ರಯತ್ನಿಸಿ, ಅವು-ಗಳನ್ನು ನೆರವೇರಿಸುವುದು. ಈ ಗುಣದಿಂದಾಗಿಯೇ ಜನರಿಗೆ ಸಾಹಸಿಗಳೆಂದು ಕರೆಯಲಾಗುತ್ತದೆ. ಅಂತೆಯೇ ಅವರು ಕರ್ತವ್ಯಪ್ರಿಯರು. ಸೋಮಾರಿಗಳು ಇದಕ್ಕೆ ಪೂರ್ಣವಾಗಿ ವಿರುದ್ಧ ಪ್ರವೃತ್ತಿಯವರು.

## ೫೫೯. ಶ್ವಃ ಕಾರ್ಯಂ ಅದ್ಯ ಕುರ್ವೀತ

ನಾಳಿನ ಕೆಲಸವನ್ನು ಇಂದೇ ಮಾಡಬೇಕು. ಇದು ಜೀವನದಲ್ಲಿ ಸಾಫಲ್ಯವನ್ನು ಪಡೆಯಬೇಕೆನ್ನುವ ಪ್ರತಿಯೊಬ್ಬನೂ ಅನುಸರಿಸಬೇಕಾದ ಮಾರ್ಗ. ಕಾರ್ಯವಿಲಂಬವು ಅದನ್ನು ಅಸಾಧ್ಯ ಇಲ್ಲವೆ ಕಷ್ಟಸಾಧ್ಯವನ್ನಾಗಿ ಪರಿವರ್ತಿಸುವುದರಿಂದ ತತ್ಕಾಲ ಮಾಪದ್ದಕ್ಕೆ ನಂತರ ಪಶ್ಚಾತ್ತಾಪವಾಗು-ತ್ತದೆ. ಆದ್ದರಿಂದ ಸೂತ್ರಕಾರನು ನಾಳಿನ ಕೆಲಸವನ್ನು ಇಂದೇ ಮಾಡ-ಬೇಕೆಂದು ಹೇಳಿದ್ದಾನೆ. ಕೆಲಸ ಮುಗಿಸಿ ವಿಶ್ರಾಂತಿಯನ್ನು ಪಡೆಯಬೇಕೇ ಹೊರತು ಮಧ್ಯದಲ್ಲೇ ವಿರಮಿಸಬಾರದು ಎಂಬ ಉಪದೇಶವು ಇದರಲ್ಲಿ ಅಡಕವಾಗಿದೆ.

## ೫೬೦. ಆಪರಾಣ್ಹಿಕಂ ಪೂರ್ವಾಣ್ಹ ಏವ ಕುರ್ವೀತ

ಅಪರಾಣ್ಹ ಎಂದರೆ ಇಳಿಹೊತ್ತಿನಲ್ಲಿ ಮಾಡುವ ಕಾರ್ಯಗಳನ್ನು ಮಧ್ಯಾಹ್ನಕ್ಕೆ ಮೊದಲೇ ಮಾಡಿ ತೀರಿಸಬೇಕು ಎಂದು ಹೇಳುವ ಈ ಸೂತ್ರವು ಹಿಂದಿನ ಸೂತ್ರದ ವಿಚಾರವನ್ನೇ ಬೇರೆ ಶಬ್ದಗಳಲ್ಲಿ ದೃಢಪಡಿಸಿದೆ.

## ೫೬೧. ನ ಸ್ಯಾತ್ ಕೂಟಸಾಕ್ಷೀ

ನ್ಯಾಯಾಲಯದಲ್ಲಿ ಸುಳ್ಳುಸಾಕ್ಷಿ ಹೇಳಬಾರದು. ಸಾಕ್ಷಿಯ ಆಧಾರದ ಮೇಲೆಯೇ ನ್ಯಾಯನಿರ್ಣಯವು ಆಧರಿಸಿದ್ದು, ಅಪರಾಧಿಗೆ ಶಿಕ್ಷೆಯನ್ನು ವಿಧಿಸಲಾಗುತ್ತದೆ. ಚಾಣಕ್ಯನ ಕಾಲದಲ್ಲಿಯಷ್ಟೇ ಅಲ್ಲ, ಈಗಿನ ಕಾನೂನುಗಳ ಪ್ರಕಾರ ಕೂಡ ಸಾಕ್ಷಿಗಳ ಜಬಾನಿಯೇ ಮುಖ್ಯ. ಅವರ ಸುಳ್ಳು ಜಬಾನಿಯ ಆಧಾರದ ಮೇಲೆ ಒಮ್ಮೊಮ್ಮೆ ನಿರಪರಾಧಿಗೆ ಮರಣದಂಡನೆಯು ದೊರೆಯಬಹುದು. ಅಪರಾಧಿಯು ಪಾರಾಗಿ ಹೋಗಬಹುದು.

ಯಾವನಾದರೂ ತಾನು ಕೊಲೆ ಮಾಡಿದ್ದೇನೆ ಎಂದು ಪೋಲೀಸ್ ಕಚೇರಿಗೆ ಹೋಗಿ ಹೇಳಿದರೂ ಅದಕ್ಕೆ ಸಾಕ್ಷಿಯ ಆಧಾರ ಬೇಕು. ಅವನ ಹೇಳಿಕೆಯ ಮೇಲೆಯೇ ನಿರ್ಣಯವಾಗಲಾರದು. ಏಕೆಂದರೆ ನಿಜವಾದ ಆರೋಪಿಯನ್ನು ಪಾರುಮಾಡುವುದಕ್ಕಾಗಿ ಅವನಿಂದ ಸಾಕಷ್ಟು ಹಣ ಪಡೆದು, ಬೇರೆಯವನು ತಾನೇ ಅಪರಾಧಿ ಎಂದು ಹೇಳಿಕೊಳ್ಳುವ ಸಂಭವವೂ ಇರುತ್ತದೆ.

## ೫೬೨. ಕೂಟ ಸಾಕ್ಷಿಣೋ ನರಕೇ ಪತಂತಿ

ಖೊಟ್ಟಿಸಾಕ್ಷಿ ಹೇಳುವವರು ನರಕಕ್ಕೆ ಹೋಗುತ್ತಾರೆ ಎಂಬುದು ಸೂತ್ರಕಾರನ ಅಭಿಪ್ರಾಯ. ನರಕದ ಭಯದಿಂದಲಾದರೂ ಸತ್ಯವನ್ನು ಹೇಳಲಿ ಎಂಬ ಉದ್ದೇಶವು ಇಲ್ಲಿ ಇದ್ದಿರಬಹುದು. ಏನೇ ಆದರೂ ಸುಳ್ಳು ಸಾಕ್ಷಿ ಹೇಳುವುದು ಅಧರ್ಮವಾದ್ದರಿಂದ ಅದು ಪಾಪ. ಅದಕ್ಕೆ ತಕ್ಕ ಪ್ರತಿಫಲವು ಭಗವಂತನ ಕೋರ್ಟಿನಲ್ಲಿ ಇಂದಿಲ್ಲ ನಾಳೆ ದೊರಕಿಯೇ ತೀರುತ್ತದೆ.

## ೫೬೩. ಪ್ರಚ್ಛನ್ನ ಪಾಪಾನಾಂ ಸಾಕ್ಷಿಣೋ ಮಹಾಭೂತಾನಿ

ಯಾರಿಗೂ ಗೊತ್ತಿಲ್ಲದಂತೆ ಪಾಪಕೃತ್ಯಗಳನ್ನು ಮಾಡಿದರೆ, ಶಾಸನ-

ವಾಗುವುದು ಹೇಗೆ? ಅವರ ಕೃತಿಗೆ ಸಾಕ್ಷಿಗಳೇ ದೊರೆಯುವುದಿಲ್ಲವಲ್ಲ ಎಂದು 'ಯಾರಾದರೂ ಕೇಳಬಹುದೆಂದು ಸೂತ್ರಕಾರನು ಗುಪ್ತರೀತಿಯಲ್ಲಿ ಪಾಪಮಾಡಿದವರಿಗೆ ಪೃಥ್ವಿ, ಜಲ, ವಾಯು, ಸೂರ್ಯ–ಚಂದ್ರಾದಿ ತೇಜೋ ಮಂಡಲ ಹಾಗು ಆಕಾಶ—ಈ ಪಂಚಮಹಾಭೂತಗಳೇ ಸಾಕ್ಷಿ. ಅರ್ಥಾತ್ ಪ್ರತಿಯೊಂದು ಮಹಾಭೂತದ ಮೇಲೆ ಒಂದು ದೇವತೆಯ ಅಧಿಷ್ಠಾನ-ವಿರುತ್ತದೆ. ಅವಕ್ಕೆ ಅಧಿಷ್ಠಾತ್ರೀ ದೇವತೆಯೆಂದು ಶಾಸ್ತ್ರದಲ್ಲಿ ಹೆಸರು. ಸರ್ವವ್ಯಾಪಿಯಾದ ಈ ದೇವತೆಗಳು ಗುಪ್ತಪಾಪಗಳನ್ನು ನೋಡಿರುವುದ-ರಿಂದ ಮಾನವರ ಕೋರ್ಟಿನಲ್ಲಿ ಶಿಕ್ಷೆಯಿಂದ ಪಾರಾದರೂ, ದೈವೀಕೋರ್ಟಿ-ನಲ್ಲಿ ಶಿಕ್ಷೆಯಾಗಲೇಬೇಕು. ಇದನ್ನೇ ಕರ್ಮಫಲದ ರೂಪದಲ್ಲಿ ಭೋಗಿಸ-ಲಾಗುತ್ತದೆ.

## ೫೭೪. ಆತ್ಮನಃ ಪಾಪಂ ಆತ್ಮೈವ ಪ್ರಕಾಶಯತಿ

ಈ ಸೂತ್ರ ಹಾಗು ಮುಂದಿನ ಎರಡರಲ್ಲಿ ಮಾನಸಶಾಸ್ತ್ರಕ್ಕೆ ಸಂಬಂಧ-ಪಟ್ಟ ವಿಷಯಗಳನ್ನು ಚಾಣಕ್ಯನು ಚರ್ಚಿಸುತ್ತಾನೆ. ಪಾಪಿಯು ತನ್ನ ಪಾಪವನ್ನು ತಾನೇ ಪ್ರಕಟಿಸುತ್ತಾನೆ ಎಂದು ಇಲ್ಲಿ ಹೇಳಿದ್ದು ವಿಚಿತ್ರವೆನಿಸ-ಬಹುದು. ಕೋರ್ಟುಗಳಲ್ಲಿ ದೇವರಾಣೆ ಮಾಡಿಸಿದರೂ ಸುಳ್ಳುಹೇಳುವ ಅಥವಾ ತಮ್ಮ ತಪ್ಪನ್ನು ಎಂದೂ ಒಪ್ಪಿಕೊಳ್ಳದ ಅಪರಾಧಿಗಳು ತಮ್ಮ ಪಾಪವನ್ನು ತಾವೇ ಪ್ರಕಟಿಸುವುದು ಹೇಗೆ ಸಾಧ್ಯ? ಎಂದು ಎನಿಸುವುದು ಸಹಜ. ಆದರೆ ಪಾಪ ಮಾಡಿದವನು ಎಷ್ಟೇ ಬಚ್ಚಿಟ್ಟುಕೊಂಡರೂ, ಸೂಕ್ಷ್ಮ-ವಾಗಿ ಪರಿಶೀಲಿಸಿದಾಗ ಅವನ ಪ್ರತಿಯೊಂದು ಮಾತು, ಕೃತಿ ಇತ್ಯಾದಿಗಳಲ್ಲಿ ತಪ್ಪಿತಸ್ಥರ ಲಕ್ಷಣಗಳು ಕಂಡುಬರುತ್ತವೆ ಎಂಬುದೇ ಇಲ್ಲಿ ಸೂತ್ರಕಾರನ ಅಭಿಪ್ರಾಯ. ಹಲವು ಸಲ ನಿದ್ರೆಯಲ್ಲಿ ಬಡಬಡಿಸುತ್ತ, ಹಾಗೆಯೇ ಒಮ್ಮೊಮ್ಮೆ ಪಾಪದ ಪ್ರತಿಫಲವನ್ನು ಭೋಗಿಸುತ್ತ ಕಂಗಾಲಾದಾಗ ತನ್ನ ಪಾಪದಿಂದಲೇ ಹೀಗಾಯಿತೆಂದು ಅಸಹಾಯನಾಗಿ ತಪ್ಪೊಪ್ಪಿಕೊಳ್ಳುವ ಪ್ರಸಂಗಗಳು ಹಲವು ದೊರೆಯಬಹುದು. ಇದೂ ಅಲ್ಲದೆ—

## ೫೬೫. ವ್ಯವಹಾರೇ ಅಂತರ್ಗತಂ ಆಚಾರಃ ಸೂಚಯತಿ

ಪಾಪಿಯ ನಿತ್ಯವ್ಯವಹಾರದಲ್ಲಿ ಕೂಡ ಅವನ ಆಚಾರವು ಅಂತರ್ಗತ ಭಾವನೆ ಹಾಗು ಗುಪ್ತ ಕೃತಿಗಳನ್ನು ಪ್ರಕಟಸುತ್ತದೆ. ತಪ್ಪನ್ನು ಬಚ್ಚಿಟ್ಟು-ಕೊಳ್ಳುವ ಪ್ರಯತ್ನವು ಹೆಜ್ಜೆ ಹೆಜ್ಜೆಗೆ ಕಂಡುಬರುತ್ತದೆ. ಎಲ್ಲಿ ತನ್ನ ಪಾಪ-ಗಳು ಹೊರಬೀಳುತ್ತವೆಯೋ ಎಂಬ ಭಯದಿಂದ ಎಷ್ಟು ಮುಚ್ಚಿಕೊಂಡರೂ ಚತುರಮತಿಗಳಿಗೆ ಅವು ತಿಳಿಯದೇ ಉಳಿಯಲಾರವು. ಧ್ವನಿಯಲ್ಲಿ ಕೂಡ ಹೃದ್ಗತಭಾವವು ಪ್ರಕಟವಾಗುತ್ತದೆ.

## ೫೬೬. ಆಕಾರ ಸಂವರಣಂ ದೇವಾನಾಮಪ್ಯಶಕ್ಯಂ

ಆಕಾರವನ್ನು ಬಚ್ಚಿಡುವುದು ದೇವತೆಗಳಿಗೆ ಕೂಡ ಅಸಾಧ್ಯ. ಕೊಲೆ ಮಾಡಿದವನ ಆಕಾರ ಹಾಗು ಚೇಷ್ಟೆಗಳು ಬದಲಾಗಲೇಬೇಕು. ಅಂತೆಯೇ ಪೋಲೀಸ ಅಧಿಕಾರಿಗಳು ಮನುಷ್ಯರ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿ, ಅವರು ತಪ್ಪಿತಸ್ಥರೆಂದು ಕಂಡುಹಿಡಿಯುತ್ತಾರೆ. ಅರ್ಥಶಾಸ್ತ್ರದಲ್ಲಿ ಆಕಾರ, ಇಂಗಿತ, ಕೃತಿ ಹಾಗು ಜೀವನಪದ್ಧತಿಯಲ್ಲಿಯ ಬದಲಾವಣೆ—ಇತ್ಯಾದಿಗಳ ಮೂಲಕ ತಪ್ಪಿತಸ್ಥರನ್ನು ಗುರುತಿಸುವುದನ್ನು ವಿವರಿಸಲಾಗಿದೆ. ( ಇದೇ ಲೇಖಕರ ಈಗಾಗಲೇ ಉಲ್ಲೇಖಿಸಿದ ಗ್ರಂಥದ ಒಂಬತ್ತನೆಯ ಪ್ರಕರಣದಲ್ಲಿ ಈ ವಿಷಯವನ್ನು ವಿವರವಾಗಿ ಚರ್ಚಿಸಲಾಗಿದೆ. ) ಚಾಣಕ್ಯನ ಈ ವಿಷಯದ ವಿವರಣೆಯು ಅವನ ಬುದ್ಧಿಸಾಮರ್ಥ್ಯವನ್ನು, ಮನುಷ್ಯರ ಸ್ವಭಾವ ಪರೀಕ್ಷೆಯಲ್ಲಿ ಅವನಿಗಿದ್ದ ನೈಪುಣ್ಯವನ್ನು ಪ್ರಕಟಿಸುತ್ತದೆ.

## ೫೬೭. ಆರ್ಯಃ ಸ್ವಮಿವ ಪರಂ ಮನ್ಯತೇ

ಆರ್ಯ ಶಬ್ದದ ವಿವರಣೆಯು ಅನೇಕ ಸಲ ಬಂದಿದೆ. ವಿವೇಕದಿಂದ ಸನ್ಮಾರ್ಗದಲ್ಲಿ ನಡೆಯುವ ಆರ್ಯನು ತನ್ನಂತೆಯೇ ಪರರನ್ನು ಬಗೆಯು-

ತ್ತಾನೆ.' 'ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಣವಕ್ಕು' ಎಂದು ಸರ್ವಜ್ಞನು ಹೇಳಿದ್ದು ಇಲ್ಲಿ ನೆನಪಾಗುತ್ತದೆ. ತನಗೆ ಪ್ರತಿಕೂಲವೆನಿಸಿದ್ದನ್ನು ಬೇರೊಬ್ಬರ ಮೇಲೆ ಹೇರದಿರುವುದೇ ಧರ್ಮ ಎಂಬ ವಿಷಯವು ಈ ಸೂತ್ರ-ಗಳ ಆದಿಯಲ್ಲಿಯೇ ಬಂದಿದೆ. ನಮಗೆ ಯಾರಾದರೂ ಸೂಜಿಯಿಂದ ಚುಚ್ಚಿ-ದರೆ ಪೀಡೆಯೆನಿಸುವಾಗ, ನಾವೂ ಇನ್ನೊಬ್ಬರಿಗೆ ಸೂಜಿಯಿಂದ ಚುಚ್ಚ-ದಿರುವುದೇ ಧರ್ಮ ಎಂದು ಬಹು ಸುಂದರವಾಗಿ, ಸುಲಭವಾಗಿ ಅಲ್ಲಿ ಬೋಧಿಸಲಾಗಿದೆ. ಆದ್ದರಿಂದ ತನ್ನ ಶರೀರ, ಆಸ್ತಿ, ಮಾನಾಪಮಾನ, ಸುಖ-ದುಃಖ—ಇವೆಲ್ಲವುಗಳಿಗೂ ಎಷ್ಟು ಮಹತ್ವವಿದೆಯೋ ಅಷ್ಟೇ ಹೆರವರ ವಿಷಯಕ್ಕೂ ಭಾವನೆಯನ್ನಿಟ್ಟುಕೊಳ್ಳುವುದು ಮಾನಸ್ತೋತ್ತಮರ ಲಕ್ಷಣ. ಆದ್ದರಿಂದಲೇ—

## ೫೭೮. ಆಶ್ರಿತ ದುಃಖಂ ಆತ್ಮನಃ ಇವ ಮನ್ಯತೇ ಸಾಧುಃ

ಸಾಧುಜನರು ತಮ್ಮನ್ನು ಆಶ್ರಯಿಸಿ ಬಂದ ಜನರ ದುಃಖವು ತಮ್ಮದೇ ದುಃಖವೆಂದು ಬಗೆದು, ಸಹಕಾರ ಹಾಗು ಪರೋಪಕಾರ ಭಾವನೆಯಿಂದ, ಸ್ವಹಿತಕ್ಕಾಗಿ ಪ್ರಯತ್ನಿಸುವಂತೆಯೇ ಪರಹಿತಕ್ಕಾಗಿಯೂ ಯತ್ನಿಸುತ್ತಾರೆ ಎಂದು ಈ ಸೂತ್ರವು ತಿಳಿಸುತ್ತದೆ. ಅರ್ಥಾತ್ ಪರರ ದುಃಖವನ್ನು ನಿವಾರಿ-ಸಲು ಶತಪ್ರಯತ್ನ ಮಾಡುತ್ತಾರೆ.

ಸ್ವಾರ್ಥ, ಪರಾರ್ಥ ಹಾಗು ಪರಮಾರ್ಥ ಎಂಬ ಮೂರು ಶಬ್ದಗಳ-ಲ್ಲಿಯ ತಾರತಮ್ಯವನ್ನು ತಿಳಿದುಕೊಂಡು ಲೋಕದಲ್ಲಿ ವ್ಯವಹರಿಸಬೇಕು ಹಾಗು ಆತ್ಮೋದ್ಧಾರಕ್ಕಾಗಿ ಪ್ರಯತ್ನಿಸಬೇಕೆಂದು ಶಾಸ್ತ್ರವಚನವಿದೆ. ಹೆರವರನ್ನು ಲೆಕ್ಕಿಸದೆ, ಕೇವಲ ತನ್ನ ಸುಖಕ್ಕಾಗಿ ಏನೆಲ್ಲ ಮಾಡುವುದು ಸ್ವಾರ್ಥ. ಪರರ ಹಿತಕ್ಕಾಗಿ ತನ್ನ ಜೀವನವನ್ನು ಮುಡುಪಾಗಿಟ್ಟು ಆ ದಿಶೆಯಲ್ಲಿ ಪ್ರಯತ್ನಿ-ಸುವುದು ಪರಾರ್ಥ. ಪುನರ್ಜನ್ಮ ಬೇಡವೆಂದು ಅನಾಸಕ್ತಿಯಿಂದ ಕರ್ಮ ಮಾಡಿ, ಭಗವದುಪಾಸನೆ ಹಾಗು ಆತ್ಮಸಾಕ್ಷಾತ್ಕಾರದಿಂದ ಮುಕ್ತಿಯನ್ನು

ಪಡೆಯುವುದು ಪರಮಾರ್ಥ. ಪ್ರಸ್ತುತ ಸೂತ್ರವು ಪರಾರ್ಥವನ್ನು ಬೋಧಿಸುತ್ತದೆ.

## ೫೬೯. ಸ್ವಶರೀರಮಪಿ ಪರಶರೀರಂ ಮನ್ಯತೇ ಸಾಧುಃ

ಪರೋಪಕಾರವೇ ತಮ್ಮ ಜೀವನದ ಗುರಿ ಎಂದು ತಿಳಿದುಕೊಂಡ ಸಾಧುಗಳಲ್ಲಿ, ತಮ್ಮ ಶರೀರವು ಕೂಡ ಪರಹಿತಕ್ಕಾಗಿಯೇ ಇದೆ ಎಂದು ಬಗೆಯುವ ಅಪೂರ್ವ ವ್ಯಕ್ತಿತ್ವವನ್ನು ಈ ಸೂತ್ರದಲ್ಲಿ ಬಣ್ಣಿಸಲಾಗಿದೆ. ಹೆಂಡಿರು, ಮಕ್ಕಳು, ಆಸ್ತಿ–ಪಾಸ್ತಿಗಳ ಮೇಲಿನ ಮಮತ್ವ ಭಾವನೆಯನ್ನು ತ್ಯಜಿಸುವವರೇ ದುರ್ಲಭವಿದ್ದಾಗ, ಈ ಮಹಾಪುರುಷನು ತನ್ನ ಶರೀರದ ಮೇಲಿನ ಮೋಹವನ್ನು ಕೂಡ ತ್ಯಜಿಸಿ, ಲೋಕಕಲ್ಯಾಣಕ್ಕಾಗಿ ಪರಿಶ್ರಮಿಸುವುದು ಆದರ್ಶಪ್ರಾಯವಾದದ್ದು. ಇಂಥ ವ್ಯಕ್ತಿತ್ವವು ಅಪರೂಪಕ್ಕಾಗಿ ಮಾತ್ರ ದೊರೆಯುತ್ತದೆ. ಇತಿಹಾಸ, ಪುರಾಣಗಳಲ್ಲಿ ಶಿಬಿ ಚಕ್ರವರ್ತಿಯಂತಹರ ಆಖ್ಯಾನಗಳು ಪರೋಪಕಾರಕ್ಕಾಗಿ ಸರ್ವಸ್ವವನ್ನು ( ಶರೀರವನ್ನು ಕೂಡ ) ತ್ಯಾಗಮಾಡಿದ್ದಕ್ಕೆ ದೃಷ್ಟಾಂತರೂಪವಾಗಿ ನಿಂತಿವೆ.

ಸ್ವಾರ್ಥವಿಲ್ಲದವನಲ್ಲಿ ದುಷ್ಟವಿಚಾರಗಳು ಸ್ವಪ್ನಗಳಲ್ಲಿ ಕೂಡ ಇರಲಾರವು. ಲೋಕಕಲ್ಯಾಣವೇ ಅವನ ಧ್ಯೇಯ. ಆದ್ದರಿಂದ ಅವನ ಕಲ್ಯಾಣವೂ ಅನಾಯಾಸವಾಗಿ ಸಾಧಿಸುತ್ತದೆ. ' ಲೋಕಾಃ ಸಮಸ್ತಾಃ ಸುಖಿನೋ ಭವಂತು ' ಎಂಬ ಪ್ರಾರ್ಥನೆಯಲ್ಲಿ ' ಸಮಸ್ತಾ ' ಎಂಬ ಶಬ್ದದಲ್ಲಿ ಪ್ರಾರ್ಥಿಸುವವನ ಹಿತವೂ ಅಡಕವಾಗಿರುತ್ತದೆ. ಈ ತತ್ವವನ್ನರಿತು ಮನುಷ್ಯರು ಯಾವಾಗಲೂ ಒಳ್ಳೆಯದನ್ನೇ ಚಿಂತಿಸಿ, ಅದಕ್ಕನುಗುಣವಾಗಿ ಆಚರಿಸಿದರೆ, ಅವರ ಕಲ್ಯಾಣವು ಕಟ್ಟಿಟ್ಟದ್ದು. ಈ ವಿಷಯದಲ್ಲಿ ಕಾಶ್ಮೀರದ ವಿಶ್ವವಿಖ್ಯಾತನೂ, ವಿದ್ವದ್ವರೇಣ್ಯನೂ, ಪರಮ ಶಿವಭಕ್ತನೂ ಆದ ಆಚಾರ್ಯ ಅಭಿನವಗುಪ್ತನು ಆನಂದವರ್ಧನನ ' ಧ್ವನ್ಯಾಲೋಕ 'ಕ್ಕೆ ಬರೆದ ' ಲೋಚನ 'ವೆಂಬ ವ್ಯಾಖ್ಯಾನದ ಕೊನೆಗೆ ಉಪದೇಶಿಸಿದ್ದನ್ನು ಇಲ್ಲಿ ಸ್ಮರಿಸುವುದು ಔಚಿತ್ಯಪೂರ್ಣವೆನಿಸುತ್ತದೆ.

**ವಸ್ತುತಃ ಶಿವಮಯೇ ಹೃದಿ ಸ್ಫುಟಂ ಸರ್ವತಃ**
**ಶಿವಮಯಂ ವಿರಾಜತೇ ।**
**ನಾ ಶಿವಂ ಕ್ವಚನ ಕಸ್ಯಚಿದ್ವಚಃ ತೇನ ವಃ ಶಿವಮಯೀ**
**ದಶಾಭವೇತ್ ॥**

ನಿಜವಾಗಿಯೂ ನಮ್ಮ ಹೃದಯವು ಶಿವಮಯವಾಗಿದ್ದರೆ, ಅರ್ಥಾತ್ ಒಳ್ಳೆಯ ವಿಚಾರಗಳಿಂದೊಡಗೂಡಿ, ಪರವಸ್ತುವಿನ ಧ್ಯಾನದಲ್ಲಿ ತತ್ಪರವಾಗಿದ್ದರೆ, ನಮ್ಮ ಸುತ್ತಮುತ್ತಲೆಲ್ಲ ಕಲ್ಯಾಣಮಯವಾದ ವಾತಾವರಣವೇ ನಿರ್ಮಾಣವಾಗುತ್ತದೆ. ಆದ್ದರಿಂದ ತಮ್ಮ ಕಲ್ಯಾಣವನ್ನು ಬಯಸುವವರು, ಮಾತು ಹಾಗು ಕೃತಿಗಳಲ್ಲಿ ದುಷ್ಟ (ಅಶಿವ) ಪ್ರವೃತ್ತಿಯನ್ನು ತೊರೆದು, ಶಿವಮಯವಾದ ಆನಂದವನ್ನು ಅನುಭವಿಸಲು, ಪುಣ್ಯದಿಂದ ಲಭಿಸಿದ ಈ ಮನುಷ್ಯದೇಹವು ನಾಶವಾಗುವುದಕ್ಕಿಂತ ಮುನ್ನ, ಪ್ರಯತ್ನಿಸಿ ಕೃತಾರ್ಥರಾಗಬೇಕು. ಈ ಆದರ್ಶವನ್ನು ಎಲ್ಲರೂ ಪಾಲಿಸಬೇಕೆಂಬುದೇ ಸೂತ್ರಕಾರನ ಅಭಿಪ್ರಾಯವಿದ್ದಿರಲು ಸಾಕು.

— **ಸಂಪೂರ್ಣ** —

# ಚಾಣಕ್ಯನೀತಿ : ಅಕಾರಾದಿ ಸೂಚಿ

## ಅ

## ಆ

## ಇ



## ಉ



## ಋ



## ಏ

ತ

## ದ

## ಧ



## ನ

## ಬ



## ಭ



## ಮ

ಯ

ರ

ಲ



ವ

ಷ



ಸ

ಹ



ಕ್ಷ